# ದಾದಾಭಾಯಿ ನವರೋಜಿ

## (ಭಾರತೀಯ ಮಹಾಕುಲವೃದ್ಧ)

ಮೂಲ ಲೇಖಕ :

**ಸರ್. ಆರ್. ಪಿ. ಮಸಾನಿ**

ಅನುವಾದಕ :

**ಕೂಡಲಿ ಚಿದಂಬರಂ**

ಮಹಾತ್ಮಾ ಗಾಂಧಿಯವರ ಮುನ್ನುಡಿಯೊಡನೆ



ಮೈಸೂರು

ಕಾವ್ಯಾಲಯ : : ಪ್ರಕಾಶಕರು

ಮೊದಲನೆಯ ಮುದ್ರಣ : ೧೯೫೭



This is an abridged Kannada version of 'Dadabhai Naoroji' by R. P. Masani and it is published by kind permission of George Allen & Unwin Ltd., London.

Published by Kavyalaya Publishers
at Mysore

ಬೆಲೆ : ರೂ. ೨·೫೦ (೪·೦೦)

ಮುದ್ರಕರು :
ಜಿ. ಎಚ್. ರಾಮರಾವ್, ಬಿ.ಎಸ್‌ಸಿ.,
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್,
ಮೈಸೂರು.

# ಮುನ್ನುಡಿ

೧೮೮೮ರ ಸೆಪ್ಟೆಂಬರ್ ೪ರಲ್ಲಿ ನಾನು ಬೊಂಬಾಯಿಂದ ಲಂಡನ್ನಿಗೆ ಹಡಗಿನಲ್ಲಿ ಪ್ರಯಾಣಮಾಡಿದೆ. ನನ್ನ ಹತ್ತಿರ ಮೂರು ಪರಿಚಯ ಪತ್ರಗಳಿದ್ದುವು. ಅವುಗಳಲ್ಲಿ ಭಾರತೀಯ ಮಹಾಕುಲವೃದ್ಧ ದಾದಾಭಾಯಿಗೆ ಬರೆದ ಪತ್ರ ಬಹು ಅಮೂಲ್ಯವಾದದ್ದಾಗಿತ್ತು. ಬರೆದವರು ಕುಟುಂಬದ ಮಿತ್ರರಾದ ಮರಾಠಿ ಡಾಕ್ಟರೊಬ್ಬರು. ಜಿ. ಓ. ಎಮ್. ತಮ್ಮನ್ನು ಸ್ವತಃ ಅರಿತಿರಲಿಲ್ಲವೆಂದು ಮಾನ್ಯ ಡಾಕ್ಟರು ತಿಳಿಸಿದರು. ತಮಗೆ ಆ ವೃದ್ಧ ಮಹಾಶಯರ ದರ್ಶನ ಕೂಡ ಆಗಿಲ್ಲವೆಂದು ಹೇಳಿದರು. "ಆದರೆ, ಅದರಿಂದ ಏನು? ಅವರನ್ನು ಅರಿಯದವರೇ ಇಲ್ಲ. ಎಲ್ಲರೂ ಅವರನ್ನು ಇಂಡಿಯದ ಪುತ್ರ ಶ್ರೇಷ್ಠರೆಂದೂ ವೀರ ನಾಯಕರೆಂದೂ ಆರಾಧಿಸುತ್ತಾರೆ. ನಮಗಾಗಿ ಅವರು ದೇಶಬಿಟ್ಟು ಹೋಗಿದಾರೆ. ಅವರು ಇಂಡಿಯಾಕ್ಕೆ ಸಲ್ಲಿಸಿರುವ ಸೇವೆಯಿಂದಲೇ ನನಗೆ ಅವರ ಪರಿಚಯ. ನನಗೆ ಸ್ವತ: ಅವರ ಪರಿಚಯವಿದ್ದಿದ್ದರೆ ಎಷ್ಟು ಪ್ರಯೋಜನವಾಗುತ್ತಿತ್ತೋ ಅಷ್ಟೇ ಈ ಪತ್ರದಿಂದಲೂ ಆಗುತ್ತದೆ. ಇದು ನಿನಗೇ ಗೊತ್ತಾಗುತ್ತದೆ. ನಿಜವಾದ ಮಾತು ಹೇಳಬೇಕಾದರೆ, ನಿನ್ನನ್ನು ಅವರಿಗೆ ಪರಿಚಯ ಮಾಡಿಸಬೇಕಾದ್ದಿಲ್ಲ. ನೀನು ಭಾರತೀಯನಾಗಿರುವುದೇ ತಕ್ಕ ಪರಿಚಯವಿದ್ದಂತೆ. ನೀನಿನ್ನೂ ಚಿಕ್ಕವನು, ದೇಶ ತಿರುಗಿದವನಲ್ಲ, ಭೀರುಸ್ವಭಾವದವನು. ಈ ಕಾಗದ ಇರುವುದರಿಂದ ವೃದ್ಧ ಮಹಾಶಯರೆಡೆಗೆ ಹೋಗಲು ಸಾಕಷ್ಟು ಧೈರ್ಯ ಬರುತ್ತದೆ. ನಿನ್ನ ಕೆಲಸಗಳೆಲ್ಲ ಸಲೀಸಾಗಿ ಆಗುತ್ತವೆ"—ಎಂದು ಡಾಕ್ಟರು ಹೇಳಿದರು. ಹಾಗೆಯೇ ಆಯಿತು. ಭಾರತೀಯ ವಿದ್ಯಾರ್ಥಿಗಳು ದಿನದ ಯಾವ ಗಳಿಗೆಯಲ್ಲಿ ಬೇಕಾದರೂ ಜಿ. ಓ. ಎಂ. ಬಳಿಗೆ ಸಲೀಸಾಗಿ ಹೋಗುತ್ತಿದ್ದರು. ಲಂಡನ್ನಿಗೆ ಹೋದ ಕೂಡಲೆ ನನಗೆ ಇದರ ಅರಿವಾಯಿತು. ಅವರ ಊರು ಜಾತಿ ಯಾವುದೇ ಇರಲಿ, ಅವರೆಲ್ಲರಿಗೂ ಆತನು ತಂದೆಯು ಸಮಾನವಾಗಿದ್ದರು. ಅವರ ಕಷ್ಟಸಮಯಗಳಲ್ಲಿ ಬುದ್ಧಿವಾದ ಹೇಳಿ ಅವರಿಗೆ ಮಾರ್ಗದರ್ಶನ ನೀಡುತ್ತಿದ್ದರು. ನಾನು ಯಾವಾಗಲೂ ವೀರರನ್ನು ಆರಾಧಿಸುವವನು. ದಾದಾ

ಭಾಯಿ ನನಗೆ ನಿಜವಾದ ದಾದಾ (ತಾತಾ) ಆದರು. ನಮ್ಮ ಸಂಬಂಧ ದಕ್ಷಿಣ ಆಫ್ರಿಕದಲ್ಲಿ ತೀರ ನಿಕಟವಾಗಿ ಬೆಳೆಯಿತು. ಅಲ್ಲಿ ಅವರು ನನಗೆ ಯಾವಾಗಲೂ ಸಲಹೆ ಕೊಡುತ್ತಿದ್ದರು; ಅವರಿಂದ ಸ್ಫೂರ್ತಿಗೊಳ್ಳುತ್ತಿದ್ದೆ. ದಕ್ಷಿಣ ಆಫ್ರಿಕದ ಭಾರತೀಯರ ಸ್ಥಿತಿಯನ್ನು ವಿವರಿಸಿ ಅವರಿಗೆ ನಾನು ಪತ್ರ ಬರೆಯದ ವಾರ ಅಪರೂಪ, ನಾನು ಅವರಿಂದ ಉತ್ತರ ನಿರೀಕ್ಷಿಸಿಕೊಂಡಾಗ, ನನಗೆ ಚೆನ್ನಾಗಿ ಜ್ಞಾಪಕವಿದೆ, ಅದು ತಪ್ಪದೇ ಬರುತ್ತಿತ್ತು. ಪತ್ರ ಅವರ ಸ್ವಹಸ್ತಾಕ್ಷರದಲ್ಲಿ, ಅವರ ಎಸೆಯಿಲ್ಲದ ಸರಳ ಶೈಲಿಯಲ್ಲಿ ಇರುತ್ತಿತ್ತು. ಅವರಿಂದ ನನಗೆ ಎಂದೂ ಟೈಪಾದ ಪತ್ರ ಬಂದದ್ದಿಲ್ಲ. ನಾನು ದಕ್ಷಿಣ ಆಫ್ರಿಕದಿಂದ ಇಂಗ್ಲೆಂಡಿಗೆ ಹೋದಾಗ ಅವರ ಕಚೇರಿಯನ್ನು ನೋಡಿದೆ. ಅದು ಸುಮಾರು ಎಂಟು ಅಡಿ ಉದ್ದ ಆರಡಿ ಅಗಲವಿದ್ದ ಅಟ್ಟದ ಕೋಣೆ. ಅಲ್ಲಿ ಎರಡನೆಯ ಕುರ್ಚಿಗೆ ಸ್ಥಳವಿರಲಿಲ್ಲ. ಅವರ ಮೇಜು, ಕುರ್ಚಿ, ಕಾಗದ ಪತ್ರಗಳು, ಅವರ ಕೋಣೆಯನ್ನು ತುಂಬಿದ್ದವು. ಕಾಗದಗಳನ್ನು ನಕಲೆತ್ತುವ ಮಸಿಯಲ್ಲಿ ಬರೆದು ಅವರೇ ಅವುಗಳನ್ನು ನಕಲು ಎತ್ತುತ್ತಿದ್ದರು.

ಇಷ್ಟು ಉದಾರವಾದ, ಸರಳವಾದ ಬದುಕಿನ ಕಥೆಗೆ ನನ್ನ ಮುನ್ನುಡಿಯ ಆವಶ್ಯಕತೆಯಿಲ್ಲ. ಯಾರ ಮುನ್ನುಡಿಯೂ ಬೇಕಾಗಿಲ್ಲ. ಜೀವಂತರಾಗಿದ್ದ ದಾದಾಭಾಯಿ ನನಗೆ ಸ್ಫೂರ್ತಿದಾಯಕರಾಗಿದ್ದಂತೆ, ಈ ಕಥೆ ವಾಚಕನಿಗೆ ಸ್ಫೂರ್ತಿದಾಯಕವಾಗಲಿ !

ಅಕ್ಟೋಬರ್ ೧೯, ೧೯೩೮. ಎಂ. ಕೆ. ಗಾಂಧಿ.

## ಪೀಠಿಕೆ

ದಾದಾಭಾಯಿಯಂತೆ ತುಂಬಿದ ಬಾಳನ್ನು ಬಾಳುವವರು ವಿರಳ. ಇಂಡಿಯಾದಲ್ಲಿ ಬೌದ್ಧಿಕ ಕ ರ‍್ಯಗಳಲ್ಲಿ ದುಡಿಯುವವರೂ ರಾಜಕೀಯ ಚಟುವಟಿಕೆಗಳಲ್ಲಿ ಆಸಕ್ತರಾದವರೂ ದೀರ್ಘಕಾಲ ಬದುಕುವುದು ಅಪರೂಪ. ದಾದಾಭಾಯಿ *ಈ ಸರ್ವಸಾಮಾನ್ಯವಾದ ವಿಧಿಗೆ ಹೊರತಾದವನು.

ಈ ಭಾರತ ಸ್ವರಾಜ್ಯ ಘೋಷಕನು ೧೮೨೫ರಲ್ಲಿ ಬೊಂಬಾಯಲ್ಲಿ ಹುಟ್ಟಿದಾಗ, ದಕ್ಷಿಣ ಅಮೆರಿಕದ ಕೆಲವು ಸಂಸ್ಥಾನಗಳು ಆಗತಾನೆ ಸ್ವತಂತ್ರ ರಾಷ್ಟ್ರಗಳಾಗಿ ಮಾನ್ಯವಾಗಿದ್ದುವು; ಹಳೆಯ ಪ್ರಪಂಚದ ಹೆಚ್ಚು ಕಡಿಮೆಗಳನ್ನು ಸರಿಪಡಿಸಲು ಹೊಸ ಪ್ರಪಂಚ (New World) ಉದಯವಾಗಿತ್ತು; ಇಂಗ್ಲೆಂಡಿನಲ್ಲಿ ನಾಲ್ಕನೆಯ ಜಾರ್ಜ್ ಆಳುತ್ತಿದ್ದನು ; ಇಂಡಿಯಾದಲ್ಲಿ, ಈಸ್ಟ್ ಇಂಡಿಯಾ ಕಂಪೆನಿ ವರ್ತಕ ಸಂಸ್ಥೆಯಾಗಿದ್ದರೂ, ಆಡಳಿತ ನಡಸುತ್ತಿತ್ತು; ಹೊಸದಾಗಿ ಹುಟ್ಟಿದ ಈ ಶಿಶುವಿಗೆ ಹಲ್ಲು ಹುಟ್ಟುತ್ತಿದ್ದಾಗ, ಬೊಂಬಾಯಿನ ಗವರ್ನರ್ ಮೌಂಟ್‌ಸ್ಟುಅರ್ಟ್ ಎಲ್ಫಿನ್‌ಸ್ಟನ್ ತನ್ನ ಶಿಕ್ಷಣ ನೀತಿಯ ಪರಿಣಾಮವೇನಾಗಬಹುದು, ಎಂದು ಜನ ತಮ್ಮ ಆಡಳಿತವನ್ನು ತಾವೇ ನೋಡಿಕೊಳ್ಳಲು ಸಮರ್ಥರಾಗಿ ಅವರ ಕೈಗೆ—ತಾನಾಗಿಯೋ ಅಥವಾ ಬಲಾತ್ಕಾರದಿಂದಲೋ—ಅಧಿಕಾರ ವರ್ಗಾವಣೆಯಾಗಬಹುದು ಎಂದು ಯೋಚಿಸುತ್ತಿದ್ದನು. ದಾದಾಭಾಯಿ ಒಂಭತ್ತು ವರ್ಷದ ಬಾಲಕನಾಗಿ ಇಂಗ್ಲಿಷ್ ಅಕ್ಷರ ಮಾಲೆಯನ್ನು ಕಲಿಯುತ್ತಿದ್ದಾಗ, ಮೆಕಾಲೆ ಇಂಗ್ಲಿಷ್ ಶಿಕ್ಷಣದ ಪರವಾಗಿ ಪ್ರಸಿದ್ಧವಾದ ತನ್ನ ವರದಿಯನ್ನು ಬರೆಯುತ್ತಿದ್ದನು. ಆ ವರದಿ ಮುಂದೆ ಇಂಡಿಯಾದೇಶದ ವಿದ್ಯಾಭ್ಯಾಸದ ಕ್ರಮವನ್ನೂ ಪ್ರಗತಿಯನ್ನೂ ನಿರ್ಧರಿಸಿದ್ದು ತಿಳಿದೇ ಇದೆ.

ಸಿಪಾಯಿದಂಗೆಯ ನಂತರದಲ್ಲಿ, ಇಂಡಿಯಾ ಬ್ರಿಟಿಷ್ ರಾಜನ ನೇರ

---

* ಭಾರತೀಯ ಪದ್ಧತಿಯ ಪ್ರಕಾರ ಈ ಕತೆಯ ನಾಯಕನನ್ನು ಅವನ ಹೆಸರಿನ ಮೊದಲ ಪದದಿಂದ ದಾದಾಭಾಯಿ ಎಂದು ಕರೆಯುತ್ತೇವೆ. ಇಂಗ್ಲೆಂಡಿನಲ್ಲಿ ಅವನನ್ನು ಕರೆಯುತ್ತಿದ್ದ ನವರೋಜಿ ಎಂಬ ಹೆಸರು ಅವರ ತಂದೆಯ ಹೆಸರು.

ವಾದ ಆಡಳಿತಕ್ಕೆ ಒಳಗಾಯಿತು. ಆಗ ತರುಣ ದಾದಾಭಾಯಿ ಇಂಗ್ಲೆಂಡಿ ನಲ್ಲಿ ಸ್ಥಾಪಿತವಾದ ಮೊದಲನೆಯ ಭಾರತೀಯ ವರ್ತಕ ಸಂಘದಲ್ಲಿ ಪಾಲು ದಾರನಾಗಿದ್ದನು. ತಾತ್ತ್ವಿಕನಾದ ಈ ವರ್ತಕ ವ್ಯಾಪಾರದಲ್ಲಿ ನೀತಿ ಧರ್ಮಗಳ ಪ್ರಶ್ನೆಯನ್ನು ಎತ್ತುವುದನ್ನು ಕಂಡು ಪಾಲುದಾರರು ಚಕಿತ ರಾದರು. ದೇಶಾಭಿಮಾನಿಯಾದ ಈ ವರ್ತಕ ಲಾಭ ಸಂಪಾದನೆ ಗಿಂತ ಹೆಚ್ಚಾಗಿ ದೇಶದ ಘನತೆ ಗೌರವ ಯೋಗಕ್ಷೇಮಗಳ ಕಡೆಗೆ ಗಮನವಿತ್ತನು. ಗ್ಲಾಡ್‌ಸ್ಟನ್ ಕಾಮನ್ಸ್ ಸಭೆಯಲ್ಲಿ ತನ್ನ ಐರಿಷ್ ಚಳವಳಿಯನ್ನು ಆರಂಭಿಸಿದಾಗ, ದಾದಾಭಾಯಿ ಇಂಗ್ಲೆಂಡಿನಲ್ಲಿ ಇಂಡಿಯಾ ಚಳವಳಿಯನ್ನು ಪ್ರಾರಂಭಿಸಿದನು. ಇಂಡಿಯಾದಲ್ಲಿ ಬ್ರಿಟಿಷರ ಜವಾ ಬ್ದಾರಿಗಳೇನೆಂಬುದನ್ನು ಅವರಿಗೆ ತಿಳಿಸಿ, ಪ್ರಚಲಿತ ಆಡಳಿತ ಪದ್ಧತಿ ಯಿಂದ ಇಂಡಿಯಾ ಹೇಗೆ ಸುಲಿಗೆಯಾಗುತ್ತಿದೆಯೆಂಬ ಅಂಶವನ್ನು ಅಂಕಿಅಂಶಗಳಿಂದ ತೋರಿಸಿ ವಾದಿಸಿದನು. ಲಾರ್ಡ್ ರಿಪನ್ ಇಂಡಿಯಾದಲ್ಲಿ ಸ್ಥಳೀಯ ಸ್ವಾಡಳಿತ ಪದ್ಧತಿಯನ್ನು ಜಾರಿಗೆ ತರುವ ವೇಳೆಗೆ, ದಾದಾಭಾಯಿ ಭಾರತ ಪುತ್ರರಿಗೆ ತಮ್ಮ ದೇಶದ ಆಡಳಿತದಲ್ಲಿ ಹೆಚ್ಚು ಹೆಚ್ಚಾಗಿ ಪಾಲುದೊರಕಿಸಲು. ಕಷ್ಟವಾದ ಹೋರಾಟದಲ್ಲಿ ತೊಡಗಿ ದ್ದನು; ಅಲ್ಲದೆ ಆ ವೇಳೆಗೆ ಅವನು ಇಂಡಿಯದ ಆರ್ಥಿಕ ರಾಜಕೀಯ ವಿಚಾರಗಳಲ್ಲಿ ಪ್ರಭುತ್ವ ಸಂಪಾದಿಸಿ ಹೆಸರುವಾಸಿಯಾಗಿದ್ದನು. ಲಾರ್ಡ್ ಕರ್ಜನ್ ಭಾರತದ ಪ್ರಗತಿಯನ್ನು ತಡೆಗಟ್ಟಲು ಯತ್ನಿಸಿದಾಗ ನವಭಾರತ ಆ ನಿರಂಕುಶ ವೈಸ್‌ರಾಯನ ಮೇಲೆ ಬಹಿರಂಗವಾಗಿ ದಂಗೆಯೆದ್ದಿತು. ಆಗ ೮೦ ವರ್ಷಗಳ ವಯಸ್ಸನ್ನು ದಾಟಿದ್ದ ನಮ್ಮ ಕಥಾನಾಯಕ ಬ್ರಿಟಿಷರು ಇಂಡಿಯಾಕ್ಕೆ ಎಸಗಿದ ಅನ್ಯಾಯಕ್ಕೆ ಪರಿಹಾರವನ್ನು ಕೇಳುತ್ತ, ಅದಕ್ಕೆ ಸ್ವರಾಜ್ಯ ಪದ್ಧತಿಯೊಂದೇ ಇರುವ ಪರಿಹಾರವೆಂದು ಘೋಷಿಸುತ್ತ, ಬ್ರಿಟ ನ್ನಿನ ಆದ್ಯಂತ ಚಳವಳಿ ನಡಸುತ್ತಿದ್ದನು.

ವಿಕ್ಟೋರಿಯಾ ರಾಣಿಯ ಆಳ್ವಿಕೆಯ ಕೊನೆಯ ಭಾಗದಲ್ಲಿ ದಾದಾ ಭಾಯಿ, ಗ್ಲಾಡ್‌ಸ್ಟನಿನ ಪಕ್ಷದವನಾಗಿ ಮತ್ತು ಹೋಂರೂಲ್ ನೀತಿಯ ಸಮರ್ಥಕನಾಗಿ, ಕಾಮನ್ಸ್ ಸಭೆಯನ್ನು ಪ್ರವೇಶಿಸಿದನು. ಬ್ರಿಟಿಷ್ ಮೂಲತತ್ತ್ವಗಳಿಗೆ ಅನುಸಾರವಾಗಿ ಇಂಡಿಯದಲ್ಲಿ ಬ್ರಿಟಿಷರ ಆಡಳಿತ

ವ್ಯವಸ್ಥೆ ರೂಪಗೊಳ್ಳಬೇಕೆಂದು ಕಾಮನ್ಸ್ ಸಭೆಯಲ್ಲೂ ಸಾರ್ವಜನಿಕ ಸಭೆಗಳಲ್ಲೂ ವಾದಿಸಿದನು. ೧೯೧೧ ರಲ್ಲಿ ವಿಕ್ಟೋರಿಯಾ ರಾಣಿಯ ಮೊಮ್ಮಗನಾದ ಐದನೇ ಜಾರ್ಜ್ ನನ್ನು ಭಾರತಕ್ಕೆ ಸ್ವಾಗತಿಸುವ ಯೋಗ ಲಭಿಸಿತು. ಮೂರುವರ್ಷಗಳನಂತರ, ಮಹಾಯುದ್ಧ ಆರಂಭವಾದಾಗ, ಬ್ರಿಟಿಷರಿಗೆ ನೆರವಾಗಿ ನಿಲ್ಲಬೇಕೆಂದು ಹುರುಪಿನಿಂದ ಜನರಲ್ಲಿ ಮನವಿ ಮಾಡಿದನು. ಅದೇ ಸಮಯದಲ್ಲಿ, ಬಂಧು ರಾಷ್ಟ್ರಗಳಿಗೆ ಕೊಟ್ಟಿರುವ ಮಾದರಿಯಲ್ಲಿ ಇಂಡಿಯಕ್ಕೂ ಸಾಮ್ರಾಜ್ಯಾಂತರ್ಗತವಾದ ಸ್ವಾಡಳಿತದ ಹಕ್ಕುಗಳನ್ನು ಕೊಡುವುದು ವಿವೇಕವೆಂದು ಬ್ರಿಟಿಷ್ ರಾಜನೀತಿಜ್ಞರಿಗೆ ಒತ್ತಿ ಹೇಳಿದನು. ಸ್ವಾಡಳಿತದ ಹೊಸಯುಗಕ್ಕೆ ದಾರಿಮಾಡಿಕೊಡುವ ಸುಧಾರಣೆಗಳು ಬರಲಿವೆಯೆಂದು ದಾದಾಭಾಯಿಗೆ ಇಂಗ್ಲಿಷ್ ಸ್ನೇಹಿತರಿಂದ ತಿಳಿಯಿತು; ಆದರೆ ಅವನ ಜೀವನದ ಕನಸು ಸಫಲವಾದದ್ದನ್ನು ಕಾಣುವ ಅದೃಷ್ಟ ಅವನಿಗಿರಲಿಲ್ಲ; ನಿರೀಕ್ಷಿಸಿದ್ದಕ್ಕಿಂತ ಮುಂಚೆಯೇ, ೧೯೧೭ ರ ಆಗಸ್ಟ್ ೨೦ರ ಚರಿತ್ರಾರ್ಹವಾದ ಘೋಷಣೆಗೆ ಏಳುವಾರ ಮುಂಚಿತವಾಗಿಯೇ, ಮೃತ್ಯು ಅವನನ್ನು ಒಯ್ದಿತು.

ಹೀಗೆ ಇಂಡಿಯದ ಚರಿತ್ರೆಯಲ್ಲಿ ಅನೇಕ ಸ್ಮರಣೀಯವಾದ ನವಯುಗಾರಂಭಗಳನ್ನು ಹಾಯ್ದು, ದೇಶದ ಪ್ರಗತಿಪಥದಲ್ಲಿ ತನ್ನ ಗುರುತುಗಳನ್ನು ಬಿಟ್ಟಿರುವ ಬದುಕಿನ ಕಥೆ ಕಥನಯೋಗ್ಯವಾಗಿದೆ ಎನ್ನುವುದರಲ್ಲಿ ಸಂದೇಹವೇನು? ಆತನು ಬಾಳಿದ ರಾಜಕೀಯ ವಾತಾವರಣದಲ್ಲಿ ಬಾಳಿ, ಆತನ ನಾನಾಕಾರ್ಯ ಚಟುವಟಿಕೆಗಳಲ್ಲಿ, ಕೆಲವು ವರ್ಷಗಳಾದರೂ ಸೇರಿ, ಭಾಗವಹಿಸಿದವರು ಯಾರಾದರೂ ಈ ಕೆಲಸವನ್ನು ಕೈಕೊಂಡಿದ್ದರೆ ಉತ್ತಮವಾಗುತ್ತಿತ್ತು. ೧೯೧೧ ರಲ್ಲಿ, ಮುಂದಿನ ಚರಿತ್ರಕಾರನಿಗಾಗಿ ಟಿಪ್ಪಣಿಗಳನ್ನು ಬರೆದು ಕೊಳ್ಳಲು ದಾದಾಭಾಯಿಯ ಪದತಲದಲ್ಲಿ ಕೂರಲು ಸಿದ್ಧನಿರುವೆನೆಂದು ಹೇಳಿದೆ. ಮಿತ್ರನೊಬ್ಬನಲ್ಲಿ ಈ ಮಾತನ್ನು ಮನಬಿಚ್ಚಿ ತಿಳಿಸಿದೆ. ಆತನು "ಜೀವನ ಚರಿತ್ರೆಯನ್ನು ಗೋಖಲೆ ಬರೆಯಬೇಕೆಂದಿದ್ದಾನೆ. ಟಿಪ್ಪಣಿಗಳನ್ನೂ ಜೀವನ ಸ್ಮೃತಿಗಳನ್ನೂ ಬರೆದುಕೊಳ್ಳಲು ವ್ಯವಸ್ಥೆ ಮಾಡಿದ್ದಾನೆ; ದಾದಾಭಾಯಿಯಲ್ಲಿಗೆ ತನ್ನ ಸಹಾಯಕನನ್ನು ಕಳಿಸುತ್ತಾನೆ." ಎಂದು ನುಡಿದನು. ನಾನು "ಒಳ್ಳೆಯದೇ ಆಯಿತು" ಎಂದು ಉತ್ತರಿಸಿದೆ.

ಗೋಖಲೆ ಕಾರ್ಯವನ್ನು ಆರಂಭಿಸಿಯೇ ಇರಲಿಲ್ಲ. ಅಷ್ಟರಲ್ಲಿ, ದಾದಾಭಾಯಿಗೆ ಎರಡು ವರ್ಷ ಮುಂಚೆಯೇ, ಕಾಲವಾದನು.

ಮುಂದಿನ ಪುಟಗಳಲ್ಲಿ, ಮಾನವಕುಲ ಸೇವೆಯಲ್ಲಿ ಶ್ರದ್ಧಾ ನಿರತನಾದ ಆ ಸರಳ ಜೀವಿಯ ವೀರ ಚಾರಿತ್ರವನ್ನು, ಕೈಲಾದಮಟ್ಟಿಗೂ ಯಥಾರ್ಥ ವಾಗಿ, ಚಿತ್ರಿಸಲು ಯತ್ನಿಸಿದ್ದೇನೆ. ದಾದಾಭಾಯಿಯ ಸ್ವಂತ ಕಾಗದ ಪತ್ರ ಗಳು ಇಲ್ಲಿಯ ಕಥನಕ್ಕೆ ಮುಖ್ಯಾಧಾರ. ದುರದೃಷ್ಟವಶಾತ್, ಅವನ ಮೊದಮೊದಲ ಚಟುವಟಿಕೆಗಳಿಗೆ ಸಂಬಂಧಪಟ್ಟ ಅನೇಕ ಕಾಗದ ಪತ್ರಗಳು ಹುಳು ಹಿಡಿದಿದ್ದವು. ದಾದಾಭಾಯಿ ಇಂಗ್ಲೆಂಡಿನಲ್ಲಿದ್ದಾಗ ಅವನ ಮನೆ ಯನ್ನು ಬೊಂಬಾಯಿ ಇಂಪ್ರೂವ್‌ಮೆಂಟ್ ಟ್ರಸ್ಟಿನವರು ವಶಪಡಿಸಿ ಕೊಂಡರು. ಆಗ ಆ ಕಾಗದ ಪತ್ರಗಳೆಲ್ಲ ನಾಶವಾದವು. ಆದ್ದರಿಂದ ಆ ಕಾಲಕ್ಕೆ ಸಂಬಂಧಪಟ್ಟ ಕಥೆಯನ್ನು, ನಾನು ಸ್ವತಃ ವಿಚಾರಿಸಿ ತಿಳಿದು ಕೊಂಡ ಸಂಗತಿಗಳ ಮತ್ತು ಬೇರೆಬೇರೆ ಪ್ರಕಟನೆಗಳ ಆಧಾರದಮೇಲೆ, ಬರೆ ದಿದ್ದೇನೆ. ಅವನ ಜೀವನದ ಉಳಿದ ಭಾಗಕ್ಕೆ ಸಂಬಂಧಪಟ್ಟ, ಎಂದರೆ ೧೮೭೬ ರಿಂದ ಈಚಿನ, ಸಾಮಗ್ರಿಗಳು ದೊರೆತವು. ಆದರೆ ಅವು ಕಾಲದ ಹೊಡೆತದಿಂದಲೂ, ಒಂದು ಕಡೆಯಿಂದ ಇನ್ನೊಂದು ಕಡಗೆ ಸಾಗಿಸುವುದ ರಿಂದಲೂ, ನಷ್ಟಕ್ಕೆ ಗುರಿಯಾಗಿದ್ದವು. ಮಾಸಲಾಗಿ ಪುಡಿ ಪುಡಿಯಾಗು ತ್ತಿದ್ದ ಆ ಕಾಗದಗಳನ್ನೆಲ್ಲ, ನನ್ನ ವಿರಾಮ ಕಾಲದಲ್ಲಿ, ಒಬ್ಬೊಂಟಿಗನಾಗಿ ಪರೀಕ್ಷೆ ಮಾಡುವ ಕೆಲಸ ನನಗೆ ಮೀರಿದ್ದಾಗಿ ತೋರಿತು. ಆದರೆ ಕಳೆದ ಹನ್ನೆರಡು ತಿಂಗಳುಗಳಲ್ಲಿ ಒಂದೇ ಸಮನಾಗಿ ಅವುಗಳಿಗೆ ಗಮನ ಕೊಡು ವುದು ಸಾಧ್ಯವಾಯಿತು.

ಈ ಜೀವನ ಚರಿತ್ರೆಯನ್ನು ಬರೆಯುವುದರಲ್ಲಿ ಆದ ವಿಳಂಬದಿಂದ ಒಳ್ಳೆಯದಾಗಿಲ್ಲವೆನ್ನುವಂತಿಲ್ಲ. ಹಿಂದಿನ ತಲೆಮೊರೆಯ ಕಾಂಗ್ರೆಸಿಗರ ನೀತಿಗೆ ಆಧಾರವಾದದ್ದು ಅವರ ವ್ಯವಸ್ಥಾ ಬದ್ಧವಾದ ಚಳವಳಿಯ ಮಾರ್ಗಗಳು. ಇತ್ತೀಚಿನ ವರ್ಷಗಳಲ್ಲಿ ಜನರು, ಅನೇಕ ವೇಳೆ, ಆ ಮಾರ್ಗಗಳನ್ನು ಕುರಿತು ತಿರಸ್ಕಾರವಾಗಿ ಮಾತಾಡುವುದನ್ನು ಕೇಳಿದ್ದೇನೆ. ಆ ನೀತಿಗೆ ಆಧಾರ ವಾಗಿದ್ದ ಬ್ರಿಟಿಷರ ನ್ಯಾಯಪಕ್ಷಪಾತ ಬುದ್ಧಿಯಲ್ಲಿದ್ದ ನಂಬಿಕೆ ಕಡಿಮೆಯಾ ಗುತ್ತಿರುವುದನ್ನೂ ಕಾಣುತ್ತಿದೇನೆ. ಕಾಲ ಬದಲಾವಣೆಯಾಗಿದೆ. ಕಳೆದ

ಇಪ್ಪತ್ತು ವರ್ಷಗಳಲ್ಲಿ ಕಾಂಗ್ರೆಸ್ಸು ಅಸಹಕಾರ ನೀತಿಯನ್ನೂ ಸತ್ಯಾಗ್ರಹ ವನ್ನೂ ಕೈಗೊಳ್ಳಬೇಕಾಯಿತು. ಅಂಥ ಸಂದರ್ಭಗಳಲ್ಲಿ, ಯಾರು ತಾನೆ ದಾದಾಭಾಯಿಯ ಸಲಹೆಯನ್ನು ಮನ್ನಿಸಿ ವ್ಯವಸ್ಥಾಬದ್ಧವಾದ ಮಾರ್ಗ ಗಳನ್ನು ಅನುಸರಿಸುತ್ತಿದ್ದರು? ಅಥವಾ ಬ್ರಿಟಿಷ್ ಶೀಲದಲ್ಲಿಯೂ ಬ್ರಿಟಿಷ್ ನ್ಯಾಯ ಪಕ್ಷಪಾತತೆಯಲ್ಲೂ ಅವನಿಗಿದ್ದ ನಂಬಿಕೆಯಲ್ಲಿ ಯಾರು ತಾನೆ ಭಾಗಿ ಯಾಗುತ್ತಿದ್ದರು?

ಸತ್ಯಾಗ್ರಹ ಚಳವಳಿಯ ಕಾಲದಲ್ಲಿ ಜನ, "ಈಗ ದಾದಾಭಾಯಿ ಬದುಕಿದ್ದರೆ ಏನು ಮಾಡುತ್ತಿದ್ದನು?" ಎಂದು ಕೇಳಿದರು. ಹಳೆಯ ಕಾಂಗ್ರೆಸಿನವರು ಒಂದು ಬಗೆಯ ಉತ್ತರ ಹೇಳಿದರು; ನವಭಾರತದ ತರು ಣರು ಇನ್ನೊಂದು ಬಗೆಯಲ್ಲಿ ಮಾತಾಡಿದರು. ಚಕ್ರಗೋಷ್ಠಿಯನ್ನು ಮುಗಿಸಿಕೊಂಡು ಬೊಂಬಾಯಿಗೆ ಹೋಗುತ್ತಿದ್ದ ಮಹಾತ್ಮಾ ಗಾಂಧಿಯವ ರನ್ನು ಎಸ್. ಎಸ್. ಪಿಲ್ನ ಹಡಗಿನಲ್ಲಿ ಭೇಟಿ ಮಾಡಿ ಈ ವಿಷಯವನ್ನು ಕೇಳಿದೆ.

"ಈಗಿನ ಜನ ದಾದಾಭಾಯಿಯ ನೀತಿಯನ್ನು ಬೇಡುವ ನೀತಿಯೆಂದು ಹಾಸ್ಯಮಾಡುತ್ತಾರೆ. ಆದರೆ ಆಗಿನ ಸ್ಥಿತಿಗತಿಗಳನ್ನು ಗಮನಿಸಿದರೆ ಅವೇ ಸರಿಯಾದ ನೀತಿಯಲ್ಲವೆ? ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದೆ.

"ಹೌದು" ಎಂಬ ಉತ್ತರಬಂತು.

ನನ್ನ ಮುಂದಿನ ಪ್ರಶ್ನೆಯನ್ನು ನಿರೀಕ್ಷಿಸಿ ತತ್‌ಕ್ಷಣವೆ ಹೇಳಿದರು: "ಆತನು ಈಗ ಬದುಕಿದ್ದಿದ್ದರೆ ನಾನು ಕೆಲವು ವರ್ಷಗಳಿಂದ ಅನುಸರಿಸುತ್ತಿ ರುವ ಮಾರ್ಗವನ್ನೇ ಆತನೂ ಅನುಸರಿಸುತ್ತಿದ್ದನೆಂದು ನನ್ನ ನಂಬಿಕೆ."

ಈ ನಂಬಿಕೆ ಎಷ್ಟರಮಟ್ಟಿಗೆ ಸರಿಯಾದದ್ದು, ಈ ಗ್ರಂಥದಲ್ಲಿ ಉದ್ಧರಿ ಸಿರುವ ದಾದಾಭಾಯಿಯ ಕಡೆ ಕಡೆಯ ಮಾತುಗಳು ಈ ಅಭಿಪ್ರಾಯವನ್ನು ಎಷ್ಟರಮಟ್ಟಿಗೆ ಪುಷ್ಟೀಕರಿಸುತ್ತವೆ ಎಂಬುದನ್ನು ವಾಚಕರೇ ನಿರ್ಧರಿಸಿ ಕೊಳ್ಳ ಬಹುದು.

ಸರಕಾರಕ್ಕೂ ಕಾಂಗ್ರೆಸಿಗೂ ಸದ್ಯಕ್ಕೆ ಸಂಧಿಯಾಗಿದೆ. ಅನೇಕ ವರ್ಷಗಳಕಾಲ ಕೌನ್ಸಿಲುಗಳನ್ನು ಬಹಿಷ್ಕರಿಸಿ, ಈಗ ಬಹುಮಟ್ಟಿಗೆ ಎಲ್ಲ ಪ್ರಾಂತಗಳಲ್ಲಿ ಕಾಂಗ್ರೆಸು ಅಧಿಕಾರದಲ್ಲಿದೆ. ಇದುವರೆಗೆ ಇಂಡಿಯಾದೇಶದ

ಚರಿತ್ರೆ, ಜನರ ರಾಜಕೀಯ ಮಿಡಿತಗಳನ್ನು ಅರಿಯಲಾದ ಪರದೇಶೀಪ್ರಭುತ್ವಗಳ ಚರಿತ್ರೆಯಾಗಿವೆ. ಈಗ ರಾಷ್ಟ್ರೀಯ ಸರಕಾರದ ಯುಗ ಆರಂಭವಾಗಿದೆ. ಅನೇಕ ಮೂಲಭೂತವಾದ ಪ್ರಶ್ನೆಗಳು ಇನ್ನೂ ಇತ್ಯರ್ಥವಾಗ ಬೇಕಾಗಿವೆ. ಅಲ್ಲದೆ, ಈಗ ಚಲಿಸುತ್ತಿರುವ ಸಹಕಾರದ ಹಡಗು ಸಂಪೂರ್ಣ ಸ್ವಾತಂತ್ರ್ಯವೆಂಬ ಬಂಡೆಗೆ ತಗಲಿ ಕೆಡೆದು ಬೀಳಬಹುವೆಂದು ಅನೇಕರು ಭಯಪಡುತ್ತಿದ್ದಾರೆ. ಆದರೆ ಕೊನೆಯಲ್ಲಿ ಅವೆಲ್ಲ ಲಕ್ಷಣ ಸಮನ್ವಯದ ಮತ್ತು ಹೊಂದಾಣಿಕೆಯ ವಿಷಯ. ಸಂದರ್ಭ ಒದಗಿಬಂದಾಗ, ಮಹಾತ್ಮಾಗಾಂಧಿಯವರು ತೊಡಕಿನ ಗಂಟುಗಳನ್ನು ಬಿಡಿಸುತ್ತಾರೆಂಬು ನಂಬಬಹುದು. ಅಂತು, ಕಾಂಗ್ರೆಸು ಸಹಕರಿಸಿ ವ್ಯವಸ್ಥಾಬದ್ಧವಾದ ಪ್ರಗತಿಪಥದಲ್ಲಿ ನಡೆಯುತ್ತಿರುವುದರಿಂದ ಹೊಸ ಸಾಧ್ಯತೆಗಳು ಕಂಡು ಬರುತ್ತಿವೆ. ಆದ್ದರಿಂದ ದಾದಾಭಾಯಿಯ ಜೀವನವನ್ನು ಜನರ ಮುಂದಿಡಲು ಇದು ಉಚಿತವಾದ ಸಮಯವಾಗಿದೆ; ಆತನ ಭರ್ತ್ಸನೆಯನ್ನೂ ಭರವಸೆಯ ಮಾತುಗಳನ್ನೂ ನೆನೆಯಲು ಸಂದರ್ಭ ತಕ್ಕದಾಗಿದೆ. ವಿದೇಶೀ ಪ್ರಭುತ್ವವು ಹೆಜ್ಜೆಹೆಜ್ಜೆಗೂ ಅಡ್ಡಿಯನ್ನು ತಂದೊಡ್ಡಿದರೂ, ಅವನು ಶಾಂತಿಯುತವಾದ ಮತ್ತು ಕ್ರಮಬದ್ಧವಾದ ಪ್ರಗತಿ ಸಾಧನೆಗಾಗಿ ದಣಿವಿಲ್ಲವೆ ದುಡಿದನು. ಆ ದುಡಿಮೆಯ ಕಥೆಯಲ್ಲಿ ಬ್ರಿಟಿಷ್ ಸರಕಾರವೂ ಜನಾಂಗವೂ ಕಲಿಯ ಬಹುದಾದ ಪಾಠವಿದೆ; ದುಃಖದಿಂದಲೂ ನೋವಿನಿಂದಲೂ ತುಂಬಿರುವ ಅವನ ಕಥೆಯಲ್ಲಿ ಭಾರತದ ಜನರು ಕಲಿಯಬಹುದಾದ ಪಾಠವೂ ಇದೆ.

ದಾದಾಭಾಯಿಯನ್ನು ಕುರಿತು ಅನೇಕ ಲಘು ಚಿತ್ರಗಳು ಅವನ ಜೀವಮಾನ ಕಾಲದಲ್ಲಿ ಪ್ರಕಟವಾದವು. ಅವೆಲ್ಲವುಗಳಿಗೂ, ನಟೇಶನ್ ಮತ್ತು ಕಂಪೆನಿ ಪ್ರಕಟಿಸಿರುವ ಅವನ ಭಾಷಣ ಲೇಖನಗಳ ಸಂಕಲನಕ್ಕೂ, ನಾನು ಋಣಿಯಾಗಿದೇನೆ. ಈ ಜೀವನ ಚರಿತೆಯ ಮುನ್ನಡೆಯಲ್ಲಿ ತೀವ್ರವಾದ ಆಸಕ್ತಿಯನ್ನು ತೋರಿ, ಅಮೂಲ್ಯವಾದ ಸಲಹೆಗಳನ್ನಿತ್ತು, ಕೃಪೆ ದೋರಿರುವ ಮಿ। ಸಿ. ಎಫ್. ಆಂಡ್ರೂಸ್, ದಿವಾನ್ ಬಹಾದುರ್ ಕೆ. ಎಂ. ಝುವೇರಿ ಮತ್ತು ಎಸ್.ಟಿ. ಷಪರ್ಡ್ ಅವರುಗಳಿಗೂ ಋಣಿಯಾಗಿದೇನೆ. ಇಂಡಿಯಾ, ಇಂಗ್ಲೆಂಡ್ ಮತ್ತು ಅಮೆರಿಕಾಗಳಲ್ಲಿರುವ ನಾನಾ ಜನರನ್ನು ಸಲಹೆ ಸಮಾಚಾರಗಳಿಗಾಗಿ ವಿಚಾರಿಸಬೇಕಾಯಿತು. ಮನಃಪೂರ್ವಕವಾಗಿ ಸಹಾಯ

ಮಾಡಿದ ಅವರೆಲ್ಲರಿಗೂ, ಅದರಲ್ಲೂ ವಿಶೇಷವಾಗಿ ಈಸ್ಟ್ ಇಂಡಿಯಾ ಆಸೋಸಿಯೇಷನ್ನಿನ ಗೌ। ಕಾರ್ಯದರ್ಶಿ ಸರ್ ಫ್ರಾಂಕ್ ಬ್ರೌನ್ ಅವರಿಗೂ, ಕೃತಜ್ಞನಾಗಿದೇನೆ. ಕಡೆಯದಾಗಿ, ಮುನ್ನುಡಿಗಾಗಿ ಮಹಾತ್ಮಾ ಗಾಂಧಿಯವರಿಗೆ ವಂದನೆಯನ್ನರ್ಪಿಸುತ್ತೇನೆ. ಅವರು ದಾದಾಭಾಯಿ ಭಾರತ ಜನತೆಯ ಹೃದಯದಲ್ಲಿ ಆಕ್ರಮಿಸಿದ್ದ ಸ್ಥಾನಕ್ಕೆ ಉತ್ತರಾಧಿಕಾರಿಯಾಗಿದಾರೆ. ಭಾರತೀಯ ಮಹಾಕುಲ ವೃದ್ಧನು ಗಾಂಧೀಜಿಗಿಂತ ಹೆಚ್ಚು ಧೈರ್ಯಶಾಲಿಯೂ ಉದಾರ ಮನಸ್ಕನೂ ಆದ ಉತ್ತರಾಧಿಕಾರಿಯನ್ನು ಬಯಸಿರಲಾರನು. ದಾದಾಭಾಯಿಯ ಹೋಂರೂಲ್ ಕನಸನ್ನು ಸಾರ್ಥಕಗೊಳಿಸಲು ಜನತೆಯ ಆರಾಧ್ಯ ಮೂರ್ತಿಯಾದ ಈತನಿಗಿಂತ ಹೆಚ್ಚಾಗಿ ನೆರವಾದವರಿಲ್ಲ. ಆ ಮಹಾದೇಶಾಭಿಮಾನಿಯ ಜೀವನ ಶೀಲಗಳನ್ನು ಕರಾರುವಾಕ್ಕಾಗಿ ಈತನಂತೆ ಬೆಲೆ ಕಟ್ಟಲು ಅರ್ಹರಾದವರು ಇಂದು ಇಂಡಿಯದಲ್ಲಿ ಬೇರೆ ಯಾರೂ ಇಲ್ಲ.

ಡಿಸೆಂಬರ್ ೫, ೧೯೩೮. ಆರ್. ಪಿ. ಎಂ.

# ಕೃತಜ್ಞತೆ

ದಾದಾಭಾಯಿ ನವರೋಜಿಯ ಜೀವನ ಚರಿತೆಯನ್ನು ಕನ್ನಡಕ್ಕೆ ತರುವುದರಲ್ಲಿ ಎಲ್ಲ ವಿಧದಲ್ಲಿಯೂ ನೆರವಾದ ಮೂಲಗ್ರಂಥಕರ್ತೃಗಳಾದ ಸರ್ ಆರ್. ಪಿ. ಮಸಾನಿಯವರಿಗೂ, ಈ ಪುಸ್ತಕವನ್ನು ಪ್ರಕಟಿಸಲು ಅನುಮತಿಯಿತ್ತ ಜಾರ್ಜ್ ಆಲೆನ್ ಅಂಡ್ ಅನ್ವಿನ್ ಕಂಪೆನಿಯ ಅಧಿಕಾರಿಗಳಿಗೂ ನಾವು ಕೃತಜ್ಞರಾಗಿದೇವೆ.

ನಮ್ಮ ದೇಶದ ಅಪರಿಮಿತವಾದ ದುಃಖದಾರಿದ್ರ್ಯಗಳನ್ನು ಕಂಡುಕೊಂಡು ಅವುಗಳ ನಿವಾರಣೆಗೆ ಸ್ವಾಡಳಿತಪದ್ಧತಿಯೇ ಪರಮಪರಿಹಾರವೆಂದು ತಿಳಿದು ಸ್ವದೇಶದಲ್ಲಿಯೂ ಹೊರಗೂ ರಾಜಕೀಯ ಚಳವಳಿಯನ್ನು ಹೂಡಿದವರಲ್ಲಿ ದಾದಾಭಾಯಿ ನವರೋಜಿ ಮೊದಲಿಗನು. ಕಾಂಗ್ರೆಸ್ ಮಹಾ ಸಂಸ್ಥೆಯ ಸ್ಥಾಪನೆಯಲ್ಲಿ ಅಗ್ರಗಣ್ಯನಾಗಿ, ಅದರ ಬೆಳವಣಿಗೆಗಾಗಿ ಹಗಲಿರುಳೂ ಶ್ರಮಿಸಿದವರಲ್ಲಿ ದಾದಾಭಾಯಿ ಪ್ರಮುಖನು. ಸ್ವರಾಜ್ಯವೆಂಬ ಪದವನ್ನು ಮೊದಲಬಾರಿಗೆ ಉಪಯೋಗಿಸಿ, ಐವತ್ತು ವರ್ಷಗಳಿಗೂ ಮೇಲ್ಪಟ್ಟ ದೇಶಸೇವೆಯಿಂದ ದಾದಾಭಾಯಿ ಭಾರತೀಯ ಮಹಾಕುಲವೃದ್ಧನೆಂದು ಜನರಿಂದ ಸನ್ಮಾನ್ಯನಾದನು.

ಹೀಗೆ ಪೂಜ್ಯನೂ ಸ್ವರಾಜ್ಯ ಸ್ಥಾಪಕರಲ್ಲಿ ಅಗ್ರಗಣ್ಯನೂ ಆದ ಈ ದೇಶಭಕ್ತನ ಚರಿತೆಯನ್ನು ಜನ, ಸ್ವರಾಜ್ಯವನ್ನು ಅನುಭವಿಸುತ್ತಿರುವ ಈ ಸಮಯಯದಲ್ಲಿ, ಆದರದಿಂದ ಬರಮಾಡಿಕೊಳ್ಳುವರೆಂದು ನಿರೀಕ್ಷಿಸಲಾಗಿದೆ.

ಈ ಗ್ರಂಥವನ್ನು ಅತ್ಯಲ್ಪಕಾಲಾವಧಿಯಲ್ಲಿ ಅಚ್ಚುಮಾಡಲು ಸಹಾಯಕರಾದ ಮೈಸೂರು ಪ್ರಿಂಟಿಂಗ್ ಪ್ರೆಸ್ಸಿನ ಮಾಲಿಕರಾದ ಶ್ರೀ ಜಿ. ಎಚ್. ರಾಮರಾಯರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

**ಕೂಡಲಿ ಚಿದಂಬರಂ,**
ಕಾವ್ಯಾಲಯ.

೩೦—೩—೧೯೫೭.

# ವಿಷಯ ಸೂಚಿಕೆ

# ದಾದಾಭಾಯಿ ನವರೋಜಿ

---

## ೧. ಬಾಲ್ಯದ ದಿನಗಳು

ಪೂರ್ವ ಪಶ್ಚಿಮಗಳಿಗೊಂದು ಮಹಾದ್ವಾರವಾಗಿ ನಿಂತಿರುವ ಈಗಿನ ಬೊಂಬಾಯಿ ನಗರ ಇರುವ ಪ್ರದೇಶದಲ್ಲಿ ಅನತಿಕಾಲದ ಹಿಂದೆ ಏಳು ಪಾಳು ದ್ವೀಪಗಳಿದ್ದವು. ಅವುಗಳ ತೀರಪ್ರದೇಶದಲ್ಲಿ ಅಲ್ಲಲ್ಲಿ ಹಲವು ಮೀನು ಹಿಡಿಯುವ ಹಳ್ಳಿಗಳಿದ್ದವು. ಅವುಗಳಲ್ಲಿ ಒಂದಾದ ಮಾಂಡ್ವಿ ಎಂಬುದು ಈಗ ಚಟುವಟಿಕೆಯಾದ ವಾಣಿಜ್ಯ ಕೇಂದ್ರವಾಗಿದೆ. ಈ ಸ್ಥಳದಲ್ಲಿ ಈಗ ಪಾರಸಿಗಳು ಕಾಣದಿದ್ದರೂ ಸುಮಾರು ನೂರು ವರುಷಗಳಿಗೆ ಹಿಂದೆ ಅಲ್ಲಿ ಹಲವು ಪಾರಸಿ ಸಂಸಾರಗಳಿದ್ದವು. ಅವರಲ್ಲಿ ಒಬ್ಬನಾದ ನವರೋಜಿ ಪಾಲಂಜಿ ದೋರ್ದಿ ಎಂಬ ಬಡ ಪಾರಸಿ ವೈದಿಕನು ತನ್ನ ಹೆಂಡತಿ ಮಣೆಕ್ ಬಾಯಿಯೊಡನೆ ಸಾಧಾರಣ ರೀತಿಯ ಮನೆಯೊಂದರಲ್ಲಿ ವಾಸವಾಗಿದ್ದನು. ೧೮೨೫ ನೆಯ ಇಸವಿಯ ಸೆಪ್ಟೆಂಬರ್ ೪ ನೆಯ ತಾರೀಕಿನ ದಿವಸ ಈ ದಂಪತಿಗಳಿಗೆ ಒಂದು ಗಂಡು ಮಗು ಹುಟ್ಟಿತು. ಆಗ ಅವರ ಸಂತೋಷಕ್ಕೆ ಪಾರವಿರಲಿಲ್ಲ ಅದು ಅವರ ಚೊಚ್ಚಲ ಮಗು, ಅವರ ಒಂದೇ ಸಂತಾನ. ಮಗುವಿಗೆ ದಾದಾಭಾಯಿ ಎಂದು ಹೆಸರಿಟ್ಟರು. ಈ ಹಿಂದು ಹೆಸರನ್ನೇಕೆ ಆರಿಸಿದರೊ ತಿಳಿಯದು. ಅದು ಕೇವಲ ಆಕಸ್ಮಿಕ ಘಟನೆಯೆ? ಅಥವಾ ಪುತ್ರನು ಸಮಕಾಲೀನ ಭಾರತ ಚರಿತ್ರೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿ ಭಾರತೀಯ ಮಹಾಕುಲವೃದ್ಧ*ನೆಂದು ಹೆಸರುಗೊಳ್ಳುವನೆಂದು ಅದೃಷ್ಟ ದೇವತೆ ಅವನ ತಾಯಿಯ ಕಿವಿಯಲ್ಲಿ ಉಸುರಿರಬಹುದೆ?

ಅದು ಹೇಗಾದರೂ ಇರಲಿ, ದಾದಾಭಾಯಿಯ ಹೆಸರಿನಲ್ಲಿ ಅವನ ಉತ್ತಮ ಭವಿಷ್ಯದ ಸೂಚನೆ ಅಡಗಿತ್ತು. ಭಾರತ ಮಾತೆಯನ್ನು ಅನನ್ಯ

---

*ದಾದಾ–ತಾತ

ರೀತಿಯಲ್ಲಿ ಪ್ರೀತಿಸುವುದೂ ಸೇವಿಸುವುದೂ, ಆ ಸೇವೆಯಲ್ಲಿ ವೃದ್ಧನಾಗುವುದೂ, ಭಾರತಕ್ಕೆ ಎಸಗಿದ ಅನ್ಯಾಯಗಳನ್ನು ಸರಿಪಡಿಸುವಂತೆ ಇಂಗ್ಲಿಷರೊಡನೆ ವೃದ್ಧಾಪ್ಯದಲ್ಲೂ ಹೋರಾಡುವುದೂ, ಸ್ವಾತಂತ್ರ್ಯವನ್ನು ಅರಸುವಂತೆ ದೇಶಬಾಂಧವರಿಗೆ ಸದಾ ಬೋಧಿಸುವುದೂ, ಸ್ವಯಂ ರಾಜ್ಯಾಡಳಿತ ಮಾರ್ಗದಲ್ಲಿ ಅವರು ಹೆಜ್ಜೆಯಿಡುವುದನ್ನು ನೋಡುವುದೂ, ಅವನ ಜೀವಿತೋದ್ದಿಷ್ಟ ಕಾರ್ಯಗಳಾಗಿದ್ದವು. ಅವುಗಳನ್ನು ಎಸಗುವುದರಲ್ಲಿ ಅವನು ಹೆಮ್ಮೆಪಟ್ಟುಕೊಂಡಂತೆ, ದೇಶಬಾಂಧವರು ತನ್ನನ್ನು 'ದಾದಾ' ಎಂಬ ಗೌರವದ ಮಾತಿನಿಂದ ಕರೆಯುತ್ತಿದ್ದುದಕ್ಕಾಗಿಯೂ ಸಂತೋಷಪಡುತ್ತಿದ್ದನು.

ದಾದಾಭಾಯಿಯ ಪೂರ್ವಿಕರ ಸ್ಥಳ ಬರೋಡ ಪ್ರಾಂತದ ನವಸಾರಿ ಎಂಬ ಸಣ್ಣ ಪಟ್ಟಣ. ಅಲ್ಲಿನ ಹವಾ ಇರಾನಿನ ಸಾರಿ ಎಂಬ ಪುರಾತನ ಗ್ರಾಮದಷ್ಟೆ ಹಿತವಾಗಿ ಇದ್ದುದರಿಂದ ಅಲ್ಲಿಗೆ ಬಂದು ನೆಲಸಿದ ಪಾರಸಿಗಳು ಅದನ್ನು ನವಸಾರಿ ಎಂದು ಕರೆದರಂತೆ. ಬೊಂಬಾಯಿಯ ಅಭಿವೃದ್ಧಿಗೆ ಕಾರಣರಾದಂತೆ ನವಸಾರಿಯ ಪ್ರಗತಿಗೂ ಪಾರಸಿಗಳು ಆಧಾರಭೂತರಾದರು. ಬಹು ಪ್ರಸಿದ್ಧರಾದ ಅನೇಕ ಮುಂದಿ ದಸ್ತೂರರೂ (ಪಾರಸಿ ಮಠಾಧಿಪತಿಗಳೂ) ದೇಸಾಯರೂ ಆ ಪಟ್ಟಣದಲ್ಲಿ ಜನ್ಮವೆತ್ತಿದರು. ಖ್ಯಾತನಾಮರಾದ ಜಾಮ್‌ಸೆಟ್‌ಜಿ ಜೀಜೀಭಾಯಿ, ಜಾಮ್‌ಸೆಟ್‌ಜಿ ತಾತಾ ಮೊದಲಾದವರು ಆ ಸ್ಥಳದಲ್ಲಿ ಹುಟ್ಟಿದವರು.

ದಾದಾಭಾಯಿಯ ಜನ್ಮಸ್ಥಳವೂ ನವಸಾರಿಯೆಂದು ಅಲ್ಲಿನ ಅನೇಕ ಜನ ಹೇಳುತ್ತಾರೆ. ಆದರೆ ಅದಕ್ಕೆ ಆಧಾರವಿಲ್ಲ. ದಾದಾಭಾಯಿಯ ತಂದೆಯೂ ತಾತನೂ ನವಸಾರಿಯಿಂದ ಇಪ್ಪತ್ತು ಮೈಲಿಗಳ ದೂರದಲ್ಲಿರುವ ಧರ್ಮಪುರ ಸಂಸ್ಥಾನದಲ್ಲಿ ಕೃಷಿಕಾರ್ಯದಲ್ಲಿ ನಿರತರಾಗಿದ್ದರು. ದಾದಾಭಾಯಿಯ ಪೂರ್ವಿಕರಲ್ಲಿ ಒಬ್ಬನಾದ ಸ್ಪಿತೋಮ್ರ ಮೋಬೆದನು ನವಸಾರಿಗೆ ಬಂದು ನೆಲಸಿದ ಪಾರಸಿ ವೈದಿಕರಲ್ಲಿ ಮೊದಲನೆಯವನು. ಆತನಿಂದ ವಂಶ ನಿರಂತರವಾಗಿ ಬೆಳೆದು ಬಂದಿರುವುದು ಮನೆತನದ ದಾಖಲೆಗಳಿಂದ ತಿಳಿದು ಬರುತ್ತದೆ. ಆಗಿನ ಕಾಲದ ಪಾರಸಿ ವೈದಿಕನು ಮಗನನ್ನು ವೈದಿಕ ಕಸಬಿಗೆ ಸೇರಿಸುವುದು ತನ್ನ ಧರ್ಮ ಕರ್ತವ್ಯವೆಂದು ತಿಳಿದಿದ್ದನು.

ದಾದಾಭಾಯಿಯು ತನ್ನ ಆರಂಭ ಸಂಸ್ಕಾರವನ್ನು ಹೊಂದುವವರೆಗೆ ಅವನ ತಂದೆ ಬದುಕಿದ್ದಲ್ಲಿ ಮೋಬೆದನಾಗಿ ತನ್ನ ಜನದ ಮತಧರ್ಮಕಾರ್ಯಗಳಲ್ಲಿ ತೊಡಗುವಂತೆ ಅವನನ್ನು ಪ್ರಾಯಶಃ ಒತ್ತಾಯ ಪಡಿಸುತ್ತಿದ್ದನು. ಆ ಸಂದರ್ಭದಲ್ಲಿ, ದಾದಾಭಾಯಿಯು ಈಗ ದೇಶಾಭಿಮಾನದಿಂದ ಸಾಧಿಸ ಕಾರ್ಯಗಳನ್ನು ಯಾವ ಉತ್ಸಾಹದಿಂದ ನಿರ್ವಹಿಸಿದನೋ ಅದಕ್ಕೂ ಹೆಚ್ಚಿನ ಶ್ರದ್ಧೆಯಿಂದ ಸುಧಾರಕನಾಗಿ ಪಾರಸೀಮತಧರ್ಮದ ಕಾರ್ಯಗಳಲ್ಲಿ ತೊಡಗುತ್ತಿದ್ದನೆಂದು ಊಹಿಸಬಹುದಾಗಿದೆ. ಭಾರತೀಯರ ಪುಣ್ಯವಶದಿಂದ ಸಂಗತಿಗಳು ಹಾಗೆ ನಡೆಯಲಿಲ್ಲ, ದಾದಾಭಾಯಿಯ ವಂಶದಲ್ಲಿ ಪರಂಪರೆಯಾಗಿ ಬಂದಿದ್ದ ವೈದಿಕ ಸೇವೆ ಅವನಿಂದ ವಿಚ್ಛಿತ್ತಿ ಹೊಂದಿ, ಅವನು ಭಾರತರಾಷ್ಟ್ರೀಯತೆಯ ಘನ ಪುರೋಹಿತನಾದನು.

ಗುಜರಾತು ಇಂಡಿಯಾದೇಶದ ತೋಟವೆನಿಸಿದ್ದರೆ ನವಸಾರಿ ಗುಜರಾತಿನ ತೋಟ. ಅಲ್ಲಿನ ಹೂವುಗಳೂ ಪರಿಮಳದ್ರವ್ಯಗಳೂ ಪ್ರಸಿದ್ಧವಾದುವು. ಆ ಬಗೆಯ ವಸ್ತುಗಳು ಬೇರೆಲ್ಲಿಯೂ ದೊರೆಯಲಾರವೆಂದು ಇತಿಹಾಸಕಾರನಾದ ಅಬುಲ್ ಫಜಲ್ ಹೇಳುತ್ತಾನೆ. ದಾದಾಭಾಯಿಯ ಪೂರ್ವಿಕರಲ್ಲಿ ಒಬ್ಬನಾದ ಛಾಂದ್‌ಜೀ ಕಾಮ್‌ದೀನ್ ಎಂಬಾತನು ಆ ಕಾಲದಲ್ಲೇ ಅತ್ಯುತ್ತಮವಾದ ಪರಿಮಳದ್ರವ್ಯಗಳನ್ನು ತಯಾರಿಸುತ್ತಿದ್ದನಂತೆ. ಆತನ ಹೆಸರು ನವಸಾರಿಯಿಂದ ದೆಹಲಿಯವರೆಗೂ ಹಬ್ಬಿ ನೂರ್‌ಜಹಾನ್ ಬೇಗಮಳ ಕಿವಿಗೂ ಬಿದ್ದಿತು. ಛಾಂದ್‌ಜೀಯು ನಾಲ್ಕು ಜಾಡಿ ಅತ್ತರನ್ನು ತೆಗೆದುಕೊಂಡು ಹೋಗಿ ದೆಹಲಿಯ ಚಕ್ರವರ್ತಿಗೆ ಅರ್ಪಿಸಿದನು. ಪರಿಣಾಮವಾಗಿ, ಅವನು ರಾಜ ಅತಿಥಿಯಾಗಿ ಸತ್ಕಾರ ಹೊಂದಿದ್ದಲ್ಲದೆ, ನೂರು ಬಿಘಾ ಭೂಮಿಯನ್ನೂ 'ಮುಲ್ಲಾ ಜಮಾಸ್ಪ್' ಎಂಬ ಬಿರುದನ್ನೂ ಪಡೆದನು.

ಪತ್ರಿಕೋದ್ಯೋಗಿಯೊಬ್ಬನು ಇದರ ವಿಚಾರವಾಗಿ ದಾದಾಭಾಯಿಯನ್ನು ಪ್ರಶ್ನಿಸಲಾಗಿ (೧೮೮೧), ಅದಕ್ಕೆ ಉತ್ತರವಾಗಿ ಅವನು "ಆ ವಿಷಯಕ್ಕೆ ಸಂಬಂಧಪಟ್ಟ ದಾಖಲೆಗಳೆಲ್ಲವನ್ನೂ ನೋಡುವವರೆಗೆ ಅದರ ನಿಜಾಂಶವನ್ನು ಹೇಳಲಾರೆ" ಎಂದು ತಿಳಿಸಿದನು. ಈಬಗೆಯ ಮಿತಭಾಷೆ ದಾದಾಭಾಯಿಯ ಒಂದು ವಿಶಿಷ್ಟಗುಣ. ಶೋಧಿಸದೆ ಯಾವ ಮಾತನ್ನೂ

ಅವನು ಅಂಗೀಕರಿಸುತ್ತಿರಲಿಲ್ಲ, ಸತ್ಯಾಂಶವನ್ನು ದೃಢಪಡಿಸಿಕೊಳ್ಳದೆ ಯಾವ ಹೇಳಿಕೆಯನ್ನೂ ಕೊಡುತ್ತಿರಲಿಲ್ಲ; ಇದು ಅವನ ಜೀವನದ ನಿಯಮವಾಗಿತ್ತು.

ದಾದಾಭಾಯಿ ವಂಶಾನುಕ್ರಮದಲ್ಲಿ ಮುಲ್ಲಾ ಜಮಾಸ್ಪನಿಂದ ಒಂಭತ್ತನೆಯವನು. ಅವನ ತಂದೆ ತಾಯಿಗಳು ಬಹುಮಟ್ಟಿಗೆ ಬಡವರು, ಆದರೆ ಪೂರ್ವಿಕರು ಉತ್ತಮ ಸ್ಥಿತಿಯಲ್ಲಿದ್ದಂತೆಯೂ ವಿದ್ಯಾಪಾಂಡಿತ್ಯಕ್ಕೆ ಹೆಸರಾಗಿದ್ದಂತೆಯೂ ತೋರಿಬರುತ್ತದೆ. ಅವರಿಗೆ ಸಮಾಜದಲ್ಲಿ ಉನ್ನತ ಸ್ಥಾನವಿತ್ತು. ಪಾರಸೀ ಜನಾಂಗದ ಹಿರಿಯರ ಹೆಸರುಗಳೊಡನೆ ದೋರ್ದಿ ವಂಶದ ಕೆಲವರ ಹೆಸರುಗಳೂ ಸೇರಿರುವುದನ್ನು ಮತೀಯ ದಾಖಲೆಗಳಲ್ಲಿ ಕಾಣಬಹುದು. ಹೀಗೆ, ದಾದಾಭಾಯಿಯ ದೇಶ ಸೇವಾ ಪ್ರವೃತ್ತಿ ವಂಶಾನುಗತವಾಗಿ ಬಂದದ್ದೆಂದು ಹೇಳಬಹುದು.

ಈತನ ವಂಶಕ್ಕೆ 'ದೋರ್ದಿ' ಎಂಬ ಹೆಸರು ಬಂದ ವಿಚಾರದಲ್ಲಿ ಒಂದು ಅಪೂರ್ವವಾದ ಕಥೆಯಿದೆ. ಒಂದು ದಿನ ನವಸಾರಿಯ ಪಾರಸೀ ಕುಲಾಚಾರ್ಯರು ಹಲವರು ಭೋಜನಕೂಟವೊಂದಕ್ಕೆ ಹೋಗಿದ್ದರು. ದಾದಾಭಾಯಿಯ ಪೂರ್ವಿಕರಲ್ಲೊಬ್ಬನಾದ ಬೆಹ್ರಾಮ್ ಜೀ ಮೆಹೆರ್ ನೋಸ್ ಜೀಯು ಸ್ವಲ್ಪ ತಡವಾಗಿ ಬಂದು ಸ್ಥಳಕ್ಕಾಗಿ ಅಲ್ಲಿಲ್ಲಿ ಸುತ್ತಾಡುತ್ತಿದ್ದನು. ಆಗ ಅಲ್ಲಿದ್ದ ಸದಸ್ಯರಲ್ಲೊಬ್ಬನು "ದೋರ್ದಿಯಂತೆ (ತೆಂಗಿನ ನಾರಿನ ಹಗ್ಗದಂತೆ)ಯಾಕೆ ತಿರುಚಿಕೊಂಡು ಸುತ್ತುತ್ತಿದ್ದೀಯೆ?" ಎಂದು ಆತನನ್ನು ವಿನೋದವಾಗಿ ಕೇಳಿದನು. ಅಂದಿನಿಂದ 'ದೋರ್ದಿ' ಎಂಬ ಹೆಸರು ಆತನಿಗೂ ಆತನ ವಂಶೀಯರಿಗೂ ಅಂಟಿಕೊಂಡು ಬಂದಿತು.

ಮಲ್ಹಾರ ರಾವ್ ಗಾಯಕವಾಡನಲ್ಲಿ ದಾದಾಭಾಯಿ ಮುಖ್ಯ ಮಂತ್ರಿಯಾಗಿದ್ದಾಗ ಆತನನ್ನು ಯಾವದೋ ಒಂದು ಕೆಲಸ ಮಾಡಲು ಒತ್ತಾಯಪಡಿಸಿದಾಗ, ಅದರಿಂದ ಒಳ್ಳೆಯದಕ್ಕಿಂತ ಕೆಡುಕೇ ಹೆಚ್ಚಾಗಿ ಆಗುವುದೆಂದು ತಿಳಿದು ಅವನು, "ಮಹಾರಾಜ್, ನನ್ನ ಹೆಸರು 'ದೋರ್ದಿ' ಎಂದು. ಪ್ರಭೂ, 'ದೋರ್ದಿ'ಯನ್ನು ಸುಟ್ಟರೂ, ಅದರ ತಿರುಚನ್ನು ನಾಶಮಾಡಲಾಗುವುದಿಲ್ಲ, ಇದು ನಿಮಗೆ ತಿಳಿದೇ ಇದೆ. ನನ್ನ ವಿಷಯವೂ ಹಾಗೆಯೇ. ಒಂದು ಬಾರಿ ಒಂದು ನಿರ್ಧಾರಕ್ಕೆ ಬಂದರೆ, ಅದರಿಂದ ಯಾವುದೂ ನನ್ನನ್ನು

ಕದಲಿಸಲಾರದು" ಎಂದು ಹೇಳಿದನು.

ಈ ಬಗೆಯ ಸ್ಥೈರ್ಯ ಧೈರ್ಯಗಳಿಗೆ ಆತನು ಹೌಸ್ ಆಫ್ ಕಾಮನ್ಸ್ ಸಭೆಯನ್ನು ಪ್ರವೇಶಿಸಲು ನಡಸಿದ ಅದ್ಭುತವಾದ ಹೋರಾಟವನ್ನು ಉದಾಹರಿಸಬಹುದು. ಜಯದ ಸಂಭವ ಅತ್ಯಲ್ಪವೆಂದು ತೋರಿದಾಗ್ಯೂ, ಮಿತ್ರರ ಉಪೇಕ್ಷೆಯನ್ನೂ ಶತ್ರುಗಳ ವಿರೋಧವನ್ನೂ ಲಕ್ಷಿಸದೆ, ಸೋಲುಗಳಿಂದ ಎದೆಗುಂದದೆ, ಏಳು ವರ್ಷಕಾಲ ಚುನಾವಣೆಯ ಸಾಹಸ ನಡಸಿದನು. ಹೋಲ್ಬರ್ನ್ ಜಿಲ್ಲೆಯಿಂದ ಉಮೇದುವಾರನಾಗಿ ನಿಂತು ಸೋಲಾಗಲು, ಸೆಂಟ್ರಲ್ ಫಿನ್ಸ್‌ಬರಿ ಜಿಲ್ಲೆಯಿಂದ ನಿಂತು ಐದು ವರ್ಷಗಳ ಕಾಲ ಕಾರ್ಯಸಾಧನೆಮಾಡಿದನು. ದಾದಾಭಾಯಿ ಸ್ವಾತಂತ್ರ್ಯವಾದಿ (Liberal) ಪಕ್ಷಕ್ಕೆ ಸೇರಿದವನು. ಆ ಪಕ್ಷದ ಕಾರ್ಯ ಕಾರೀ ಸಮಿತಿಯ ಸದಸ್ಯರೇ ಇವನ ಉಮೇದುವಾರಿಕೆಗೆ ವಿರೋಧವಾಗಿದ್ದರು. ಚುನಾವಣೆಯಲ್ಲಿ ಗೆಲ್ಲುವುದು ಅಸಂಭವವಾಗಿತ್ತು. ಆ ಸಮಯದಲ್ಲಿ ಅವನನ್ನು ನೋಡಲು ಬಂದ ಆಂಗ್ಲ ಸ್ನೇಹಿತನೂ ಆ ಕ್ಷೇತ್ರದಲ್ಲಿ ವೋಟುದಾರನೂ ಆದ ಡಬ್ಲ್ಯು. ಎ. ಚೇಂಬರ್ಸ್ ಎಂಬಾತನೊಡನೆ ತನ್ನ ಪಕ್ಷದ ಅಧಿಕಾರಿಗಳ ವರ್ತನೆಯನ್ನು ಕುರಿತು ದಾದಾಭಾಯಿ ಹೀಗೆ ಹೇಳಿದನು: "ಸಾಧುವಾದ ಈ ಹಿಂದುವನ್ನು ಅದುಮಿ ಬಿಡಬಹುದೆಂದು ಅವರು ತಿಳಿದಿದ್ದಾರೆ. ಆದರೆ ಅವರಿಗೆ ಪಾಠ ಕಲಿಸುತ್ತೇನೆ. ಈ ಚುನಾವಣಾ ಕ್ಷೇತ್ರದಿಂದ ನಾನು ಕದಲುವುದಿಲ್ಲ." ಕಡೆಗೂ ಆ ಕ್ಷೇತ್ರದಿಂದಲೇ ಅವನು ಜಯ ಹೊಂದಿದನು

ದಾದಾಭಾಯಿಯ ಶೈಶವಕ್ಕೆ ಸಂಬಂಧ ಪಟ್ಟ ಯಾವ ವಿವರಗಳೂ ಉಳಿದು ಬಂದಿಲ್ಲ. ಚಿಕ್ಕಂದಿನಲ್ಲಿಯೆ ಬಹು ಬುದ್ಧಿವಂತನಾಗಿದ್ದು ಮುಂದೆ ಪ್ರಸಿದ್ಧನಾಗುತ್ತಾನೆಂಬ ಸೂಚನೆಗಳು ಕಂಡು ಬರುತ್ತಿದ್ದವೆಂದು ಹೇಳುವುದಕ್ಕೆ ಆಧಾರವಾದ ಸಂಗತಿಗಳೂ ದೊರೆತಿಲ್ಲ. ಅವನಿಗೆ ನಾಲ್ಕು ವರ್ಷ ವಯಸ್ಸಿರುವಾಗ ತಂದೆ ತೀರಿ ಕೊಂಡನೆಂಬ ಸಂಗತಿ ಮಾತ್ರ ತಿಳಿದು ಬಂದಿದೆ. " ಚಿಕ್ಕ ಮಗುವಾಗಿದ್ದಾಗ ನನ್ನ ಮನಸ್ಸನ್ನು ಒಂದು ಭಾವನೆ ಆವರಿಸಿತು: ತಂದೆ ತೀರಿಹೋದ್ದರಿಂದ ಇತರ ಸ್ನೇಹಿತರಂತೆ ಚಂದ್ರನೂ ನನ್ನಲ್ಲಿ ಸಹಾನುಭೂತಿಯುಳ್ಳವನಾಗಿದ್ದಾನೆ. ಯಾಕೆಂದರೆ ನಾನು ಮನೆಯ ಮುಂಭಾಗಕ್ಕೆ ಹೋಗಲಿ ಹಿಂಭಾಗಕ್ಕೆ ಬರಲಿ, ಚಂದ್ರನೂ ನನ್ನೊಡನೆ ಅಲ್ಲಿಗೆ

ಬರುತ್ತಿದ್ದನು. ಕನಿಕರವೆಂದರೆ ನನಗೆ ಆಗಲೂ ಇಷ್ಟ, ಈಗಲೂ ಇಷ್ಟ,"
—ಎಂದು ತಿಳಿಸಿದ್ದಾನೆ.

ಗುಣವಂತೆಯಾದ ಅವನ ತಾಯಿಯೇ ತಂದೆಯೂ ಆಗಿ ಅವನ ಯೋಗ ಕ್ಷೇಮವನ್ನು ನೋಡಿಕೊಂಡಳು. ಮನೆಯಲ್ಲಿ ಬಡತನವಿದ್ದರೂ ಬಾಲಕನನ್ನು ಸ್ಕೂಲಿಗೆ ಹಾಕಿ, ಅವನ ಪೋಷಣೆಗಾಗಿ ಕಷ್ಟಪಟ್ಟು ಕೆಲಸ ಮಾಡಿದಳು. ಟಿ. ಪಿ. ಓ'ಕೊನ್ನಾರನ ಪತ್ರಿಕೆಯಾದ 'ಎಂ. ಎ. ಪಿ.' ಗೆ ೧೯೦೪ ರಲ್ಲಿ ಬರೆದ ಒಂದು ಚಿಕ್ಕ ಲೇಖನದಲ್ಲಿ ದಾದಾಭಾಯಿ ತನ್ನ ಬಾಲ್ಯ ಜೀವನವನ್ನು ಕುರಿತು ಹೀಗೆ ಹೇಳಿದ್ದಾನೆ.

ಈ ಕಥನದಲ್ಲಿ ಆಕೆಯ ವಿಷಯ ಕಡೆಯಲ್ಲಿ ಬಂದರೂ ಆಕೆ ನನ್ನ ಸ್ಮೃತಿಯಲ್ಲಿ ಎಲ್ಲದಕ್ಕೂ ಮೊದಲಿನಲ್ಲಿದ್ದಾಳೆ. ಆ ನನ್ನ ತಾಯಿ ಆಕೆಯ ಒಬ್ಬನೇ ಮಗನಾದ ನಾನಿನ್ನೂ ಚಿಕ್ಕವನಾಗಿರುವಾಗಲೇ ವೈಧವ್ಯ ದುಃಖವನ್ನು ಹೊಂದಿದರೂ, ಪ್ರಪಂಚದಲ್ಲಿ ನಾನೇ ಅವಳ ಸರ್ವಸ್ವವೆಂದು ತಿಳಿದು, ನನ್ನಲ್ಲೇ ಪೂರ್ಣ ಆಸೆಯನ್ನಿಟ್ಟು, ಪುನಃ ಮದುವೆಯಾಗದೆ ವಿಧವೆಯಾಗಿಯೇ ಉಳಿದಳು. ತನ್ನ ಮಗುವಿಗಾಗಿ ಕಷ್ಟಪಟ್ಟು ಕೆಲಸ ಮಾಡಿದಳು. ಸೋದರನೊಬ್ಬನು ಆಕೆಗೆ ನೆರವಾದನು. ಅನಕ್ಷರಸ್ಥಳಾದರೂ, ನನ್ನಲ್ಲಿ ಪೂರ್ಣ ಪ್ರೀತಿಯನ್ನಿಟ್ಟಿದ್ದರೂ, ತಿಳಿವಳಿಕಸ್ಥಳಾದ ತಾಯಿಯಾಗಿದ್ದಳು. ನನ್ನನ್ನು ಹಿಡಿತದಲ್ಲಿಟ್ಟುಕೊಂಡಿದ್ದಳು. ನೆರೆ ಹೊರೆಯವರು ಆಕೆಯ ಬುದ್ಧಿವಾದವನ್ನು ಕೇಳುತ್ತಿದ್ದರು. ಸ್ತ್ರೀ ವಿದ್ಯಾಭ್ಯಾಸಕ್ಕಾಗಿ ನಾನು ಮಾಡಿದ ಕೆಲಸಗಳಲ್ಲೂ, ಆ ಕಾಲದ ಅವಿಚಾರಾಭಿಪ್ರಾಯಗಳಿಗೆ ವಿರುದ್ಧವಾಗಿ ನಡಸಿದ ಇತರ ಸಾಮಾಜಿಕ ಸುಧಾರಣಗಳಲ್ಲೂ ನನಗೆ ಹೃತ್ಪೂರ್ವಕವಾಗಿ ಸಹಾಯಮಾಡಿದಳು. ನಾನು ಏನಾಗಿದ್ದೇನೆಯೊ ಅದಕ್ಕೆಲ್ಲ ಆಕೆಯೇ ಕಾರಣ.

ಕಳೆದ ಶತಮಾನದ ಆದಿಭಾಗದಲ್ಲಿ ಬೊಂಬಾಯಿಯಲ್ಲಿ ದೇಶೀಯ ಶಿಕ್ಷಣ ಸಮಿತಿ (Native Education Society) ಎಂಬ ಸಂಸ್ಥೆ ರೂಪಿತವಾಯಿತು. ಆ ಸಂಸ್ಥೆ ಶಾಲೆಯೊಂದನ್ನು ತೆರೆಯಿತು . ನನ್ನ ಸ್ಥಳೀಯ ಸ್ಕೂಲಿನ ಮಾಸ್ತರನು.... ...ತನ್ನ ಮಗನನ್ನು ಸ್ಕೂಲಿಗೆ ಕಳಿಸಿದನು; ನನ್ನನ್ನೂ ಕಳಿಸುವಂತೆ ನಮ್ಮ ತಾಯಿಯನ್ನು ಒಪ್ಪಿಸಿದನು; ಇದು ನನ್ನ ಇಡೀ ಜೀವನ ಯಾತ್ರೆಯ ತಳಹದಿಯಾಯಿತು. ಶಿಕ್ಷಣದ ಆಗ ಪೂರ್ಣವಾಗಿ ಉಚಿತವಾಗಿತ್ತು. ....ಈ ಸಂಗತಿಯಿಂದ ನಾನು ಉಚಿತ ಶಿಕ್ಷಣ ವಿಚಾರದಲ್ಲೂ, ಪ್ರತಿ ಮಗುವಿಗೂ—ಅದು ಬಡವನಿರಲಿ ಶ್ರೀಮಂತನಿರಲಿ—ಅದಕ್ಕೆ ಸಾಧ್ಯವಿರುವ ಶಿಕ್ಷಣವನ್ನೆಲ್ಲ ಹೊಂದುವ ಅವಕಾಶವಿರಬೇಕೆಂಬ ತತ್ತ್ವವಿಚಾರದಲ್ಲೂ ಉತ್ಸಾಹ ಭರಿತನಾದೆ.

ಮಗ್ಗಿಯಲ್ಲೂ ಮಾನಸಿಕ ಗಣಿತದಲ್ಲಿಯೂ ನಾನು ಚುರುಕಾಗಿದ್ದುದರಿಂದಲೂ, ಆಕಾರದಲ್ಲಿ ಚಿಕ್ಕವನಾಗಿದ್ದು ಬಣ್ಣದಲ್ಲಿ ಚೆಲುವಾಗಿದ್ದುದರಿಂದಲೂ, ನಮ್ಮ ನೇಟಿವ್ ಸ್ಕೂಲಿನಲ್ಲಿ ನಾನು 'ಪ್ರದರ್ಶನ ಬಾಲಕ'ನಾಗಿದ್ದೆ. ವಿಶೇಷ ಸಂದರ್ಭಗಳಲ್ಲಿ ಶಾಲೆಯ ಹುಡುಗರನ್ನೆಲ್ಲ ಹೊರಗೆ ರಸ್ತೆಯ ಪಕ್ಕದಲ್ಲಿ ಸಾಲಾಗಿ ನಿಲ್ಲಿಸುತ್ತಿದ್ದರು. ಅಲ್ಲಿ ಜನಗಳು ಸುತ್ತಲೂ ಗುಂಪಾಗಿ ಸೇರುತ್ತಿದ್ದರು. ಅಲ್ಲಿ ಇತರ ಹುಡುಗರೊಡನೆ ನನ್ನ ಬುದ್ಧಿಶಕ್ತಿಯ ಪರೀಕ್ಷೆಯೂ ನಡೆದು, ಮೆಚ್ಚುತ್ತಿದ್ದ ಸಭಿಕರು ವಾವಾ ಎಂದು ಗಟ್ಟಿಯಾಗಿ ಕೂಗುತ್ತಿದ್ದರು.

*  *  *  *

ನಾನು ಸ್ಕೂಲನ್ನು ಸೇರಿದಾಗ ಇಬ್ಬರು ಪರಂಗಿ ಉಪಾಧ್ಯಾಯರಿದ್ದರು— ಸಾಹಿತ್ಯಶಾಖೆಗೆ ಒಬ್ಬರು, ಗಣಿತದ ಶಾಖೆಗೆ ಇನ್ನೊಬ್ಬರು. ನಮಗೆ ಇಷ್ಟ ಬಂದಂತೆ ವರ್ತಿಸಲು ನಮ್ಮನ್ನು ಬಿಟ್ಟಿದ್ದರು, ಆದರೆ ನನಗೆ ಸೋಮಾರಿಯಾಗಿರಲು ಇಷ್ಟವಿರಲಿಲ್ಲ, ಒಂದಲ್ಲ ಒಂದು ವಿಧದಲ್ಲಿ ನಾನು ಚಟುವಟಿಕೆಯಾಗಿರಬೇಕು. ನನಗೆ ಜ್ಞಾಪಕಶಕ್ತಿ ಚೆನ್ನಾಗಿತ್ತು, ಬೇಕಾದಷ್ಟು ಕಥೆಗಳು ಬರುತ್ತಿದ್ದವು. ಆದ್ದರಿಂದ ಶಾಲೆಯಲ್ಲಿ ನನ್ನ ಮುಕ್ಕಾಲುಪಾಲು ಕಾಲವೆಲ್ಲ ಮೆಚ್ಚಿಕೆಯಿಂದ ಕೇಳುತ್ತಿದ್ದ ಬಾಲಕವೃಂದಕ್ಕೆ ಕಥೆಗಳನ್ನು ನೆಯ್ಯುವುದರಲ್ಲಿ ಕಳೆಯುತ್ತಿತ್ತು. ಶಿಸ್ತು ಬಹು ಸಡಿಲವಾಗಿದ್ದುದರಿಂದ ಅನೇಕ ವೇಳೆ ನಾವೆಲ್ಲ ಆತಂಕವಿಲ್ಲದೆ ಸ್ಕೂಲಿನಿಂದ ಹೊರಗೆ ಹೋಗಿ ಇಡೀ ದಿನವನ್ನು ಆಟಗಳಲ್ಲಿ ಕಳೆಯುತ್ತಿದ್ದೆವು. ಕಥೆ ಹೇಳುವ ಶಕ್ತಿ ಇದ್ದುದರಿಂದಲೂ ಆಟಗಳಲ್ಲಿ ಕೌಶಲವಿದ್ದುದರಿಂದಲೂ ನಾನು ಬಾಲಕರ ಮುಂದಾಳಾದೆ; ಮತ್ತು ಈ ರೀತಿಯ ಪದವಿಯಿಂದ ಬರುವ ಆತ್ಮಪ್ರತ್ಯಯವನ್ನೂ ಭರವಸೆಯನ್ನೂ ಸಂಪಾದಿಸಿದೆ.

ನನ್ನ ಬಾಲ್ಯದ ಇನ್ನೊಂದು ಸಂಗತಿಯನ್ನು ಇಲ್ಲಿ, ನನ್ನ ತಾಯಿಯ ಹೇಳಿಕೆಯಿಂದ (ನನ್ನ ನೆನಪಿನಿಂದಲ್ಲ), ಹೇಳುತ್ತೇನೆ. ನನ್ನ ತಾಯಿ ತಿಳಿಸುವಂತೆ, ಯಾವನಾದರೂ ಹುಡುಗ ನನಗೆ ಕೆಟ್ಟ ಮಾತನ್ನಾಡಿದರೆ ನಾನು 'ನಿನ್ನ ಕೆಟ್ಟಮಾತು ನಿನ್ನ ಬಾಯಲ್ಲೇ ಇರುತ್ತೆ' ಎಂದು ಹೇಳುತ್ತಿದ್ದೆನಂತೆ.

ಸುಮಾರು ಹದಿನೈದುವರುಷವಾದಾಗ ನನಗೆ ತಿಳಿವಳಿಕೆ ಬಂತು. ಒಂದು ರಸ್ತೆಯ ಒಂದು ಗೊತ್ತಾದ ಸ್ಥಳದಲ್ಲಿ ನಿಂತು ಕೀಳುಭಾಷೆಯನ್ನು ಉಪಯೋಗಿಸುವುದಿಲ್ಲವೆಂದು ಪ್ರತಿಜ್ಞೆ ಮಾಡಿದೆ. ಇದು ನಿನ್ನೆ ನಡೆಯಿತೆನ್ನುವಂತೆ ಜ್ಞಾಪಕವಿದೆ. ಆಗಿನಿಂದ ಮುಂದಕ್ಕೆ, ನನ್ನ ವಿದ್ಯಾಭ್ಯಾಸ ಮುಂದುವರಿದಂತೆ, ಇದನ್ನು ಮಾಡುತ್ತೇನೆ, ಅದನ್ನು ಮಾಡುವುದಿಲ್ಲ ಎಂಬ ನಿರ್ಣಯಗಳು ನನ್ನಲ್ಲಿ ನಡೆದವು; ಅವುಗಳನ್ನು ನಾನು ನಿಷ್ಠೆಯಿಂದ ಪಾಲಿಸಿದ್ದೇನೆಂದು ಹೇಳಬಹುದೆಂದು ತೋರುತ್ತದೆ.

ಈ ಕೆಳಗಿನ ಕಥೆಯಿಂದ ಸುತ್ತಲಿನ ವಾತಾವರಣ ಎಷ್ಟು ಅಹಿತಕರ

ವಾಗಿತ್ತೆಂದು ತಿಳಿಯುತ್ತದೆ.

ಹುಡುಗನಾಗಿದ್ದಾಗ ಊಟಕ್ಕೆ ಮುಂಚೆ ಕೊಂಚ ಕುಡಿಯುವುದು ಅಭ್ಯಾಸವಾಗಿತ್ತು. ಒಂದು ದಿನ, ಮನೆಯಲ್ಲಿ ಮದ್ಯವಿರಲಿಲ್ಲವಾದ್ದರಿಂದ, ಎದುರಿಗಿದ್ದ ಅಂಗಡಿಗೆ ಹೋಗಿ ಕುಡಿಯುವಂತೆ ಕಳಿಸಿದರು. ಅಲ್ಲಿಗೆಹೋದದ್ದರಿಂದ ಆದ ಅಪಮಾನವನ್ನೂ ನಾಚಿಕೆಯನ್ನೂ ನಾನು ಮರೆಯಲೇ ಇಲ್ಲ. ಅಷ್ಟು ಸಾಕಾಯಿತು, ಮದ್ಯದಂಗಡಿ ತಿರುಗಿ ನನ್ನ ಮುಖವನ್ನು ಕಾಣಲಿಲ್ಲ.

ಸ್ಕೂಲಿನಲ್ಲಿ ಜಂಭದ ಕೋಳಿಯೊಬ್ಬನ ಗರ್ವವನ್ನು ಇಳಿಸಿದ್ದನ್ನು ಇನ್ನೊಂದು ಸ್ಮೃತಿ ಚಿತ್ರದಲ್ಲಿ ಹೇಳಿದ್ದಾನೆ.

ನನ್ನ ಸಹಪಾಠಿಯೊಬ್ಬನು ಸ್ಕೂಲು ಪರೀಕ್ಷೆಯಲ್ಲಿ ಒಂದು ಬಾರಿ, ಬಾಯಿಪಾಠಮಾಡಿ ನಾನು ನಿರೀಕ್ಷಿಸಿಕೊಂಡಿದ್ದ ಬಹುಮಾನವನ್ನು ಹೊಡೆದದ್ದು ಜ್ಞಾಪಕವಿದೆ. ಆದರೆ ಬಹುಮಾನದ ಹಂಚಿಕೆಯ ಸಮಯದಲ್ಲಿ, ಪುಸ್ತಕದಲ್ಲಿಲ್ಲದ ಪ್ರಶ್ನೆಗಳನ್ನು ಕೇಳಲು, ಅವನು ತಡವರಿಸಿ ಮುರಿದುಬಿದ್ದನು. ಆ ಸಮಯವನ್ನು ಹಿಡಿದು, ಮುಂದಕ್ಕೆ ನುಗ್ಗಿ ನಾನು ಉತ್ತರ ಹೇಳಿದೆ. ಅಲ್ಲಿ ಆ ಕೂಡಲೆ, ಸಭೆಯಲ್ಲಿದ್ದ ಒಬ್ಬ ಇಂಗ್ಲಿಷ್ ಗೃಹಸ್ಥನು ನನಗೆ ಬಹುಮಾನವನ್ನು ಕೊಟ್ಟನು. ಅಲ್ಲಿ ಹಾಜರಿದ್ದ, ಮಿಸೆಸ್ ಪೊಸ್ಟನ್ಸ್ ಎಂಬ ಸ್ತ್ರೀ ಸಂಚಾರಿಯು 'ಪಶ್ಚಿಮ ಇಂಡಿಯಾ' (Western India) ಎಂಬ ತನ್ನ ಗ್ರಂಥದಲ್ಲಿ ಈ ಸಂಗತಿಯನ್ನು ನಮೂದಿಸಿದ್ದಾಳೆ.

ಆ ಪುಸ್ತಕದಲ್ಲಿ ಮಿಸೆಸ್ ಪೊಸ್ಟನ್ಸ್ ದಾದಾಭಾಯಿಯನ್ನು 'ಮುಂಚಾಚಿರುವ ಹಣೆಯೂ ಚಿಕ್ಕ ಹೊಳೆಯುವಕಣ್ಣುಗಳೂ ಉಳ್ಳ' ಚಿಕ್ಕ ಪಾರಸೀ ಬಾಲಕನೆಂದೂ ಅವನು 'ವಿಶೇಷವಾಗಿ ಗಮನವನ್ನು ಸೆಳೆಯುತ್ತಿದ್ದನೆಂದೂ' ವರ್ಣಿಸಿದಾಳೆ. 'ತರಗತಿಯಲ್ಲಿ ಪ್ರಶ್ನೆಯನ್ನು ಕೇಳುವುದೇತಡ ಅವನು ಇತರರಿಗಿಂತ ಮುಂಚೆ ಎದ್ದು ನಿಂತು, ಆಳವಾದ, ಆತಂಕದ ಯೋಚನೆಯಿಂದ ಹುಬ್ಬುಗಳನ್ನು ಸಂಕುಚಿಸಿ, ತುಟಿತೆರೆದು, ಬೆರಳುಗಳನ್ನು ತವಕದಿಂದ ಮೇಷ್ಟರ ಕಡೆ ಎತ್ತಿ, ಉತ್ತರವನ್ನು ತ್ವರಿತವಾಗಿ ಮನಸ್ಸಿನಲ್ಲಿ ಮಾಡಿಕೊಂಡು, ಅತಿ ಅವಸರದಿಂದ ಅದನ್ನು ಒದರಿಬಿಡುತ್ತಿದ್ದನು. ಆ ಚಿಕ್ಕ ಪೋರ ಇತರರನ್ನು ಮೀರಿಸುವ ಆಸೆಯಿಂದಲೇ ಅಷ್ಟು ಚಟುವಟಿಕೆಯಾಗಿದ್ದನೆಂದು ತೋರುತ್ತದೆ. ಅವನ ಬುದ್ಧಿ ಶಕ್ತಿಯೂ ಅವನಿಗೆ ತುಂಬ ಬಹುಮಾನವನ್ನು ತರುವಂತಿತ್ತು' ಎಂದೂ ಬರೆದಿದಾಳೆ.

'ಈ ಚಿಕ್ಕಪೋರ' ತನ್ನ ಚಿಕ್ಕ ಹೆಗಲಮೇಲೆ ಗೃಹಸ್ಥನ ಹೊರೆಯನ್ನು

ಹೊತ್ತಿದಾನೆಂದು ಆಕೆಗೆ ತಿಳಿಸಿದ್ದರೆ, ಆಕೆಯ ದೃಷ್ಟಿಯಲ್ಲಿ ಅವನು ಏರುತ್ತಿದ್ದನೊ ಬೀಳುತ್ತಿದ್ದನೊ ತಿಳಿಯದು. ಆ ಕಾಲದಲ್ಲಿ ಬಾಲ್ಯ ವಿವಾಹ ಪಾರಸಿಗಳಲ್ಲಿ ಒಂದು ನಿಯಮವಾಗಿತ್ತೆಂದು ಹೇಳ ಬಹುದು. ತಾಯಿ ಮಗಳಿಗೆ ಶೀಘ್ರವಾಗಿ ಗಂಡನನ್ನು ಹುಡುಕಿ ಮದುವೆ ಮಾಡಿದಷ್ಟೂ ಆಕೆಯ ಸಂತೋಷ ಹೆಚ್ಚುತ್ತಿತ್ತು. ಕೆಲವು ಅಪೂರ್ವ ಸಂದರ್ಭಗಳಲ್ಲಿ ವಧೂವರರು ಹುಟ್ಟುವುದಕ್ಕೆ ಮುಂಚೆಯೆ ಲಗ್ನಗಳು ಏರ್ಪಾಡಾಗುತ್ತಿದ್ದವು. ದಾದಾಭಾಯಿಗೆ ಹದಿಮೂರುವರುಷ ವಯಸ್ಸಾಗುವ ಮುಂಚೆಯೆ ಅವನ ತಾಯಿ ಹೆಣ್ಣನ್ನು ದೊರಕಿಸಿರದಿದ್ದರೆ ಅವನನ್ನು ಅಪ್ರಯೋಜಕನೆಂದೇ ಹೇಳ ಬೇಕಾಗುತ್ತಿತ್ತು. ಆದ್ದರಿಂದ ಹನ್ನೊಂದನೆಯ ವಯಸ್ಸಿನಲ್ಲಿಯೇ ಅವನಿಗೆ ಸೊರಬ್‌ಜೀ ಷರಾಫ್‌ನ ಏಳುವರ್ಷದ ಮಗಳು ಗುಲ್‌ಬಾಯಿಯನ್ನು ಕೊಟ್ಟು ಮದುವೆಯಾಯಿತು.

# ೨. ಭಾರತದ ಭವಿಷ್ಯತ್ತು

ಹೊಸ ಕಾಲೇಜೊಂದಕ್ಕೆ ಆರು ಜನ ವಿದ್ಯಾರ್ಥಿಗಳನ್ನು ಆರಿಸಲು ಅಸಿಸ್ಟೆಂಟ್ ಪ್ರೊಫೆಸರ್ ಬಾಲಗಂಗಾಧರ ಶಾಸ್ತ್ರಿಯು ದಾದಾಭಾಯಿಯ ಸ್ಕೂಲಿಗೆ ಬಂದನು. ಬಾಲಕನಾದ ದಾದಾಭಾಯಿ ತನ್ನ ಅದೃಷ್ಟ ಹೇಗಿದೆಯೊ ಎಂದು ಹೆದರಿದ್ದನು. ತರಗತಿಯಲ್ಲೆಲ್ಲ ಅವನು ತೇಜಸ್ವಿಯಾದ ಹುಡುಗನಾಗಿದ್ದರೂ ಅವನನ್ನು ಕೊನೆಗೆ ಹಾಕಿದ್ದರು. ತರಗತಿಯ ಉಪಾಧ್ಯಾಯನಿಗೆ ಶ್ರೀಮಂತರ ಮಕ್ಕಳ ವಿಚಾರದಲ್ಲಿ ಅಭಿಮಾನ. ಬಡವನಾದ ದಾದಾನಿಗೆ ಇದು ಸಹಿಸುತ್ತಿರಲಿಲ್ಲ. ಅಸಮಾಧಾನವನ್ನು ಬಚ್ಚಿಡುವುದು ಅವನ ಸ್ವಭಾವದಲ್ಲಿರಲಿಲ್ಲ. ಆಗಾಗ್ಗೆ ಅವನು ಆ ರೀತಿಯ ಅನ್ಯಾಯವನ್ನು ಪ್ರತಿಭಟಿಸುತ್ತಿದ್ದನು. ಆದರೆ ಅದರಿಂದ ಕೆಡುಕೇ ಜಾಸ್ತಿಯಾಗುತ್ತಿತ್ತು. ಬಾಲಗಂಗಾಧರನು ಅವನನ್ನು ಚುನಾಯಿಸಿ ಮೇಲಿನ ಅಂತಸ್ತಿನ ತರಗತಿಗೆ ಅವನು ಅರ್ಹನೆಂದು ನಿರ್ಣಯಿಸಿ ಒಳ್ಳೆಯ ಕೆಲಸವನ್ನೇ ಮಾಡಿದನು. ಅಲ್ಲಿಂದ ಮುಂದೆ, ದಾದಾಭಾಯಿಯು ಶ್ರಮಪಟ್ಟು ವ್ಯಾಸಂಗ ಮಾಡಿ ಪ್ರಶಸ್ತಿಗಳನ್ನು ಸಂಪಾದಿಸುತ್ತ ಕಡೆಯಲ್ಲಿ ಗಣಿತಶಾಸ್ತ್ರದ

ಅಧ್ಯಾಪಕನಾದನು.

ದಾದಾಭಾಯಿ ಇನ್ನೂ ಶಿಶುವಾಗಿರುವಾಗಲೇ ಬೊಂಬಾಯಿಯಲ್ಲಿ ದೊಡ್ಡ ಶಿಕ್ಷಣ ಚಳವಳಿ ಆರಂಭವಾಗಿತ್ತು. ಆಗ ಬೊಂಬಾಯಿನ ಗವರ್ನ ರಾಗಿದ್ದ ಮೌಂಟ್‌ಸ್ಟುಅರ್ಟ್ ಎಲ್ಫಿನ್‌ಸ್ಟನ್ನನು ಉತ್ಸಾಹಿಯಾದ ವಿದ್ಯಾ ಪಕ್ಷಪಾತಿಯಾಗಿದ್ದನು. ಆಗ ಪ್ರಚಲಿತವಾದ ಅಧಿಕಾರೀ ದೃಷ್ಟಿಯು ಪಾಶ್ಚಾತ್ಯ ವಿದ್ಯೆಯ ಪ್ರಚಾರಕ್ಕೆ ವಿರುದ್ಧವಾಗಿದ್ದರೂ, ಹೆಸರುವಾಸಿಯಾದ ಆ ಆಡಳಿತಗಾರನು ಜನರಲ್ಲಿ ಪ್ರೌಢವಿದ್ಯೆಯನ್ನು ಹರಡಲು ಪ್ರಯತ್ನಿಸು ತ್ತಿದ್ದ ಭಾರತೀಯರ ವಿಷಯದಲ್ಲಿ ಬಹು ಸಹಾನುಭೂತಿಯುಳ್ಳವ ನಾಗಿದ್ದನು. ಆತನ ಪ್ರೋತ್ಸಾಹದಿಂದ 'ದೇಶೀಯರ ಶಿಕ್ಷಣ ಸಂಸ್ಥೆ' (The Native Education Society)ಯು ಸ್ಥಾಪನೆ ಯಾಯಿತು. ಆ ಸಂಸ್ಥೆಗೆ ಅವನು ನಿರಂತರವಾಗಿ ಸಹಾಯಮಾಡುತ್ತಿದ್ದನು. ೧೮೨೭ ರಲ್ಲಿ ಆತನು ಅಧಿಕಾರದಿಂದ ನಿವೃತ್ತನಾದನು. ದೇಶೀಯ ರಾಜರುಗಳೂ ಜನರೂ ಆತನ ಹೆಸರನ್ನು ಚಿರಸ್ಥಾಯಿಯನ್ನಾಗಿ ಮಾಡುವ ಉದ್ದೇಶದಿಂದ, ಈ ದೇಶದ ಯುವಕರಿಗೆ ಯುರೋಪಿನ ಭಾಷೆ ಸಾಹಿತ್ಯ ವಿಜ್ಞಾನ ತತ್ತ್ವಶಾಸ್ತ್ರ ಇವುಗಳನ್ನು ಕಲಿಸುವ ಅಧ್ಯಾಪಕವರ್ಗವನ್ನು ಏರ್ಪಡಿ ಸುವುದಕ್ಕಾಗಿ, ಬಹುವಾಗಿ ನಿಧಿಯನ್ನು ಕೂಡಿಸಿದರು.

ನೇಟಿವ್ ಎಜುಕೇಷನ್ ಸೊಸೈಟಿಯು ನಡಸುತ್ತಿದ್ದ ಸ್ಕೂಲು ತರಗತಿಗಳ ಜೊತೆಗೆ ಕಾಲೇಜು ತರಗತಿಗಳನ್ನೂ ಸೇರಿಸಲಾಯಿತು. ಹೀಗೆ ಸ್ಕೂಲೂ ಕಾಲೇಜೂ ಒಟ್ಟಾದ ಸಂಸ್ಥೆ ಎಲ್ಫಿನ್‌ಸ್ಟನ್ ಇನ್‌ಸ್ಟಿಟ್ಯೂಷನ್ ಎಂದು ಹೆಸರಾಯಿತು. ಇಲ್ಲಿ ದಾದಾಭಾಯಿ ಸಾಹಿತ್ಯಕ್ಷೇತ್ರದ ಶ್ರೇಷ್ಠ ಕೃತಿಗಳನ್ನು ಮನನಮಾಡಿ ಚಿಂತಿಸುವುದನ್ನು ಅಭ್ಯಾಸಮಾಡಿದನು. ಇಲ್ಲಿ, ಜಗತ್ತಿನ ಧೀರ ಸಾಹಸಿಗಳ ಜೀವನ ಚರಿತೆಗಳನ್ನು ಅಭ್ಯಸಿಸಿ ತನ್ನಲ್ಲಿರುವ ಉದಾರಗುಣಗಳನ್ನೆಲ್ಲ ಪೋಷಿಸಿಕೊಂಡನು. ಇಲ್ಲಿಯೇ, ಅವನಿನ್ನೂ ಚಿಕ್ಕವ ನಿರುವಾಗಲೇ, ಸಮಾಜದ ಋಣದ ಅರಿವಾಯಿತು. ಈ ಕಾಲದಲ್ಲಿ ಅವನು ಓದಿದ ಗ್ರಂಥಗಳಲ್ಲಿ ಪಾರಸೀ ಮಹಾಪುರಾಣವಾದ ಫಿರ್ದೂಸಿಯ ಷಾನಾಮಾ ಸೇರಿದೆ. ಅವನಿಗೆ ಪ್ರಿಯವಾದ ಇನ್ನೊಂದು ಗ್ರಂಥ ಗುಜರಾತಿ ಯಲ್ಲಿದ್ದ "ಝರೋಸ್ಟ್ರರ ಕರ್ತವ್ಯಗಳು" ಎಂಬುದು. ಅದರ ಉಪದೇಶದ

ಸಾರ–ಶುದ್ಧವಾದ ಚಿತ್ತ, ಶುದ್ಧವಾದ ಮಾತು, ಶುದ್ಧವಾದ ಕಾರ್ಯ.

ಆದರೆ ನಾನು ಹೆಚ್ಚಾಗಿ ಓದಿ ಸವಿಯುತ್ತಿದ್ದದ್ದು ಇಂಗ್ಲಿಷ್ ಸಾಹಿತ್ಯ (ಎಂದು ಹೇಳುತ್ತಾನೆ). ವಾಟ್ಸ್‌ನ "ಮನಸ್ಸನ್ನು ಉತ್ತಮಗೊಳಿಸುವುದು" (Improvement of the Mind) ಎಂಬ ಕೃತಿ ನನ್ನ ಶೈಲಿಯನ್ನೂ ಯೋಚನೆಯ ವಿಧಾನವನ್ನೂ ಸ್ಥಿರೀಕರಿಸಿತು: ಒಂದು ಮಾತು ಸಾಕಾಗುವಲ್ಲಿ ಎರಡು ಮಾತುಗಳು ಎಂದಿಗೂ ಕೂಡದು, ಭಾವವೂ ಪದಪ್ರಯೋಗವೂ ಸುಸ್ಪಷ್ಟವಾಗಿರಬೇಕು. ಆದ್ದರಿಂದ ಅಲಂಕಾರಿಕವಾದ ಸೊಗಸಿನ ಬರವಣಿಗೆಯನ್ನು ತ್ಯಜಿಸಿದೆ.

ಇದರಿಂದ ಅವನು ವಾಗ್ಮಿಯೂ ಸರಳಮನಸ್ಕರಿಗೆ ಸುಲಭ ಗ್ರಾಹ್ಯನಾದ ಲೇಖಕನೂ ಆದನು.

ನನ್ನ ವಿದ್ಯಾಭ್ಯಾಸ ಮುಂದುವರಿದಂತೆ ನಾನು ಬಡವರ ವೆಚ್ಚದಲ್ಲಿ ಶಿಕ್ಷಣವನ್ನು ಹೊಂದಿದೆನೆಂದು ಮನವರಿಕೆಯಾಯಿತು (ಎಂದು ಹೇಳುತ್ತಾನೆ) ನಾನು ಸಹ ಬಡವರಲ್ಲಿಯೆ ಸೇರಿದವನು. ಆದ್ದರಿಂದಲೇ ಕೆಲವು ಸ್ಕೂಲು ಪುಸ್ತಕಗಳನ್ನು ಧನಿಕನಾದ ನನ್ನ ಸಹಾಧ್ಯಾಯಿ ಕಾಮಾ ಎಂಬಾತನಿಂದ ಹೊಂದಿದೆ. ಮುಂದೆ ಈತನ ಕುಟುಂಬದೊಡನೆ ಸಾರ್ವಜನಿಕ ಜೀವನದಲ್ಲಿಯೂ ವೈಯಕ್ತಿಕ ಜೀವನದಲ್ಲಿಯೂ ನನ್ನ ಸಂಬಂಧ ವಿಶೇಷವಾಗಿ ಬೆಳೆಯಿತು. ನನ್ನ ಶಿಕ್ಷಣವೂ ಅದರಿಂದ ಉಂಟಾಗುವ ಅನೇಕ ಪ್ರಯೋಜನಗಳೂ ಜನರಿಂದ ಬಂದವಾದ್ದರಿಂದ ನನ್ನಲ್ಲಿ ಉತ್ತಮವಾಗಿರುವುದನ್ನೆಲ್ಲ ಅವರಿಗೆ ಹಿಂದಿರುಗಿಸಬೇಕೆಂಬ ಭಾವ ನನ್ನಲ್ಲಿ ಬೆಳೆಯಿತು. ಜನತೆಯ ಸೇವೆಗಾಗಿ ಅರ್ಪಿಸಿಕೊಳ್ಳಬೇಕೆಂದು ತಿಳಿದೆ.

೧೮೪೦ ರಲ್ಲಿ ದಾದಾಭಾಯಿಗೆ ಕ್ಲೇರ್ ವಿದ್ಯಾರ್ಥಿವೇತನ ದೊರೆಯಿತು; ಎರಡು ವರ್ಷಗಳ ಬಳಿಕ ಹೊಸದಾಗಿ ಆರಂಭವಾದ ನಾರ್ಮಲ್ ಸ್ಕಾಲರ್ಸ್ ಎಂಬ ಪಂಡಿತರ ವರ್ಗಕ್ಕೆ ಅವನು ಸೇರಿದನು.

ಆ ಸುಖದ ದಿನಗಳಲ್ಲಿ ದಾದಾಭಾಯಿ ಎಲ್ಫಿನ್‌ಸ್ಟನ್ ಸಂಸ್ಥೆಯ ಬೆಳಕಾಗಿದ್ದನು. ಅವನ ಅಧ್ಯಾಪಕರೂ ಸಹಾಧ್ಯಾಯಿಗಳೂ ಅವನ ವಿಚಾರದಲ್ಲಿ ಹೆಮ್ಮೆಪಡುತ್ತಿದ್ದರು. ನೋಡುವುದಕ್ಕೆ ಅವನು ಚೆಲುವಾಗಿದ್ದನು; ಕಣ್ಣುಗಳಲ್ಲಿ ಅಪೂರ್ವವಾದ ಕಾಂತಿಯಿತ್ತು. ಚಟುವಟಿಕೆಯಾಗಿ ಒಳ್ಳೇ ಚುರುಕಾಗಿದ್ದನು. ನಡತೆಯಲ್ಲಿ ಋಜುವಾಗಿ ಗೌರವವಾಗಿದ್ದನು. ವಿದ್ಯಾವ್ಯಾಸಂಗ ಕಾಲದಲ್ಲಿ ಉದ್ದಕ್ಕೂ ಪ್ರಶಸ್ತಿಗಳನ್ನು ಸಂಪಾದಿಸಿ ಅಪೂರ್ವವಾದ ಬುದ್ಧಿ ಚೈತನ್ಯವನ್ನೂ ಖಚಿತವಾದ ಯೋಚನಾಶಕ್ತಿಯನ್ನೂ ವಿವೇಚನೆಯನ್ನೂ ತೋರ್ಪಡಿಸಿದನು. ಅಪ್ಪಟ ದೊಡ್ಡ ಮನುಷ್ಯನಾಗಿ ಉದಾತ್ತ

ಧ್ಯೇಯದ ದೇಶಾಭಿಮಾನಿಯಾಗಿ ಬೆಳೆಯುವ ಈ ಮನುಷ್ಯನ ವಿಶಿಷ್ಟ ಲಕ್ಷಣ ಗಳನ್ನು ಉಪಾಧ್ಯಾಯರು ಅರಿಯದಿರಲಿಲ್ಲ. ಪ್ರೊಫೆಸರ್ ಆರ್ಲಿಬಾರ್ ಅವ ನನ್ನು 'ಭಾರತದ ಭವಿಷ್ಯತ್ತು' ಎಂದು ಕರೆದನು. ಯಾವ ಪ್ರೊಫೆಸರನ ಭವಿಷ್ಯ ನುಡಿಯೂ ಈ ರೀತಿಯಾಗಿ ಪೂರ್ಣವಾಗಿ ಮುಂದಿನ ವಿದ್ಯಮಾನ ಗಳಿಂದ ನಿಜವಾಗಿರಲಿಲ್ಲ. ಈ ಭವಿಷ್ಯದಾಶಾ ಜ್ಯೋತಿಯು ಅನೇಕ ಕ್ಷೇತ್ರಗಳಲ್ಲಿ ಮುಂದಾಳಾಗಿದ್ದನು: ಈತನು ಮೊದಲನೆಯ ಭಾರತೀಯ ಪ್ರೊಫೆಸರು, ಭಾರತ ಜನರ ಸಾಮಾಜಿಕ ಬೌದ್ಧಿಕ ರಾಜಕೀಯ ಅಭ್ಯುದಯ ಕ್ಕಾಗಿ ಅನೇಕ ಸಂಸ್ಥೆಗಳನ್ನು ಸ್ಥಾಪಿಸಿದವರಲ್ಲಿ ಮೊದಲನೆಯವನು, ಬ್ರಿಟಿಷ್ ಪಾರ್ಲಿಮೆಂಟಿನ ಸದಸ್ಯನಾಗಲು (M.P.) ಇವನೇ ಮೊದಲನೆಯ ಭಾರತೀಯನು, ನಿಯೋಗ ಮಂಡಲಿ(Royal Commission)ಯ ಮೊದಲನೆಯ ಭಾರತೀಯ ಸದಸ್ಯ, ಇವೆಲ್ಲಕ್ಕು ಮೇಲಾಗಿ, ತನ್ನ ದೇಶ ಬಾಂಧವರಿಗೆ ಸ್ವಯಂ ರಾಜ್ಯಾಡಳಿತದ ಹಕ್ಕನ್ನು ಕೇಳಿದವರಲ್ಲಿ ಮೊದಲನೆಯ ವನೂ ಅಗ್ರಗಣ್ಯನೂ ಆಗಿದ್ದಾನೆ.

ಭಾರತೀಯರಿಗೆ ಪಾಶ್ಚಾತ್ಯ ಶಿಕ್ಷಣವನ್ನು ಒದಗಿಸಿ ರಾಜ್ಯಾಡಳಿತದಲ್ಲಿ ಅವರನ್ನು ಹೆಚ್ಚುಹೆಚ್ಚಾಗಿ ಸೇರಿಸಿಕೊಳ್ಳಬೇಕೆಂದು ವಾದಿಸುತ್ತಿದ್ದ ಮೌಂಟ್ ಸ್ಟುಅರ್ಟ್ ಎಲ್ಫಿನ್‌ಸ್ಟನ್ನನು ಬಹು ಕಾಲದ ಮುಂದೆ ಭಾರತ ಸ್ವಯಂ ರಾಜ್ಯಾಡಳಿತವನ್ನು ಅನುಭವಿಸುವುದನ್ನು ಚಿತ್ರಿಸಿಕೊಂಡಿದ್ದನು. ಆದರೆ ಅಧಿಕಾರವನ್ನು ಜನರಿಗೆ ವರ್ಗಾಯಿಸುವ ದಿನವನ್ನು ತ್ವರಿತಗೊಳಿ ಸುವ ಬಾಲಕನು ಆಗಲೆ ಹುಟ್ಟಿರುವನೆಂಬುದನ್ನು ಅವನು ಹೇಗೆ ಅರಿತಾನು? ದಾದಾಭಾಯಿಯ ವಿದ್ಯಾರ್ಥಿದಶೆಯಲ್ಲಿ ತಾಯ್ನಾಡು ನಿದ್ರೆ ಹೋಗುತ್ತಿತ್ತು; ಜನರಿಗೆ ತಮಗಾದ ಅನ್ಯಾಯಗಳ ವಿವೇಚನೆ ಇರಲಿಲ್ಲ, ತಮ್ಮ ಹಕ್ಕುಗಳ ಅರಿವಿರಲಿಲ್ಲ. ನಾಡಿನ ಜನರನ್ನು ನಿಧಾನವಾಗಿ, ಆದರೆ ಒಂದೇ ಸಮನಾಗಿ, ದಿನದಿನವೂ ಎಚ್ಚರಗೊಳಿಸುವುದೂ, ಪ್ರಪಂಚದ ನಾಗ ರಿಕ ಜನಾಂಗಗಳ ಮಧ್ಯೆ ತಮ್ಮ ನಿಜವಾದ ಸ್ಥಾನದ ಅರಿವನ್ನು ಉಂಟು ಮಾಡುವುದೂ, ತಾನು ತೋರಿದ ದಾರಿಯಲ್ಲಿ, ತನ್ನ ಬಾಳಿನ ಸಂಜೆಯಲ್ಲಿ, ಅವರು ನಡೆಯುವುದನ್ನು ನೋಡುವುದೂ ಅವನ ಪಾಲಿನ ಅದೃಷ್ಟ ವಾಗಿತ್ತು.

## ೩. 'ದಾದಾಭಾಯಿ ಪ್ರೊಫೆಸರ್'

ಬೊಂಬಾಯಿನ ಸುಪ್ರೀಂ ಕೋರ್ಟಿನ ಮುಖ್ಯ ನ್ಯಾಯಾಧೀಶನಾದ ಸರ್ ಆರ್‌ಸ್ಕಿನ್ ಪೆರ್ರಿಯು ಶಿಕ್ಷಣಸಮಿತಿಯ ಅಧ್ಯಕ್ಷನೂ ಆಗಿದ್ದುದರಿಂದ ದಾದಾಭಾಯಿಯ ಉಜ್ಜ್ವಲವಾದ ವಿದ್ಯಾರ್ಥಿ ಜೀವನ ಸದಾ ಅವನ ಗಮನಕ್ಕೆ ಬರುತ್ತಿತ್ತು. ಬ್ಯಾರಿಸ್ಟರ್ ಅರ್ಹತೆಯನ್ನು ಪಡೆಯಲು ದಾದಾಭಾಯಿ ಇಂಗ್ಲೆಂಡಿಗೆ ಪ್ರಯಾಣಮಾಡಬೇಕೆಂದು ಆತನು ಸೂಚಿಸಿದನು. ಅಲ್ಲಿಗೆ ವ್ಯಾಸಂಗಕ್ಕೆ ಹೋಗಲು ಅಪಾರವಾದ ಹಣ ಬೇಕಾಗುತ್ತಿತ್ತು. ಆದರೆ ದಾದಾಭಾಯಿಯ ಮತ್ತು ಅವನ ತಾಯಿಯ ಹತ್ತಿರ ಒಟ್ಟಿನಲ್ಲಿ ಒಂದು ನೂರು ರೂಪಾಯಿ ಸಹ ಇರಲಿಲ್ಲವೆಂದು ತೋರುತ್ತದೆ. ದಾದಾಭಾಯಿಯ ಮಾವನಾದ ರುಸ್ತುಮ್‌ಜೀ ದೇನಾಯಿಯು ಅವರನ್ನು ಪೋಷಿಸುತ್ತಿದ್ದನು. ಆದರೆ ಆತನಲ್ಲಾಗಲಿ ಇತರ ಬಂಧುಗಳಲ್ಲಾಗಲಿ ಸದ್ಯದ ಉದ್ದೇಶಕ್ಕೆ ಬೇಕಾದ ಹಣವಿರಲಿಲ್ಲ. ಇದನ್ನು ತಿಳಿದ ಆ ಉದಾರ ಹೃದಯನಾದ ನ್ಯಾಯಾಧಿಪತಿಯು ವ್ಯಾಸಂಗಕ್ಕೆ ಬೇಕಾದ ಖರ್ಚಿನ ಅರೆವಾಸಿ ಹಣವನ್ನು ತಾನು ಒದಗಿಸುವುದಾಗಿ ಹೇಳಿದನು.

ಪಾರಸೀಜನದ ಮುಂದಾಳುಗಳು ಆ ಸಲಹೆಯನ್ನು ಮೊದಲು ಸ್ವಾಗತಿಸಿದರು, ಆದರೆ ಆಮೇಲೆ ಸ್ವೀಕರಿಸಲಿಲ್ಲ. ಅವರಲ್ಲಿ ಸಂಪ್ರದಾಯಬದ್ಧರಾದವರು ಆ ಉದಾರವಾದ ಸಲಹೆಯ ಹಿಂದೆ ಕೆಡುಕಿರಬಹುವೆಂದು ಭಾವಿಸಿದರು. ಆ ಕಾಲದಲ್ಲಿ ಪಾದ್ರಿಗಳು ಬೇರೆ ಮತದ ಜನರನ್ನು ಕ್ರೈಸ್ತಮತಕ್ಕೆ ಸೆಳೆಯುವುದರಲ್ಲಿ ಬಲು ಉತ್ಸುಕರಾಗಿದ್ದರು. ಹಿಂದೂ ಧರ್ಮದ ದುರ್ಗವನ್ನು ಪ್ರವೇಶಿಸುವುದು ಅವರಿಗೆ ಹೆಚ್ಚು ಕಷ್ಟವಾಗಿರಲಿಲ್ಲ. ಆದರೆ ತಮ್ಮ ಮತ ಧರ್ಮದ ರಕ್ಷಣೆಗಾಗಿ ಸ್ವದೇಶವನ್ನೂ ತ್ಯಜಿಸಿ ಬಂದು ಭಾರತದಲ್ಲಿ ಆಶ್ರಯಹೊಂದಿದ್ದ ಝರೋಷ್ಟ್ರನ ಅನುಯಾಯಿಗಳಿಗೆ ತಮ್ಮ ಜನದಲ್ಲಿ ಒಬ್ಬನೇ ಒಬ್ಬನು ಬೇರೆ ಮತಕ್ಕೆ ಹೋಗುವುದಾದರೂ ಅದು ಮತಕ್ಕೆ ಒಂದು ದೊಡ್ಡ ವಿಪತ್ತೆಂಬ ಭಾವನೆಯಿತ್ತು. ಆದ್ದರಿಂದ ಅವರು ಪಾದ್ರಿಗಳ ಬಲೆಯಿಂದ ತಮ್ಮ ಯುವಕರನ್ನು ದೂರವಿಡುವುದರಲ್ಲಿ ಬಹು ಜಾಗರೂಕ

ರಾಗಿದ್ದರು. ಹೀಗಿದ್ದಾಗ್ಯೂ ೧೮೩೯ ರಲ್ಲಿ ಪಾದ್ರಿಗಳು ಕ್ರೈಸ್ತ ಮತಕ್ಕೆ ಸೇರುವಂತೆ ಇಬ್ಬರು ಪಾರಸೀ ಹುಡುಗರನ್ನು ಒಪ್ಪಿಸಿದರು. ಪಾರಸಿ ಮತಸ್ಥರಿಗೆ ಅದಕ್ಕಿಂತ ಹೆಚ್ಚಿನ ಅವಮಾನವಿರಲಿಲ್ಲ. ಅವರ ಇಡೀ ಪಂಗಡವು ಉದ್ರೇಕಗೊಂಡಿತು. ಪಾದ್ರಿಗಳನ್ನು ನರರೂಪದಲ್ಲಿರುವ ಪಿಶಾಚಗಳೆಂದು ಹಳಿದರು. ಕ್ರೈಸ್ತ ಧರ್ಮವನ್ನು ತೆಗಳಿ ಬರೆದ ಚಿಕ್ಕ ಪುಸ್ತಕಗಳು ಹಲವು ಪ್ರಕಟವಾದವು. ಆದರೆ ಕಾಲಕ್ರಮದಲ್ಲಿ ಎಲ್ಲ ಕ್ಷೋಭೆಯೂ ಶಾಂತವಾಗಿ ಪಾರಸಿಗಳು ಪಾದ್ರಿಗಳ ಸೇವಾಕಾರ್ಯವನ್ನು ಮೆಚ್ಚಿಕೊಂಡು ಮಿಷನರಿ ಸಂಸ್ಥೆಗಳಿಗೆ ಧನಸಹಾಯವನ್ನೂ ಮಾಡಿದರು. ಕ್ರೈಸ್ತ ಮತಕ್ಕೆ ಸೇರಿದ ಇಬ್ಬರು ಯುವಕರು ದೀಕ್ಷೆ ಪಡೆದು ಕ್ರೈಸ್ತ ಪುರೋಹಿತರಾದಾಗ ಅವರನ್ನು ಗೌರವದಿಂದ ಕಂಡರು.

ಅಂತು ಸದ್ಯಕ್ಕೆ ದಾದಾಭಾಯಿ ಚಿನ್ನದಂಥ ಅವಕಾಶವನ್ನು ಕಳೆದುಕೊಂಡನೆಂದು ತೋರಿತು. ಅವನ ವ್ಯಾಸಂಗ ಮುಗಿದ ಮೇಲೆ ಅವನಿಗೆ ದೊರೆತದ್ದು ಎಲ್‌ಫಿನ್‌ಸ್ಟನ್ ಸ್ಕೂಲಿನ ಮುಖ್ಯ ನೇಟಿವ್ ಅಸಿಸ್ಟೆಂಟ್ ಮಾಸ್ಟರ ಪದವಿ ಮಾತ್ರ. ಶಿಕ್ಷಣ ಸಮಿತಿಯ ಕಾರ್ಯದರ್ಶಿಯು ಬೊಂಬಾಯಿ ಸೆಕ್ರೆಟೇರಿಯಟ್‌ನಲ್ಲಿ ದಾದಾಭಾಯಿಗೆ ಒಂದು ಉದ್ಯೋಗವನ್ನು ಹುಡುಕಿದ್ದನು. ಅವನೂ ಅದನ್ನು ಒಪ್ಪಿಕೊಳ್ಳುವುದರಲ್ಲಿದ್ದನು. ಪುಣ್ಯಕ್ಕೆ, ಹಲವರು ಪ್ರೊಫೆಸರುಗಳು ಅದನ್ನು ಸ್ವೀಕರಿಸದಂತೆ ಅವನಿಗೆ ಬುದ್ಧಿವಾದ ಹೇಳಿದರು. ಅದನ್ನೇನಾದರೂ ಒಪ್ಪಿಕೊಂಡಿದ್ದಲ್ಲಿ ದಾದಾಭಾಯಿಯು ಕೆಳದರ್ಜೆ ನೌಕರನ ಸಂಕುಚಿತ ದೃಷ್ಟಿಯ ಬಂಧನಕ್ಕೆ ಸಿಕ್ಕಿ ಬೀಳುತ್ತಿದ್ದನು.

ಅಸಿಸ್ಟೆಂಟ್ ಮಾಸ್ಟರನ ಉದ್ಯೋಗವು ಗಣಿತಶಾಸ್ತ್ರದ ಅಸಿಸ್ಟೆಂಟ್ ಪ್ರೊಫೆಸರನ ಸ್ಥಾನಕ್ಕೆ ಒಯ್ಯುವ ಮಾರ್ಗವಾಯಿತು. "ಇದೇ ರೀತಿಯಾಗಿ ಸೇರವಾದ ಮಾರ್ಗವನ್ನು ಹಿಡಿದು, ದೃಢವಾಗಿ, ಒಂದೇ ಮನಸ್ಸಿನಿಂದ ಮುಂದುವರಿದರೆ ಕಾಲಕ್ರಮದಲ್ಲಿ ನೀನು ದೇಶಕ್ಕೇ ಒಂದು ದೊಡ್ಡ ವರಪ್ರಸಾದವಾಗಿ ಪರಿಣಮಿಸಬಹುದು" ಎಂದು ಶಿಕ್ಷಣ ಸಮಿತಿಯ ಕಾರ್ಯದರ್ಶಿ ಡಾ। ಸ್ಪೂವೆಲ್ ಕಾಗದ ಬರೆದನು.

ಎರಡು ವರ್ಷಗಳ ನಂತರ ದಾದಾಭಾಯಿ ಗಣಿತಶಾಸ್ತ್ರದ ಮತ್ತು ಭೌತ ವಿಜ್ಞಾನದ ಪ್ರೊಫೆಸರಾಗಿ ನೇಮಕವಾದನು. ದೇಶದ ಪ್ರಮುಖ

ಕಾಲೇಜೊಂದರಲ್ಲಿ ಭಾರತೀಯನು ಪ್ರೊಫೆಸರ ಹುದ್ದೆಯನ್ನು ಪಡೆಯುವುದು ಇದೇ ಮೊದಲು.* ಆದ್ದರಿಂದ ಆಕಾಲದಲ್ಲಿ ಆ ಪದವಿ, ಈ ಕಾಲದಲ್ಲಿ ಮಂತ್ರಿ ಪದವಿಗಿಂತಲೂ ಹೆಚ್ಚಾದ, ಗಮನವನ್ನು ಸೆಳೆಯಿತು. ಸಾರ್ವಜನಿಕರೂ ಸರಕಾರವೂ ಈ ನೇಮುಕವನ್ನು ಒಂದೇ ಸಮನಾದ ಉತ್ಸಾಹದಿಂದ ಸ್ವಾಗತಿಸಿದರು. ದಾದಾಭಾಯಿಯನ್ನು ಆ ಸ್ಥಳಕ್ಕೆ ನೇಮಿಸಿ ತೋರಿದ ವಿಚಕ್ಷಣೆಗಾಗಿ ಶಿಕ್ಷಣ ಸಮಿತಿಯವರನ್ನು ಅಭಿನಂದಿಸಿದರು. ಪ್ರೊಫೆಸರಶಿಪ್ಪನ್ನು ಸ್ಥಾಪಿಸಿದವರ ಆಶಯ ಈ ನೇಮುಕದಿಂದ ಸಾರ್ಥಕವಾಯಿತೆಂದು ತಿಳಿದರು. ದಾದಾಭಾಯಿ ಈ ಪದವಿಯನ್ನು ತನ್ನ ಜೀವಮಾನ ಯಾತ್ರೆಯಲ್ಲಿ ದೊರೆತ ಅತಿದೊಡ್ಡ ಗೌರವವೆಂದು ಭಾವಿಸಿ ಜೀವಮಾನವಿರುವವರೆಗೂ ಈ ವಿಷಯದಲ್ಲಿ ಹೆಮ್ಮೆಪಟ್ಟುಕೊಳ್ಳುತ್ತಿದ್ದನು. ‘ನನ್ನ ಜೀವಮಾನದಲ್ಲಿ ನನಗೆ ಅನೇಕ ಗೌರವಗಳು ದೊರೆತವು, ಆದರೆ ಪ್ರೊಫೆಸರ್ ಎಂದು ಕರೆದಾಗ ನನಗಾದ ಅಭಿಮಾನದ ಸಂತೋಷ ಇನ್ನು ಯಾವ ಸನ್ಮಾನದಿಂದಲೂ ಉಂಟಾಗಲಿಲ್ಲ’, ಎಂದು ಒಂದು ಬಾರಿ ಹೇಳಿದನು. ಇನ್ನೊಂದು ಸಂದರ್ಭದಲ್ಲಿ ಹೌಸ್ ಆಫ್ ಕಾಮನ್ಸಿನ ಸದಸ್ಯನಾಗಿ ಕೀರ್ತಿಯ ಉಚ್ಚಸ್ಥಾನದಲ್ಲಿದ್ದಾಗ ಈ ರೀತಿ ಬರೆದನು: “ನನಗೆ ಅದು (ಪ್ರೊಫೆಸರ್ ಎಂಬುದು) ಅತ್ಯಂತ ಪ್ರಿಯವಾದ ಪದವಿ ಮತ್ತು ಪ್ರಶಸ್ತಿ. ಅದರಿಂದ ನನಗೆ ಬಹುಸಂತೋಷವಾಗಿದೆ. ಈವೊತ್ತಿಗೂ ಅನೇಕ ಜನ ಸಹಾಧ್ಯಾಯಿಗಳೂ ಶಿಷ್ಯರೂ ನನ್ನನ್ನು ‘ದಾದಾಭಾಯಿ ಪ್ರೊಫೆಸರ್’ ಎಂದೇ ಕರೆಯುತ್ತಾರೆ.”

ಗಣಿತ ಶಾಸ್ತ್ರದಲ್ಲಿ ಈ ಪ್ರೊಫೆಸರಿಗೆ ಇದ್ದ ಪ್ರೀತಿ ಎಷ್ಟರಮಟ್ಟಿಗೆ ಅವನ ಬದುಕನ್ನು ರೂಪಿಸಿತು, ಅವನ ನೀತಿ ನಡತೆಗಳಮೇಲೆ ಯಾವ ಪ್ರಭಾವ ಬೀರಿತು ಎಂದು ಹೇಳುವುದು ಕಷ್ಟ. ಆದರೆ ಅವನ ಜೀವನ ಚರಿತೆಯನ್ನು ನೋಡಿದರೆ ಒಂದು ಸಂಗತಿ ಸ್ಪಷ್ಟವಾಗುತ್ತದೆ. ಅವನ ವೈಯಕ್ತಿಕವಾದ ನಡತೆ ನಿರ್ಣಯಗಳಲ್ಲೂ, ರಾಜಕೀಯ ನಡವಳಿಕೆಯಲ್ಲೂ,

---

* ಇವಕ್ಕೆ ಮುಂಚೆ ಬಾಲಗಂಗಾಧರಶಾಸ್ತ್ರಿಯು ಸ್ವಲ್ಪಕಾಲ ಗಣಿತ ಶಾಸ್ತ್ರದ ಅಧ್ಯಾಪಕನಾಗಿ ಬದಲಿ ಕೆಲಸಮಾಡಿದ್ದನು.

ಅವನು ನಡಸಿದ ಸಾರ್ವಜನಿಕ ಚಳವಳಿಯಲ್ಲೂ ಗಣಿತದ ನಿಷ್ಕೃಷ್ಟತೆ ಯಿತ್ತು. ನಿದರ್ಶನಕ್ಕೆ ಸಿಲುಕದ ಯಾವ ಹೇಳಿಕೆಯನ್ನೂ ಅವನು ಒಪ್ಪು ತ್ತಿರಲಿಲ್ಲ, ನ್ಯಾಯವಲ್ಲದ ಸಂಗತಿಗಳಿಂದ ಅವನು ಎಂದೂ ತೃಪ್ತಿಗೊಂಡವ ನಲ್ಲ. ಅಂತೆಯೆ, ಆಡಳಿತಗಾರರ ಮೇಲಿನ ಅವನ ಆಕ್ಷೇಪಣೆಗಳೆಲ್ಲ ಕೊನೆ ಯಲ್ಲಿ, ಅವರು ಇಂಡಿಯಾದೇಶವನ್ನು ನಿಷ್ಕೃಷ್ಟವಾದ ಬ್ರಿಟಿಷ್ ನೀತಿಗನು ಸಾರವಾಗಿ ಆಳುತ್ತಿಲ್ಲವೆಂಬ ಆಪಾದನೆಗೆ ಇಳಿಯುತ್ತದೆ. ಅವನ ಕೇಳಿಕೆಗಳೆಲ್ಲ ಒಟ್ಟಿನಲ್ಲಿ, ಬ್ರಿಟಿಷ್ ರಾಜರಾಣಿಯರೂ ರಾಜನೀತಿಜ್ಞರೂ ಹೊರಡಿಸಿರುವ ಪ್ರಕಟನೆಗಳ ಖಚಿತವಾದ ಮತ್ತು ನ್ಯಾಯವಾದ ಅರ್ಥಕ್ಕನುಸಾರವಾಗಿ ಅವರು ನಡೆಯಬೇಕೆಂಬ ಬೇಡಿಕೆಯಾಗಿದೆ.

ದಾದಾಭಾಯಿಗೆ ತನ್ನ ಶಿಷ್ಯರ ವಿಚಾರದಲ್ಲಿದ್ದ ವಿಶ್ವಾಸವನ್ನು ಕುರಿತು ಅವನ ವಿದ್ಯಾರ್ಥಿಗಳನೇಕರು ಮೆಚ್ಚಿಕೆಯಿಂದ ಮಾತನಾಡಿದ್ದಾರೆ. ಅವನ ಪ್ರಭಾವಕ್ಕೆ ಒಳಗಾದ ಯಾರೂ, ಅವನ ಮನ ಸೆಳೆಯುವ ಸರಳ ಸ್ವಭಾವವ ನ್ನಾಗಲಿ, ನಡವಳಿಕೆಯ ಮೋಹಕತೆಯನ್ನಾಗಲಿ, ಊನವಿಲ್ಲದ ವಿನಯವ ನ್ನಾಗಲಿ ಮರೆಯಲಾರರು. ಅವನ ಶಿಷ್ಯರಲ್ಲಿ ಅತಿ ಪ್ರಸಿದ್ಧನಾಗಿ, ಪ್ರಾಚ್ಯ ವಿದ್ಯಾಪಂಡಿತನೆಂದು ಬಹು ಹೆಸರುವಾಸಿಯಾದ ರಾಮ ಕೃಷ್ಣ ಭಂಡಾ ರ್ಕರ್, ದಾದಾಭಾಯಿಯ ಶ್ರೇಷ್ಠ ರೀತಿಯ ಶಿಕ್ಷಣವನ್ನಾಗಲಿ ವಿದ್ಯಾರ್ಥಿ ಗಳಲ್ಲಿ ಅವನಿಗಿದ್ದ ಪ್ರೀತಿಯನ್ನಾಗಲಿ ಎಂದಿಗೂ ಮರೆಯುವುದು ಸಾಧ್ಯವಿಲ್ಲ ವೆಂದು ಆಗಾಗ್ಗೆ ಹೇಳುತ್ತಿದ್ದನು. ತನ್ನ ನಡವಳಿಕೆಗಳಲ್ಲೂ ವೇಷ ಭೂಷಣ ಗಳಲ್ಲೂ ಸರಳನಾದ ದಾದಾಭಾಯಿ ಸರಳತೆ ಎಷ್ಟು ಘನವಾದದ್ದೆಂಬುದನ್ನು ತನ್ನ ಶಿಷ್ಯರಿಗೆ ಮನದಟ್ಟು ಮಾಡಿಕೊಡುತ್ತಿದ್ದನಲ್ಲದೆ, ಅವರಲ್ಲಿ ಅನೇಕ ರನ್ನು, ತನ್ನ ಮೇಲ್ಪಂಕ್ತಿಯಿಂದ, ಆಡಂಬರದ ಅಪೇಕ್ಷೆಯಿಂದ ರಕ್ಷಿಸಿದನು.

## ೪. ಸುಧಾರಣೆಯ ಮುಂದಾಳು

ಹಿಂದು ಸಮಾಜಸುಧಾರಣೆ ಹಿಮಾಲಯವನ್ನು ಭೇದಿಸುವಷ್ಟು ಕಷ್ಟ ವಾದ ಕೆಲಸವೆಂದು ಈಚೀಚಿನವರೆಗೂ ಹೇಳುತ್ತಿದ್ದರು. ಅದೇ ರೀತಿಯಲ್ಲಿ ಹೇಳುವುದಾದರೆ, ದಾದಾಭಾಯಿಯ ಕಾಲದಲ್ಲಿ, ಝರೋಷ್ಟ್ರ ಮತದ ಸುಧಾ

ರಣೆ ಎಲ್ಬರ್ಜ್ ಪರ್ವತವನ್ನು ಭೇದಿಸುವಷ್ಟು ಕಷ್ಟವಾಗಿತ್ತು. ಹತ್ತೊಂಭತ್ತನೆಯ ಶತಮಾನದ ಕೊನೆಯ ಅರ್ಧ ಭಾಗದವರೆಗೂ ಹಿಂದೂ ಸಮಾಜ ಸುಧಾರಣೆ ಆರಂಭವಾಗಿರಲಿಲ್ಲ. ಸರೋಪ್ಪ್ರ ಸಮಾಜ ಸುಧಾರಣೆಯನ್ನು ಮುಖ್ಯವಾಗಿ ದಾದಾಭಾಯಿಯೂ ಅವನ ಸಮಕಾಲೀನರಾದ ಕೆಲವರೂ ಕೈಕೊಂಡರು.

ಆ ಕಾಲದಲ್ಲಿ ಬೊಂಬಾಯಲ್ಲಿ "ದೇಶೀಯ ಸಾಹಿತ್ಯ ಸಂಘ"ವೆಂಬ ಸಂಸ್ಥೆಯಿತ್ತು. ೧೮೪೮ ರಲ್ಲಿ ಅದು ಪಾಳು ಸ್ಥಿತಿಯಲ್ಲಿತ್ತು. ಆದ್ದರಿಂದ ಅದರ ಸದಸ್ಯರು ಕೆಲವರು ಹೊಸ ಸಂಸ್ಥೆಯನ್ನು ಸ್ಥಾಪಿಸುವ ಉದ್ದೇಶದಿಂದ ದಾದಾಭಾಯಿಯ ಅಧ್ಯಕ್ಷತೆಯಲ್ಲಿ ಸಭೆ ಸೇರಿದರು. ಹೊಸ ಸಂಸ್ಥೆಯನ್ನು "ವಿದ್ಯಾರ್ಥಿಗಳ ಸಾಹಿತ್ಯ ವಿಜ್ಞಾನ ಸಂಘ" (Students' Literary and Scientific Society) ಎಂದು ಕರೆದರು. ಪ್ರೊಫೆಸರ್ ಪ್ಯಾಟನ್ನನ್ನು ಅದರ ಅಧ್ಯಕ್ಷನನ್ನಾಗಿಯೂ ದಾದಾಭಾಯಿಯನ್ನು ಖಜಾಂಚಿಯನ್ನಾಗಿಯೂ ನೇಮಿಸಿದರು. ಹೊಸ ಸಂಸ್ಥೆಯ ನಿಯಮದಂತೆ ಕಾರ್ಯದರ್ಶಿಯು ಕ್ರಮವರಿತು ಹೆಸರಿಸಿದ ಇಬ್ಬರು ಸದಸ್ಯರು ಪಾಕ್ಷಿಕ ಸಭೆಯಲ್ಲಿ ಸಾಹಿತ್ಯದ, ವಿಜ್ಞಾನದ ಅಥವಾ ಸಾಮಾಜಿಕ ವಿಷಯುವನ್ನು ಕುರಿತು ಒಂದೊಂದು ಪ್ರಬಂಧವನ್ನು ಓದಬೇಕಾಗಿತ್ತು. ಸದಸ್ಯನು ಪ್ರಬಂಧವನ್ನು ಓದಲು ತಪ್ಪಿದರೆ ಒಂದು ರೂಪಾಯಿಯ ದಂಡವನ್ನು ಕೊಡಬೇಕಾಗಿತ್ತು. ಎರಡನೆಯ ಬಾರಿ ತಪ್ಪಿದರೆ ದಂಡ ದ್ವಿಗುಣವಾಗುತ್ತಿತ್ತು; ಮೂರನೆಯ ಬಾರಿ ತಪ್ಪಿದರೆ ಸದಸ್ಯತನದಿಂದ ಅವನ ಹೆಸರು ವಜಾ ಆಗುತ್ತಿತ್ತು. ಅಪ್ರಯೋಜಕರೂ ಕೇವಲ ಭೂಷಣಪ್ರಾಯರೂ ಆದ ಸದಸ್ಯರನ್ನು ಕಳೆಯಬೇಕೆಂಬುದೇ ಇದರ ಉದ್ದೇಶವಾಗಿತ್ತು. ರಾಜಕೀಯ ಮತ್ತು ಮತೀಯ ವಿಷಯಗಳು ನಿಷಿದ್ಧವಾಗಿದ್ದವು.

ಪ್ರತಿಯೊಂದು ಪ್ರಶ್ನೆಯನ್ನೂ ಮೊದಲು ಸಂಘದ ಸಭೆಯಲ್ಲಿ ಚರ್ಚಿಸಿ ಸದಸ್ಯರಿಂದ ರೂಪಿತವಾದ ಅಭಿಪ್ರಾಯವನ್ನು ಸಾರ್ವಜನಿಕರ ಮುಂದೆ ಇಡುತ್ತಿದ್ದರು. ಅದಕ್ಕಾಗಿ ಎರಡು ಶಾಖೆಗಳಿದ್ದವು. ಒಂದು ಗುಜರಾತಿ 'ಜ್ಞಾನಪ್ರಸಾರಕ ಮಂಡಲಿ'; ದಾದಾಭಾಯಿ ಅದರ ಅಧ್ಯಕ್ಷನಾಗಿದ್ದನು. ಇನ್ನೊಂದು ಮರಾಠಿ 'ಜ್ಞಾನ ಪ್ರಸಾರಕ ಮಂಡಲಿ.' ಗುಜ

ರಾತಿ ಸಂಘದ ಚರ್ಚೆಗಳು ಸಂಘದ ಪತ್ರಿಕೆಯಾದ 'ಜ್ಞಾನ ಪ್ರಸಾರಕ'ದಲ್ಲಿ ಪ್ರಕಟವಾಗುತ್ತಿದ್ದವು. ಅನೇಕ ವರ್ಷಗಳ ಕಾಲ ದಾದಾಭಾಯಿ ಅದರ ಸಂಪಾದಕನಾಗಿದ್ದನು.

ಸಂಘದ ಚರಿತ್ರೆಯಲ್ಲಿ ೧೮೪೯ ರ ಆಗಸ್ಟ್ ೪ನೆಯ ತಾರೀಕು ಗಮನಾರ್ಹವಾದ ದಿವಸ. ಬೊಂಬಾಯಿನಗರದಲ್ಲಿ ಸ್ತ್ರೀ ವಿದ್ಯಾಭ್ಯಾಸ ಪದ್ಧತಿ ಸ್ಥಾಪನೆಯಾದ ದಿನವೆಂದು ಅದು ಬೊಂಬಾಯಿ ಪ್ರಾಂತದ ಇತಿಹಾಸದಲ್ಲೂ ಸ್ಮರಣೀಯವಾಗುತ್ತದೆ. ಆ ಕಾಲದಲ್ಲಿ ಪುರುಷರಿಗೆ ಮನೆಗಳಲ್ಲಿ ಸ್ಫೂರ್ತಿಯನ್ನಾಗಲಿ ಸಂತೋಷವನ್ನಾಗಲಿ ಕೊಡುವ ಅವಕಾಶಗಳು ಕಡಮೆಯಾಗಿದ್ದವು. ಶೀಲ ಪೋಷಕವಾದ ಸಂಸಾರಸುಖವನ್ನು ಅನೇಕರು ಅರಿಯದವರಾಗಿದ್ದರು. ಈ ಕೊರತೆಯ ನಿವಾರಣೆಗೆ ಸ್ತ್ರೀವಿದ್ಯಾಭ್ಯಾಸವೊಂದೇ ಮದ್ದು. ಅನೇಕ ಸಂದರ್ಭಗಳಲ್ಲಿ ಯುವಕರು ಈ ವಿಷಯವನ್ನು ಕುರಿತು ಉತ್ಸಾಹದಿಂದ ಮಾತನಾಡಿದ್ದರು, ಆದರೆ ಕಾರ್ಯರೂಪದಲ್ಲಿ ಏನೂ ಕೆಲಸ ನಡೆದಿರಲಿಲ್ಲ. ಆ ಸ್ಮರಣೀಯವಾದ ದಿವಸ ಮಾತ್ರ, ಬೆಹ್ರಾಮ್‌ಜಿ ಖರ್ಷೆದ್‌ಜಿ ಗಾಂಧಿಯು ಸ್ತ್ರೀ ವಿದ್ಯಾಭ್ಯಾಸವನ್ನು ಕುರಿತು ಪ್ರಬಂಧವನ್ನು ಓದಿದ ಮೇಲೆ, ಚರ್ಚೆನಡೆದು, ಅದು ಕಾರ್ಯರೂಪಕ್ಕೆ ತಿರುಗಿತು. ಮಾತು ನಾಕಾದಷ್ಟು ನಡೆದಿದೆ, ಮುಖ್ಯವಾಗಿ ಆಗ ಬೇಕಾದದ್ದು ಕಾರ್ಯವೆಂದು ಉತ್ಸಾಹ ಭರಿತನಾದ ಬೆಹ್ರಾಮ್‌ಜೀಯು ಸೂಚಿಸಿ, ಪಾರಸೀರೀತಿಯಲ್ಲಿ ಪ್ರಾರ್ಥಿಸಿ, ಸರ್ವಶಕ್ತನ ನೆರವನ್ನು ಕೋರಿದನು. ಸಭೆ ಅವನನ್ನು ಹೃತ್ಪೂರ್ವಕವಾಗಿ ಅನುಮೋದಿಸಿತು.

'ಇಲ್ಲಿ ಹಾಜರಿರುವ ಪ್ರತಿವಿದ್ಯಾರ್ಥಿಯೂ ತನ್ನ ಕುಟುಂಬದಿಂದ, ಪ್ರಯತ್ನಪಟ್ಟು, ಕೊನೆಯ ಪಕ್ಷ ಒಬ್ಬ ವಿದ್ಯಾರ್ಥಿನಿಯನ್ನು ಕರೆದುಕೊಂಡು ಬರಲಿ!'

'ಆಗ ಬಹುದು' ಎಂದು ಹಲವು ಧ್ವನಿಗಳು ಕೇಳ ಬಂದವು.

'ವಿದ್ಯಾರ್ಥಿನಿಯರಿಗೆ ನಾವೇ ಪಾಠ ಹೇಳಿಕೊಡೋಣ; ಈ ವಿಚಾರದಲ್ಲಿ ನಾವು ಶ್ರದ್ಧೆಯಿಂದ ಇದೇವೆ ಎಂದು ತಿಳಿಯಲಿ.'

'ಆಗಲಿ, ಹಾಗೇ ಆಗಲಿ!' ಎಂದು ಎಲ್ಲರೂ ಕೂಗಿದರು.

ಈ ಸಲಹೆ ದಾದಾಭಾಯಿಗೆ ಹೊಸದಾಗಿರಲಿಲ್ಲ. ತನ್ನ ಬಾಲ್ಯದ ಕಥೆ

ಗಳನ್ನು ಹೇಳಬೇಕೆಂದು ಅವನ ಮೊಮ್ಮಕ್ಕಳು ಕೇಳಿದಾಗ ಅವರಿಗೆ ತನ್ನ ಕಾಲೇಜು ವಿದ್ಯಾರ್ಥಿದಶೆಯ ಕಥೆಯನ್ನು ತಿಳಿಸಿದ್ದನು: ಆಗ ಒಬ್ಬ ಸ್ನೇಹಿತನೊಡನೆ ಅವನು ಮನೆಮನೆಗೂ ಹೋಗಿ ಹೆಣ್ಣುಮಕ್ಕಳಿಗೆ ಓದು ಬರಹ ಲೆಕ್ಕಗಳನ್ನು ಜಗಲಿಯ ಮೇಲೆ ಕೂತು ಕಲಿಸಿ ಕೊಡುವುದಾಗಿಯೂ ಅದಕ್ಕೆ ಒಪ್ಪಬೇಕಾಗಿಯೂ ತಂದೆ ತಾಯಂದಿರನ್ನೂ ಪೋಷಕರನ್ನೂ ಕೇಳುತ್ತಿದ್ದನು. ಕೆಲವರು ಒಪ್ಪಿ ಅವಕಾಶಕೊಟ್ಟಿದ್ದರು. ಕೋಪಿಷ್ಠರಾದ ಇಬ್ಬರು ಮೂವರು ತಂದೆಯರು ಮಾತ್ರ, ಅಂಥ ಅವಿವೇಕದ ಪ್ರಸ್ತಾಪವನ್ನು ಮಾಡಿದರೆ ಮೆಟ್ಟಿಲಿಂದ ಕೆಳಗೆ ದೂಡಿ ಬಿಡುವುದಾಗಿ ಹೆದರಿಸಿದ್ದರು.

ಪ್ರಯೋಗಾರ್ಥವಾಗಿ ಶಾಲೆಗಳನ್ನು ತೆರೆಯ ಬೇಕೆಂದು ಸಭೆಯಲ್ಲಿ ನಿರ್ಣಯವಾಯಿತು. 'ಹಣದ ಆವಶ್ಯಕತೆ ಅವರಿಗೆ ಇರಲಿಲ್ಲ; ಯಾಕೆಂದರೆ ಹಲವರು ಸದಸ್ಯರು ಉಪಾಧ್ಯಾಯರಾಗಿ ಉಚಿತವಾಗಿ ಕೆಲಸ ಮಾಡಲು ಮುಂದೆ ಬಂದರು; ಇನ್ನು ಕೆಲವರು ಶಾಲೆ ನಡಸಲು ತಮ್ಮ ಮನೆಗಳಲ್ಲಿ ಕೊಟಡಿಗಳನ್ನು ಬಿಟ್ಟುಕೊಡುವುದಾಗಿ ಹೇಳಿದರು. ಸ್ವಯಂ ಸೇವಕರ ಕೆಲಸಗಳಿಗೆ ತೊಂದರೆಯಾಗದಂತೆ ಬೆಳಗ್ಗೆ ೭ ಗಂಟೆಯಿಂದ ೧೦ ರವರೆಗೆ ತರಗತಿಗಳನ್ನು ನಡಸತಕ್ಕದ್ದೆಂದು ನಿರ್ಧರವಾಯಿತು.

ತರಗತಿಗಳಿಗೆ ಬೇಕಾದ ಕೊಟಡಿಗಳು ದೊರೆತವು, ಉಪಾಧ್ಯಾಯರೂ ದೊರೆತರು, ಪುಸ್ತಕಗಳಿಗೂ ಇತರ ಸಾಮಗ್ರಿಗಳಿಗೂ ಕೊರತೆಯಿರಲಿಲ್ಲ; ಆದರೆ ವಿದ್ಯಾರ್ಥಿನಿಯರೆಲ್ಲಿ? ಒಬ್ಬ ವಿದ್ಯಾರ್ಥಿನಿಯನ್ನು ಹಿಡಿದು ತರುವುದು ಒಂದು ನಗರವನ್ನು ವಶಪಡಿಸಿಕೊಳ್ಳುವಷ್ಟು ಕಷ್ಟವಾಗಿತ್ತು. ತರುಣರ ಉತ್ಸಾಹಕ್ಕೆದುರಾಗಿ ಸಂಪ್ರದಾಯವಂತರ ಕ್ರೂರ ಶಕ್ತಿ ನಿಂತಿತ್ತು. ಅಂಥ ಚಳವಳಿಯಿಂದ ಸಮಾಜದ ಜೀವನದ ಮೇಲೆ ಏನು ದುಷ್ಪರಿಣಾಮಗಳಾಗುತ್ತವೆಯೋ ಎಂದು ಸಂಪ್ರದಾಯವಂತರಿಗೆ ಭಯ, ಅನುಮಾನ. ಆದರೆ ತಮ್ಮ ಮನೋದ್ದೇಶದ ವಿಷಯದಲ್ಲಿ ತರುಣರಿಗಿದ್ದ ಸ್ವಾರ್ಥರಹಿತವಾದ ನಿಷ್ಠಾಶ್ರದ್ಧೆಗಳಿಂದ ಆಶ್ಚರ್ಯಕರವಾದ ಪರಿಣಾಮಗಳಾದವು. ಎರಡು ಮೂರು ತಿಂಗಳುಗಳ ಅವಧಿಯಲ್ಲೇ ಪಾರಸೀ ಶಾಲೆಗೆ ೪೪ ಮಂದಿ ವಿದ್ಯಾರ್ಥಿನಿಯರೂ ಹಿಂದೂ ಶಾಲೆಗೆ ೨೪ ಮಂದಿಯೂ ದೊರೆತರು. ಒಟ್ಟಿನಲ್ಲಿ ಏಳು

ಶಾಲೆಗಳಿದ್ದುವು: ಮೂರು ಹಿಂದು, ನಾಲ್ಕು ಫಾರಸಿ. ಬಾಹರ್ ಕೋಟಿ ಶಾಲೆಯನ್ನು ದಾದಾಭಾಯಿ ನೋಡಿಕೊಳ್ಳುತ್ತಿದ್ದನು. ಅವನು ನುರಿತ ಉಪಾಧ್ಯಾಯನಾಗಿದ್ದುದರಿಂದ ಸಹೋದ್ಯೋಗಿಗಳಿಗೂ ಒಂದು ಬಲವಾಗಿದ್ದನು. ತಮ್ಮ ಪ್ರಯೋಗವನ್ನು ಜಯಪ್ರದವಾಗಿ ಮಾಡಲು ಕೈಲಾದದ್ದೆಲ್ಲವನ್ನೂ ಮಾಡಿದರು.

ಸಮಾಜದ ಮುಂದಾಳುಗಳಾದ ಹಲವರು ಈ ಬಗೆಯ ಕೆಲಸವನ್ನು ಮೆಚ್ಚದಿರಲಿಲ್ಲ. ಅನೇಕ ವರ್ಷಗಳ ಕಾಲ ಶಿಕ್ಷಣ ಸಮಿತಿ (Board of Education) ಯ ಸದಸ್ಯನಾಗಿದ್ದ ಜಗನ್ನಾಥ್ ಶಂಕರ್ ಶೇಠ್ ಶಾಲೆಯನ್ನಾಗಿ ಉಪಯೋಗಿಸಲು ಸುಂದರವಾದ ಚಿಕ್ಕ ಬಂಗಲೆಯೊಂದನ್ನು ಬಿಟ್ಟುಕೊಟ್ಟನು. ನಾಲ್ವರು ಪಾರಸಿಗಳು, ಸಕಾಲದಲ್ಲಿ ಸಹಾಯ ಮಾಡಿ, ಸಂಬಳದ ಉಪಾಧ್ಯಾಯರನ್ನು ನೇಮಿಸಲು ನೆರವಾದರು. ತಮ್ಮ ಹೆಸರುಗಳನ್ನು ಬಹಿರಂಗಪಡಿಸಲು ಅವರು ಒಪ್ಪಲಿಲ್ಲ. ಅವರೆಲ್ಲರೂ ಕಾಮಾ ಕುಟುಂಬದವರೆಂದು ಆ ಮೇಲೆ ತಿಳಿಯ ಬಂತು. ಅವರಲ್ಲಿ ಒಬ್ಬನಾದ ಖರ್ಷೆದ್‌ಜಿ ನಸ್ಸರ್‌ವಾಂಜಿ ಕಾಮಾನು ದಾದಾಭಾಯಿಯ ವಿಷಯದಲ್ಲಿ ಬಹು ಸ್ನೇಹಪರನಾಗಿದ್ದು ಮುಂದೆ ಅವನನ್ನು ಉಪಾಧ್ಯಾಯ ವೃತ್ತಿಯಿಂದ ವ್ಯಾಪಾರಕ್ಕೆ ಒಯ್ದನು. ಈ ದಾತೃಗಳು ಸ್ಕೂಲುಗಳನ್ನು—ಪಾರಸೀ ಸ್ಕೂಲಾಗಲಿ, ಹಿಂದೂ ಸ್ಕೂಲಾಗಲಿ—ಎರಡು ವರ್ಷಕಾಲ ನಡಸಿಕೊಂಡು ಹೋಗಲು ಸಾಕಾಗುವಷ್ಟು ಹಣವನ್ನು ಸಮಿತಿಯ ವಶಕ್ಕೆ ಕೊಟ್ಟರು. ಈ ಅವಧಿಯ ಕೊನೆಯಲ್ಲಿ ಸ್ಕೂಲುಗಳು ಧನಾಭಾವದಿಂದ ನಿಂತುಹೋಗಲಾರದಂತೆ ಸಾರ್ವಜನಿಕರು ನೋಡಿ ಕೊಳ್ಳುವರೆಂಬ ಆಸೆಯಿತ್ತು.

ಸಂಬಳದ ಮೇಲೆ ಉಪಾಧ್ಯಾಯರನ್ನು ನೇಮಿಸಿದ ಕೂಡಲೆ ಸ್ವಯಂ ಸೇವಕರು ಮೇಲ್ವಿಚಾರಕ ಸಮಿತಿಯಾಗಿ ರೂಪುಗೊಂಡರು. ದಾದಾಭಾಯಿ—ಕೋಟೆ ಶಾಲೆಗಳ ಉಸ್ತುವಾರಿಯನ್ನು ನೋಡಿ ಕೊಳ್ಳುವುದಾಗಿ ಒಪ್ಪಿಕೊಂಡನು. ಮುಂದೆ ದೇಶದ ಬಿಡುಗಡೆಗಾಗಿ ನಡಸಿದ ಪ್ರಮುಖ ಹೋರಾಟಗಳಲ್ಲಿ ಯಾವ ಉತ್ಸಾಹವನ್ನು ತೋರಿದನೋ ಅದೇ ಬಗೆಯ ಉತ್ಸಾಹವನ್ನು ಈ ಕಾರ್ಯದಲ್ಲಿಯೂ ತೋರಿದನು.

ಎಲ್ಲರಿಗೂ ಮೇಲ್ಪಂಕ್ತಿಯಾಗುವ ರೀತಿಯಲ್ಲಿ ತರಗತಿಗಳಿಗೆ ಸಕಾಲ ದಲ್ಲಿ ಭೇಟಿಕೊಟ್ಟು ಪರೀಕ್ಷೆ ನಡಸುತ್ತಿದ್ದನು; ಅತ್ಯುತ್ತಮವಾದ ಫಲಿ ತಾಂಶ ಹೊಂದಲು ಬೇಕಾದ ಸಹಾಯವನ್ನೆಲ್ಲ ಉಪಾಧ್ಯಾಯರಿಗೆ ಒದಗಿಸಿ ಕೊಡುತ್ತಿದ್ದನು. ಉತ್ಸಾಹ ಪೂರ್ಣವಾದ ಈ ವ್ಯವಸ್ಥೆಯನ್ನು ಕಂಡು ಲಾರ್ಡ್ ಫಾಕ್‌ಲಂಡಿನ ಸರಕಾರ ಅದನ್ನು ಬೊಂಬಾಯಿ ಪ್ರಾಂತದ ಶಿಕ್ಷಣ ಚರಿತ್ರೆಯಲ್ಲಿ ಒಂದು ನೂತನಯುಗದ ಸೂಚನೆಯೆಂದೂ ಅದರಿಂದ ತೀವ್ರ ವಾದ, ಗಣ್ಯವಾದ, ಮತ್ತು ನಿರಂತರವಾದ ಪ್ರಗತಿ ಆರಂಭವಾಗುತ್ತದೆ ಯೆಂದೂ ಅಭಿಪ್ರಾಯಪಟ್ಟಿತು.

ತರುಣರ ಶ್ರಮದಿಂದ ವರ್ಷವರ್ಷವೂ ಜ್ಞಾನದ ಬೆಳಕಿನ ಕ್ಷೇತ್ರ ವಿಶಾಲವಾಗುತ್ತ ನಡೆಯಿತು. 'ಜ್ಞಾನಪ್ರಸಾರಕ ಮಂಡಲಿಯ' ಹೆಸರು ಅನ್ವರ್ಥವಾಯಿತು. ಗುಜರಾತಿ ಮರಾಠಿ ಸಂಘಗಳ ಆಶ್ರಯದಲ್ಲಿ ದೊಡ್ಡ ಸಭೆಗಳು ಸೇರಿ ಉಪಯುಕ್ತ ವಿಷಯಗಳ ಮೇಲೆ ಅನೇಕ ಭಾಷಣಗಳು ನಡೆದವು. ಅವುಗಳ ಪರಿಣಾಮವಾಗಿ ಜನಗಳ ಆಚಾರಗಳು ಅಭಿಪ್ರಾಯಗಳು ಕ್ರಮೇಣ ಬದಲಾವಣೆ ಹೊಂದುತ್ತಿರುವುದನ್ನು ಕಾಣಬಹುದಾಗಿತ್ತು.

ಇರಾನಿನಿಂದ ಓಡಿ ಬಂದ ಮೇಲೆ ಪಾರಸಿಗಳು ಇಂಡಿಯಾದಲ್ಲಿ ಹನ್ನೆರಡು ಶತಮಾನಕಾಲ ಹಿಂದೂ ಮಹಮ್ಮದೀಯರೊಡನೆ ವಾಸವಾ ಗಿದ್ದಾರೆ. ಈ ಬಗೆಯ ದೀರ್ಘ ಸಂಪರ್ಕದ ಪರಿಣಾಮವಾಗಿ ಝರೋಷ್ಟ್ರ ಮತದವರಲ್ಲಿ ಹಲವು ಪರಕೀಯ ನಂಬಿಕೆಗಳೂ ಆಚರಣೆಗಳೂ ಸಂಪ್ರ ದಾಯಗಳೂ ಸೇರಿಕೊಂಡವು. ಸಿಸೋತಿ ತರುಣರಿಗೆ ಈ ಬೆರಕೆಯನ್ನು ಝರೋಷ್ಟ್ರನ ಶುದ್ಧಮತ ತತ್ತ್ವವೆಂದು ಒಪ್ಪಲು ಸಾಧ್ಯವಾಗಲಿಲ್ಲ ಆದರೆ ಸಂಪ್ರದಾಯವಂತರನ್ನು ತಮ್ಮ ದೃಷ್ಟಿಗೆ ಬದಲಾಯಿಸುವುದೂ ಸುಲಭ ವಾಗಿರಲಿಲ್ಲ. ಅನೇಕ ತಲೆಮೊರೆಗಳಿಂದ ಜನ ಆ ಪದ್ಧತಿಗಳನ್ನು ನಡಸಿ ಕೊಂಡು ಬಂದಿದ್ದರು, ಪೂರ್ವಿಕರು ಅವುಗಳಲ್ಲಿ ನಂಬಿಕೆಯಿಟ್ಟಿದ್ದರು; ತಮ್ಮ ಹಿರಿಯರಿಗೆ ಗ್ರಾಹ್ಯವಾದದ್ದು ತಮಗೂ ಒಳ್ಳೆಯದು; ಹಿರಿಯರಿಗಿಂತ ಬುದ್ಧಿವಂತರೆಂದು ತಿಳಿಯಲು ಈ ತರುಣರಿಗೆ ಯಾವ ಅಧಿಕಾರವಿದೆ. ಸಂಪ್ರದಾಯವಂತರ ಮನೋಭಾವ ಹೀಗಿತ್ತು.

ಆದ್ದರಿಂದ ಶುದ್ಧೀಕರಣದ ದೃಷ್ಟಿಯಿಂದ ದಾದಾಭಾಯಿ ಮತ್ತೊಂದು

ಸಂಘವನ್ನು ಸ್ಥಾಪಿಸುವುದರಲ್ಲಿ ತೊಡಗಿದನು. 'ಜನರ ನ್ಯಾಯರಕ್ಷಕ' ನೆಂದು ಹೆಸರಾದ ನವರೋಜಿ ಫರ್ದೂಂಜಿಯ ಸಹಕಾರದಿಂದ ೧೮೫೧ ರ ಆಗಸ್ಟ್ ೩ ರಲ್ಲಿ 'ರಹ್ನೂಮೆ ಮಜ್ದಯಾಸ್ನನ್ ಸಭಾ' ಅಥವಾ 'ಮಜ್ದಯಾಸ್ನನ ಮಾರ್ಗದರ್ಶಕ' ಎಂಬ ಸಂಸ್ಥೆಯನ್ನು ಸ್ಥಾಪಿಸಿದನು. ನವರೋಜಿ ಫರ್ದೂಂಜಿ ಅದರ ಅಧ್ಯಕ್ಷನಾಗಿಯೂ ದಾದಾಭಾಯಿ ಕಾರ್ಯದರ್ಶಿಯಾಗಿಯೂ ನೇಮಿತರಾದರು. ಝರೋಷ್ಟ್ರ ಮತದ ತತ್ತ್ವಗಳನ್ನು ವಿವರಿಸುವುದೂ, ಅನಾವಶ್ಯಕವಾಗಿ ಬೆಳೆದುಕೊಂಡುಬಂದ ಆವರಣಗಳನ್ನು ಕಿತ್ತುಹಾಕಿ ಧರ್ಮದ ಮೂಲಭೂತವಾದ ಸ್ವರೂಪವನ್ನು ಕಂಡು ಹಿಡಿದು ಪುರಾತನ ಧರ್ಮವನ್ನು ಅದರ ಶುದ್ಧ ರೂಪದಲ್ಲಿ ಸ್ಥಾಪಿಸುವುದೂ ಸಂಘದ ಉದ್ದೇಶಗಳಾಗಿದ್ದವು.

ದಾದಾಭಾಯಿ ಅನೇಕ ಸಂಘಗಳಲ್ಲಿ ಕೆಲಸ ಮಾಡುತ್ತಿದ್ದನು. ಆದರೆ ರಹ್‌ನೂಮೆ ಸಭೆಯ ಕೆಲಸಗಳಿಂದ ಆದಷ್ಟು ತೊಂದರೆ ಬೇರೆ ಯಾವ ಸಂಘದಿಂದಲೂ ಆಗಲಿಲ್ಲ. ಅವನು ಸಭೆಯ ಕಾರ್ಯದರ್ಶಿಯಾದದ್ದರಿಂದ ಎಲ್ಲ ಕೆಲಸದ ಜವಾಬ್ದಾರಿಯ ಹೊರೆಯನ್ನೂ ಹೊರಬೇಕಾಗಿತ್ತು. ವಿರೋಧ ಸಂಘ ಸಭೆಗಳಲ್ಲಿಯೂ ಪತ್ರಿಕೆಗಳಲ್ಲಿಯೂ ನಡೆಯುತ್ತಿದ್ದ ಅಪಪ್ರಚಾರ ಆಘಾತಗಳನ್ನು ಎದುರಿಸಿ ನಿಂತು ಕೆಲಸ ಮಾಡಬೇಕಾಗಿತ್ತು. ಧರ್ಮದ ಪುನರುಜ್ಜೀವನ ಕಾರ್ಯಕ್ಕೆ ಮನಸ್ಸು ಕೊಟ್ಟದ್ದರಿಂದ ದಾದಾಭಾಯಿ ಈ ಯಾವ ಶ್ರಮವನ್ನೂ ಲೆಕ್ಕಿಸಲಿಲ್ಲ. ವಿರೋಧಿಗಳು ನಿಂದೆಯ ಮಾರ್ಗವನ್ನು ಹಿಡಿದು ನಡೆದರೂ ದಾದಾಭಾಯಿ ಆ ಮಾರ್ಗವನ್ನು ತುಳಿಯಬೊಪ್ಪದೆ, ನ್ಯಾಯ ಮಾರ್ಗವನ್ನು ಹಿಡಿದು ಸಕಾರಣವಾಗಿ ವಾದಿಸುತ್ತಿದ್ದನು. ಆದರಿಂದ ಕೊನೆಯಲ್ಲಿ ಜಯ ಲಭಿಸಿತು, ಝರೋಷ್ಟ್ರಮತವು ಪರಕೀಯವಾದ ನಂಬಿಕೆಗಳಿಂದ ಬಹುಮಟ್ಟಿಗೆ ಬಿಡುಗಡೆ ಹೊಂದಿತು. ರಹ್‌ನೂಮೆ ಸಭೆಯ ಉದ್ದೇಶ ಫಲಿಸಿ ಅದು ಇಂದಿಗೂ ಉಪಯುಕ್ತವಾದ ಕೆಲಸ ನಡಸಿಕೊಂಡು ಹೋಗುತ್ತಿದೆ. ಅದರ ಪ್ರತಿ ಸ್ಪರ್ಧಿಯಾದ ರಹೇ ರಾಸ್ತ್‌ನೂಮೆ ಝರೋಷ್ಟ್ರ ಸಭಾ ಮೂರು ವರ್ಷ ತುಂಬುವುದರೊಳಗೇ ಮೃತಿ ಹೊಂದಿತು. ಇವೆಲ್ಲದರ ಪರಿಣಾಮವಾಗಿ ಝರೋಷ್ಟ್ರ ಮತ ಶುದ್ಧ ಸ್ವರೂಪಕ್ಕೆ ತಿರುಗುತ್ತಿದೆ; ಅದರ ಧರ್ಮಗ್ರಂಥಗಳ ಅಭ್ಯಾಸದಲ್ಲಿ ಪುನರಾಸಕ್ತಿ ತೋರುತ್ತಿದೆ.

ಸುಧಾರಣೆಯನ್ನು ಆರಂಭಿಸಿದ ಐವತ್ತು ವರ್ಷಗಳ ನಂತರ ದಾದಾಭಾಯಿ ಲಂಡನ್ನಿನಲ್ಲಿ ಇದ್ದಾಗ ಖರ್ಷೆದ್‌ಜಿ ರುಸ್ತುಮ್‌ಜಿ ಕಾಮಾ (ದಾದಾಭಾಯಿಯ ನಂತರ ಈತನು ರಹ್‌ನೂಮೆ ಸಭೆಯ ಜೀವಂತ ಶಕ್ತಿಯಾಗಿ ಅದರ ಅಧ್ಯಕ್ಷನಾಗಿದ್ದನು) ಸಭೆಯ ಸ್ವರ್ಣ ಮಹೋತ್ಸವವನ್ನು ಆಚರಿಸುವುದಾಗಿ ದಾದಾಭಾಯಿಗೆ ಸಂದೇಶ ಕಳಿಸಿದನು. ದಾದಾಭಾಯಿ ಉತ್ತರವಾಗಿ ಸಭೆಯ ಆರಂಭದಿನಗಳಲ್ಲಿ ಒದಗಿದ ಕಷ್ಟಗಳನ್ನು ಸ್ಮರಿಸಿ ಪತ್ರ ಬರೆದನು. ಸರೋಷ್ಟ್ರಿ ಮತವನ್ನು ಅದರ ಶುದ್ಧ ಸ್ವರೂಪದ ಪೂರ್ವ ಸ್ಥಿತಿಗೆ ತರಬೇಕೆಂಬ ಸಭೆಯ ಉದ್ದೇಶ ಬಹುಮಟ್ಟಿಗೆ ಸಾಧಿತವಾಗಿತ್ತು. ಹೊಸ ಕೆಲಸಗಾರರನ್ನು ಆಕರ್ಷಿಸುವುದರಲ್ಲಿ ಕಾಮಾ ತೋರುತ್ತಿದ್ದ ಉತ್ಸಾಹವೂ ಆತನ ಅವೆಸ್ತದ ಪಾಂಡಿತ್ಯವೂ ಬಿಡುವಿಲ್ಲದ ಶ್ರಮವೂ ಸಭೆಯ ಜಯಕ್ಕೆ ಬಹುಮಟ್ಟಿಗೆ ಕಾರಣವಾದವು.

ಸಭೆಯ ವಜ್ರಮಹೋತ್ಸವದ ಕಾಲದಲ್ಲಿ ಹಲವು ಸದಸ್ಯರ ನಿಯೋಗವೊಂದು ಬೊಂಬಾಯಿನ ಹತ್ತಿರವಿರುವ ವರ್ಸೋವಾದಲ್ಲಿ ದಾದಾಭಾಯಿಯನ್ನು ಅವನ ಮನೆಯಲ್ಲಿ ಭೇಟಿಮಾಡಿ ಸಭೆಯ ಸ್ಥಾಪಕನಾದ ಆತನನ್ನು ಅಭಿನಂದಿಸಿತು. 'ವಿದ್ಯಾರ್ಥಿಗಳ ಸಾಹಿತ್ಯ ವಿಜ್ಞಾನ ಸಂಘ'ವೂ 'ಜ್ಞಾನ ಪ್ರಸಾರಕ ಮಂಡಲಿ'ಯೂ ಸ್ವರ್ಣ ಮಹೋತ್ಸವಗಳನ್ನು ನಡಸಿದವು. ದಾದಾಭಾಯಿಯ ಜೀವಿತದ ಕಡೆಯ ಹತ್ತು ವರ್ಷಗಳಲ್ಲಿ ವರ್ಸೋವಾದ ಅವನ ಗೃಹ ಒಂದು ಯಾತ್ರಾ ಸ್ಥಳವಾಗಿ ಪರಿಣಮಿಸಿತ್ತು. ವಿದ್ಯಾವತಿಯರಾದ ಮಹಿಳೆಯರು ಪ್ರತಿ ವರ್ಷವೂ ಅವನ ಜನ್ಮದಿನದ ವೇಳೆಗೆ ಅಲ್ಲಿಗೆ ಹೋಗಿ ಭಾರತ ಮಹಿಳೆಯರ ಅಭಿವೃದ್ಧಿಗಾಗಿ ಶ್ರಮಿಸಿದಾತನನ್ನು ಕಂಡು ಗೌರವಿಸಿ ಬರುತ್ತಿದ್ದರು. ನಾನಾಕೋಮಿನ ಪ್ರತಿನಿಧಿಗಳೂ ಅವನನ್ನು ಸಂದರ್ಶಿಸಿ ಬರುತ್ತಿದ್ದರು. ಯೌವನದಲ್ಲಿ ಉತ್ಸಾಹದಿಂದ ಎಲ್ಲೆಲ್ಲೂ ಸುಧಾರಣೆಗಳಲ್ಲಿ ತೊಡಗಿದಾತನಿಗೆ ವೃದ್ಧಾಪ್ಯದಲ್ಲಿ, ಇಡೀ ಜನಾಂಗವೇ ಬದಲಾವಣೆ ಹೊಂದಿ ಪ್ರಗತಿಪಥದಲ್ಲಿರುವುದನ್ನು ಕಾಣುವುದಕ್ಕಿಂತ ಹೆಚ್ಚಿನ ಸಂತೋಷವೇನಿದ್ದೀತು?

# ೫. ಮೊದಮೊದಲ ರಾಜಕೀಯ

೧೮೩೩ ನೆಯ ಇಸವಿಯ ಸನ್ನದಿನಿಂದ ಈಸ್ಟ್ ಇಂಡಿಯಾ ಕಂಪೆನಿಗೆ ೨೦ ವರ್ಷಗಳ ಜೀವದಾನ ದೊರೆತಿತ್ತು. ವ್ಯಾಪಾರ ಸಂಸ್ಥೆಯಾದ ಆ ಕಂಪೆನಿ ಕ್ರಮೇಣ ರಾಜ್ಯಾಡಳಿತ ವರ್ಗವಾಗಿ ಮಾರ್ಪಟ್ಟಿತ್ತು. ಅದರ ಸನ್ನದನ್ನು ಮುಂದುವರಿಸುವುದೇ ಬಿಡುವುದೇ ಎನ್ನುವುದು ೧೮೫೨ರಲ್ಲಿ ಪ್ರಮುಖ ಪ್ರಶ್ನೆಯಾಗಿ, ಅದರ ವಿಚಾರದಲ್ಲಿ ಉಗ್ರವಾದ ಚರ್ಚೆ ನಡೆಯುತ್ತಿತ್ತು. ರಾಜಕೀಯದಲ್ಲಿ ಪ್ರವೇಶಿಸಲು ಬೊಂಬಾಯಿನ ಪ್ರಮುಖರಿಗೆ ಅದೊಂದು ಅವಕಾಶವಾಯಿತು. ಪಾಶ್ಚಾತ್ಯ ಶಿಕ್ಷಣ ದೇಶದಲ್ಲಿ ಹರಡಿದಂತೆಲ್ಲ, ದೇಶವನ್ನು ವ್ಯಾಪಾರದ ಕಂಪೆನಿಯ ನೀತಿಯಿಂದ ಆಳತಕ್ಕದ್ದಲ್ಲವೆಂದು ಕೇಳುವ ಹಕ್ಕು ತಮಗಿದೆಯೆಂದು ಭಾರತೀಯರಿಗೆ ಮನದಟ್ಟಾಯಿತು. ಆ ಕಾಲದಲ್ಲಿ ದೇಶದಲ್ಲಿ ಒಂದು ವಿಶ್ವವಿದ್ಯಾನಿಲಯವೂ ಇರಲಿಲ್ಲ; ಅತೃಪ್ತ ಪದವೀಧರ ವರ್ಗವೂ ಇರಲಿಲ್ಲ. ಆದರೂ ದೇಶದ ಆಡಳಿತದಲ್ಲಿ ದೇಶೀಯರನ್ನು ಸೇರಿಸದಿರುವುದು ಜನರಲ್ಲಿ ಬಹು ಅಸಮಾಧಾನಕ್ಕೆ ಕಾರಣವಾಗಿತ್ತು. ೧೮೩೩ ರ ಶಾಸನದಲ್ಲಿ ಯಾವ ಭಾರತ ದೇಶೀಯನನ್ನಾಗಲಿ, ಹುಟ್ಟಿನಿಂದ ಭಾರತ ಪ್ರಜೆಯಾದವನನ್ನಾಗಲಿ, ಅವನ ಜಾತಿ, ಜನ್ಮಸ್ಥಳ, ವಂಶ, ವರ್ಣ ಇವುಗಳ ಕಾರಣದಿಂದ ಮಾತ್ರವೇ ಅಧಿಕಾರ ಸ್ಥಾನಕ್ಕೆ ಅನರ್ಹನೆಂದು ಪರಿಗಣಿಸತಕ್ಕದ್ದಲ್ಲವೆಂದು, ಒಂದು ಕಲಮನ್ನು ನಿರ್ದಿಷ್ಟವಾಗಿ ಸೇರಿಸಿದ್ದರು. ಆದರೆ ಒಡಂಬಡಿಕೆಯ ಕಟ್ಟೆಗೊಳಪಟ್ಟ ಮತ್ತು ಒಳಪಟ್ಟಿಲ್ಲದ ಅಧಿಕಾರವರ್ಗ ಎಂಬ ಭೇದದಿಂದ ಆ ಶಾಸನ ಊರ್ಜಿತವಾಗದಂತೆ ಮಾಡಿದರು. ಈಸ್ಟ್ ಇಂಡಿಯಾ ಕಂಪೆನಿಯಿಂದ ಇಂಗ್ಲೆಂಡಿನಲ್ಲಿ ಸ್ಥಾಪಿತವಾದ ಹೈಲಿಬ್ಯೂರಿ ಕಾಲೇಜಿನಲ್ಲಿ ಓದಿದ ತರುಣರನ್ನು ಇಲ್ಲಿ ನ್ಯಾಯಾಡಳಿತ ನಡಸುವುದಕ್ಕೂ ರಾಜ್ಯಾದಾಯ ಸಂಗ್ರಹದ ಮೇಲ್ವಿಚಾರಣೆ ನೋಡಿಕೊಳ್ಳುವುದಕ್ಕೂ ಕಳಿಸುತ್ತಿದ್ದರು.

ಇಂಗ್ಲೆಂಡಿನ ವಿವಿಧ ಪಕ್ಷಗಳ ಮುಖಂಡರೂ, ಮಂತ್ರಿಗಳೂ, ಬೋರ್ಡ್ ಆಫ್ ಕಂಟ್ರೋಲಿನ ಅಧ್ಯಕ್ಷನೂ, ಕಂಪೆನಿಯ ಡೈರೆಕ್ಟರುಗಳೂ

ಕಂಪೆನಿಯ ಅವಧಿಯ ಸನ್ನದನ್ನು ಮುಂದುವರಿಸಬೇಕೆಂದು ತಮ್ಮತಮ್ಮಲ್ಲಿ ತೀರ್ಮಾನ ಮಾಡಿಕೊಂಡಿದ್ದರಂತೆ. ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಲು ಭಾರತೀಯರಿಗೆ ಈ ಸಂದರ್ಭ ಒಂದು ಅವಕಾಶವನ್ನೊದಗಿಸಿತು. ಬಂಗಾಳಿಗಳು ಮುಂದಾಳುತನವನ್ನು ವಹಿಸಿ ಬ್ರಿಟಿಷ್ ಸರಕಾರಕ್ಕೆ ಹೇಳಿಕೆಯನ್ನು ಸಲ್ಲಿಸುವುದಕ್ಕಾಗಿ ಸಂಘವನ್ನೇರ್ಪಡಿಸಿಕೊಂಡರು. ಬೊಂಬಾಯಲ್ಲೂ 'ಸ್ಥಳೀಯ ವಾಸಿಗಳು' ೧೮೫೨ರ ಆಗಸ್ಟ್ ೨೬ ರಲ್ಲಿ ಎಲ್ಫಿನ್‌ಸ್ಟನ್ ಸಂಸ್ಥೆಯ ಕೊಟಡಿಯಲ್ಲಿ ಸಭೆ ಸೇರಿ, ಬೊಂಬಾಯಿ ಪ್ರಾಂತದ ಮೊದಲನೆಯ ರಾಜಕೀಯ ಸಂಘವಾದ ಬೊಂಬಾಯಿ ಅಸೋಸಿಯೇಷನ್ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು.

ಆ ಸಂದರ್ಭದಲ್ಲಿ ದಾದಾಭಾಯಿ ಅಲ್ಲಿ ಹಾಜರಿದ್ದು ಭಾಷಣ ಮಾಡಿದನು. ಈಗಿನ ಕಾಲದ ದೃಷ್ಟಿಯಿಂದ ಆ ಭಾಷಣ ಕೇವಲ ನಮ್ರವಾಗಿದೆ, ಸಪ್ಪೆಯಾಗಿದೆ. ಆದರೆ ಆ ಕಾಲದ ಸಮಯ ಸಂದರ್ಭಗಳಿಂದ ಅದನ್ನು ವಿವೇಚಿಸಬೇಕು. ಸಾರ್ವಜನಿಕ ಜೀವನ ಆಗಿನ್ನೂ ಬಹು ಕ್ಷೀಣ ಸ್ಥಿತಿಯಲ್ಲಿತ್ತು. ರಾಷ್ಟ್ರೀಯ ಜಾಗೃತಿ ಇನ್ನೂ ಉಂಟಾಗಿರಲಿಲ್ಲ. ಅಂಥ ಸನ್ನಿವೇಶದಲ್ಲಿ ಸುಧಾರಣಾವಾದಿಗಳು ಆಡಳಿತಗಾರರ ನ್ಯಾಯ ಪಕ್ಷಪಾತ ಬುದ್ಧಿಗೂ ಅಂತಃ ಸಾಕ್ಷಿಗೂ ಮನವಿ ಮಾಡಬಹುದಾಗಿತ್ತು ಮಾತ್ರ.

ಎಷ್ಟೋ ಆಶಾಭಂಗಗಳಾದರೂ ಮುಂದೆ ದಾದಾಭಾಯಿ ವಿವರಿಸಿದ ರಾಜಕೀಯ ಮತದ ಮುನ್ಸೂಚನೆಯನ್ನು ಭಾಷಣದಲ್ಲಿ ಕಾಣಬಹುದು.

ಬ್ರಿಟಿಷ್ ಸರಕಾರದ ಆಡಳಿತದಲ್ಲಿ ನಾವು ಹೆಚ್ಚಾದ ಜುಲುಮನ್ನು ಅನುಭವಿಸುತ್ತಿಲ್ಲ. ಬೇರೆ ಸರಕಾರಗಳ ಆಡಳಿತಕ್ಕಿಂತ ದಯಾಪರವಾದ ಈ ಸರಕಾರದ ಆಶ್ರಯದಲ್ಲಿ ನಾವು ಹೆಚ್ಚು ಕಡಮೆ ಸುಖವಾಗಿದ್ದೇವೆ. ನಾವು ಏನು ಕೆಡುಕನ್ನು ಅನುಭವಿಸುತ್ತಿದ್ದರೂ ಅದು ಹೊಸತಾಗಿ ಇಂಗ್ಲಂಡಿನಿಂದ ಬರುವ ಅಧಿಕಾರಿಗಳ ಅಜ್ಞಾನದಿಂದ ಉಂಟಾದದ್ದು. ನಮ್ಮ ದೇಶದ ಅನೇಕ ಆಚರಣೆಗಳು, ಪದ್ಧತಿಗಳು, ಸಂಪ್ರದಾಯಗಳು ಇವುಗಳನ್ನು ಕುರಿತು ಅವರು ಕಾನೂನುಗಳನ್ನು ಮಾಡಬಹುದು, ಅದರಿಂದ ನಮ್ಮ ಜನಕ್ಕೆ ಕೆಡುಕಾದರೂ ತಮ್ಮ ಕರ್ತವ್ಯವನ್ನು ಅಂತಃ ಸಾಕ್ಷಿ ಪೂರ್ವಕವಾಗಿ ನಿರ್ವಹಿಸಿದ್ದೇವೆಂದು ಭಾವಿಸಬಹುದು ಆದರೆ ಈ ಬಗೆಯ ಸಂಘವೊಂದಿದ್ದರೆ ನಾವು ಮಾರ್ಪಾಟುಗಳನ್ನು ಸೂಚಿಸಬಹುದು. ಇಂಥ ಸಂಸ್ಥೆಯಿಂದ ಬರುವ ಸಲಹೆಗಳನ್ನು ಅವರು ಕೇಳಲೇಬೇಕು.

ಈ ಭಾಷಣದಲ್ಲಿ ಅವನ ರಾಜಕೀಯ ತತ್ತ್ವದ ಮೂಲಸಿದ್ಧಾಂತ ಗಳನ್ನು ಕಾಣಬಹುದು. ಇಂಡಿಯಾಕ್ಕೆ ಆಗಿರುವ ಅನ್ಯಾಯಗಳಿಂದ ಬ್ರಿಟಿಷರ ಆಳ್ವಿಕೆಯಿಂದಾಗಿರುವ ಪ್ರಯೋಜನಗಳನ್ನು ಮರೆಯಬಾರದು. ಭಾರತದ ಭವಿಷ್ಯತ್ತು ಇಂಗ್ಲೆಂಡಿನೊಡನೆ ಸೇರಿಕೊಂಡಿದೆ. ಅಧಿಕಾರಿಗಳು ತಪ್ಪು ಮಾಡುತ್ತಾರೆ, ನಿಜ, ಆದರೆ ಒಳ್ಳೆಯ ಉದ್ದೇಶದಿಂದಲೇ ಹಾಗೆ ಮಾಡಿರಬಹುದು.

ಇದುವರೆಗೆ ಆಂಗ್ಲೇಯರು ಮಾತ್ರ ಬ್ರಿಟಿಷ್ ಆಳ್ವಿಕೆಯನ್ನು ವಿಮ ರ್ಶಿಸುತ್ತಿದ್ದರು. ಈಗ, ಭಾರತಕ್ಕೆ ಆಗುವ ಅನ್ಯಾಯಗಳನ್ನು ಭಾರತದೇಶೀ ಯರೇ ಪರೀಕ್ಷಿಸಲು ಆರಂಭಿಸಿದರು. ಈ ಪರೀಕ್ಷೆಯಲ್ಲಿ ಒಂದೊಂದು ಹೆಜ್ಜೆ ಮುಂದುವರಿದಂತೆಯೂ ದೂರುಗಳ ಪಟ್ಟಿ ದೊಡ್ಡದಾಯಿತು. ಅಧಿಕಾರಿಗಳ ಮನಸ್ಸಿಗೆ ದೇಶದ ಕಷ್ಟ ತಾಗುವಂತೆ ಪ್ರಯತ್ನ ಮಾಡಿದಂತೆಲ್ಲ, ಅವರು ಸಹಾನುಭೂತಿಯಿಂದ ಕೇಳುವ ಆಸೆ ದೂರವಾಯಿತು. ಪರಿಸ್ಥಿತಿ ಎಷ್ಟೇ ನಿರಾಶಾದಾಯಕವಾಗಿದ್ದರೂ ದಾದಾಭಾಯಿಯ ನೀತಿಯು ತಳಹದಿ ಬದ ಲಾಗಲಿಲ್ಲ. ಸ್ವದೇಶದಲ್ಲಿರುವ ಇಂಗ್ಲಿಷ್ ಜನರು ಇಂಡಿಯದಲ್ಲಿನ ತಮ್ಮ ಬಂಧುಗಳಿಂದ ಬೇರೆಯಾಗಿದ್ದಾರೆಂದೂ, ಸಾಂಪ್ರದಾಯಿಕವಾಗಿ ನ್ಯಾಯ ಪಕ್ಷಪಾತಿಗಳಾದ ಅವರು ಕಾಲಕ್ರಮದಲ್ಲಿ ಭಾರತೀಯ ಸಹ ಪ್ರಜೆಗಳ ಆಶೋತ್ತರಗಳನ್ನು ಪೂರೈಸುವುದರಲ್ಲಿ ಸಹಾಯಕರಾಗುವರೆಂದೂ, ನಾಧಾರ ಣವಾಗಿ ಆಗಿನ ರಾಜಕೀಯ ಮುಂದಾಳುಗಳು ನಂಬಿದ್ದರು.

ಹತ್ತೊಂಭತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಏಳುತ್ತಿದ್ದ ಹೊಸ ತಲೆಮೊರೆಯ ಜನದ ಅಭಿಪ್ರಾಯ ಬೇರೆಯಾಗಿತ್ತು. ಬ್ರಿಟಿಷರ ಆಡಳಿತವನ್ನೂ ಅವರ ಶೀಲವನ್ನೂ ಅವರ ದಬ್ಬಾಳಿಕೆಯಿಂದಲೂ ಕೊಟ್ಟ ವಚನಗಳಿಂದ ನುಣುಚಿಕೊಳ್ಳುವ ನಡವಳಿಕೆಯಿಂದಲೂ ಇವರು ಪರೀಕ್ಷಿಸಿ ಬೆಲೆಕಟ್ಟುತ್ತಿದ್ದರು ಇಂಡಿಯದ ದುಃಖಗಳ ಪರಿಹಾರಕ್ಕೆ ಬ್ರಿಟಿಷರನ್ನು ಆಶ್ರಯಿಸುವ ಹಿರಿಯರ ಸ್ವಭಾವವನ್ನು ಅಲ್ಲಗಳೆಯುವ ಜನರ ಸಂಖ್ಯೆ ಹೆಚ್ಚಾಗುತ್ತಿತ್ತು. ಭಾರತದ ಬಿಡುಗಡೆ ಬೇಡುವುದರಿಂದ ದೊರೆಯತಕ್ಕ ದ್ದಲ್ಲ, ನಮ್ಮ ಹಕ್ಕುಗಳನ್ನು ಸಾಧಿಸುವುದರಿಂದ ಬರತಕ್ಕದ್ದು ; ಆದು ದೊರೆ ಯುವುದು ತಗ್ಗಿ ನಡೆಯುವುದರಿಂದಲೂ ಅಲ್ಲ, ಪ್ರತಿಕ್ರಿಯೆಯನ್ನು

ಹೂಡುವುದರಿಂದ ಮಾತ್ರ. ತೀವ್ರಗಾಮಿ ಪಕ್ಷದ ಜನ ಹಿಂಸಾತತ್ತ್ವವನ್ನು ಬೋಧಿಸಿದರು. ರಾಷ್ಟ್ರ ಮಹಾಸಭೆಯ ಉಪಾಯವಾದಿ ಜನರಲ್ಲಿ (Moderates) ಕೂಡ ಅನೇಕ ಜನರು ಬ್ರಿಟಿಷರ ನ್ಯಾಯ ಪಕ್ಷಪಾತ ವನ್ನು ಊರುಗೋಲಾಗಿ ನಂಬತಕ್ಕದ್ದಲ್ಲವೆಂದರು. ಆದರೆ ನಮ್ಮ ನಾಯ ಕನು ತನ್ನ ನಂಬಿಕೆಯ ವಿಷಯದಲ್ಲಿ ಕ್ಷಣಮಾತ್ರವೂ ಅನುಮಾನಿಸಲಿಲ್ಲ.

ಬಾಂಬೆ ಅಸೋಸಿಯೇಷನ್ನಿನ ಅರ್ಜಿಯಿಂದ ಇಂಗ್ಲೆಂಡಿನಲ್ಲಿ ಕೊಂಚ ಪರಿಣಾಮವಾಯಿತು. ಇಂಡಿಯದ ಮಿತ್ರರಸೇಕರು ಮನವಿದಾರರ ಪರ ವಾಗಿ ಆಗ್ರಹ ಪೂರ್ವಕವಾಗಿ ಮಾತನಾಡಿದರು. ನಿಷ್ಠುರ ಸ್ವಭಾವದ ಕಾಬ್ಡೆನ್ ಮಾತ್ರ ಇಂಡಿಯದ ಆಡಳಿತದಿಂದ ಭಾರತೀಯರಿಗಾಗಲಿ ವಿದೇಶೀ ಆಡಳಿತಗಾರರಿಗಾಗಲಿ ಯಾವ ಪ್ರಯೋಜನವೂ ಇಲ್ಲವೆಂದನು. ಆದರೆ ಅವನ ದೇಶಬಾಂಧವರೇನೊ ಭಾರತವನ್ನು ಬಿಡುವ ಯೋಚನೆಯಲ್ಲಿರಲಿಲ್ಲ.

೧೮೫೩ರ ಮಾರ್ಚಿ ೧೨ರಲ್ಲಿ 'ಭಾರತದ ಮಿತ್ರರ' (The Friends of India) ಸಭೆ ಲಂಡನ್ನಿನ ಛಾರ್ಲ್ಸ್ ರಸ್ತೆಯಲ್ಲಿ ನಡೆದು 'ಭಾರತ ಸುಧಾರಣಾ ಸಂಘ' (India Reform Society) ಸ್ಥಾಪಿತವಾಯಿತು. ಡೇನ್ಬಿ ಸೀಮೌರ್ ಅದರ ಅಧ್ಯಕ್ಷನಾಗಿಯೂ, ಜಾನ್ ಡಿಕಿನ್‌ಸನ್ ಕಾರ್ಯ ದರ್ಶಿಯಾಗಿಯೂ ನೇಮಿತರಾದರು. ಈ ಸಂಘದ ಚಟುವಟಿಕೆಗಳಿಂದ ಹೌಸ್ ಆಫ್ ಕಾಮನ್ಸಿನ ಮೇಲೆ ಏನೂ ಪರಿಣಾಮವಾಗಲಿಲ್ಲ ಆದರೆ ಕಂಪೆನಿಯ ಆಡಳಿತದಲ್ಲಿನ ಎಲ್ಲಾ ಸಿವಿಲ್ ನೌಕರಿಗಳನ್ನೂ ವೈದ್ಯಕೀಯ ನೌಕರಿಗಳನ್ನೂ ಸಾರ್ವಜನಿಕ ಸ್ಪರ್ಧೆಗೆ ಒಳಪಡಿಸಲಾಯಿತು. ಇದಕ್ಕೆ ಸಂಬಂಧ ಪಟ್ಟ ಪರೀಕ್ಷೆಗಳೆಲ್ಲ ಇಂಗ್ಲೆಂಡಿನಲ್ಲಿ ನಡೆಯತಕ್ಕವುಗಳಾದ್ದರಿಂದ ಭಾರತೀಯರಿಗೆ ವ್ಯಾಯಿಕವಾಗಿ ಅಧಿಕಾರಿವರ್ಗದಲ್ಲಿ ಪ್ರವೇಶವಿರಲಿಲ್ಲ. ಒಟ್ಟಿನಲ್ಲಿ ಚಳವಳಿಯಿಂದ ತೃಪ್ತಿಯಾಗುವಂಥ ಫಲ ದೊರೆಯಲಿಲ್ಲ. ಆದರೆ ಒಂದು ವಿಷಯ ಮಾತ್ರ ಸ್ಪಷ್ಟವಾಯಿತು : ಒಟ್ಟುಗೂಡಿ ಕೆಲಸ ಮಾಡಿದ್ದ ರಿಂದ ಆ ಸಂದರ್ಭದಲ್ಲಿ ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ಫಲವನ್ನು ಬ್ರಿಟಿಷ್ ಮಂತ್ರಿಗಳಿಂದ ಹೊಂದಲು ಸಾಧ್ಯವಾಯಿತು. ಅಲ್ಲಿಂದ ಮುಂದೆ 'ಚಳವಳಿ ನಡೆಸಿ' ಎಂಬುದೇ ದಾದಾಭಾಯಿಯ ಸೂತ್ರವಾಯಿತು.

# ೬. ಉಪದೇಶಕ

ದಾದಾಭಾಯಿಗೆ ಮೂವತ್ತು ವರ್ಷ ವಯಸ್ಸಾಗುವ ಮೊದಲೇ ಅವನು, ನಾನಾ ಕ್ಷೇತ್ರಗಳಲ್ಲಿ ಎಸಗಿದ ಸಮಾಜ ಸೇವೆಯ ಫಲವಾಗಿ, ಪಾರಸೀ ಜನಾಂಗದ ನಾಯಕನಾದುದಲ್ಲದೆ ಬೊಂಬಾಯಿಯ ಜನರ ಮುಂದಾಳೂ ಆದನು. ಸುಧಾರಣಾ ಕಾರ್ಯದಲ್ಲಿ ನಿರತನಾದ ಅವನಿಗೆ ಸ್ವತಂತ್ರವಾದ ವಾರ್ತಾ ಪತ್ರಿಕೆಯ ನೆರವು ಅಗತ್ಯವಾಗಿ ಕಂಡಿತು. ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು, ವಿವರಿಸಲು, ಸ್ವಂತ ಪತ್ರಿಕೆಯಿಲ್ಲ ದಿದ್ದರೆ ಸುಧಾರಕನಿಗೆ ತನ್ನ ಕಾರ್ಯದಲ್ಲಿ ಬಹು ತೊಂದರೆ. ವಾರ್ತಾ ಪತ್ರಿಕೆ ಗಳು ಸಾಮಾನ್ಯವಾಗಿ ಜನಮನೋಭಾವವನ್ನು ಅನುಸರಿಸಿ ನಡೆಯುತ್ತವೆ, 'ಕೂಗುತ್ತವೆ.' ಪತ್ರಿಕೆಗಳ ನೀತಿ ಮುಖ್ಯವಾಗಿ ಆರ್ಥಿಕಗಣನೆಯಿಂದ ರೂಪಿತವಾಗುತ್ತದೆ. ಬೊಂಬಾಯಿಯಲ್ಲಿ ಐದು ಗುಜರಾತಿ ವಾರ್ತಾ ಪತ್ರಿಕೆಗಳಿದ್ದವು. ಎಲ್ಲವೂ ಪಾರಸಿಗಳಿಗೆ ಸೇರಿದ್ದು. ಆದರೆ ಸುಧಾರಣೆಯ ಉದ್ದೇಶಕ್ಕೆ ಆವಶ್ಯಕವಾದ ಸ್ವತಂತ್ರ ಮನೋಭಾವವಾಗಲಿ ಪಕ್ಷಪಾತರಹಿತ ದೃಷ್ಟಿಯಾಗಲಿ ಅವುಗಳಲ್ಲಿ ಕಂಡುಬರುತ್ತಿರಲಿಲ್ಲ. ಉತ್ತಮ ತೆರನಾದ ಪತ್ರಿಕೆಯನ್ನು ನಡಸುವ ಉತ್ಸಾಹವೂ ಮನೋನಿರ್ಧಾರವೂ ದಾದಾಭಾಯಿ ಯಲ್ಲಿದ್ದವು, ಆದರೆ ಅವನಲ್ಲಿ ಆ ಯೋಜನೆಗೆ ಬೇಕಾದ ಹಣವಿರಲಿಲ್ಲ. ತನ್ನ ಕಷ್ಟಗಳನ್ನು ಕುರಿತು ಸ್ನೇಹಿತನಾದ ಖುರ್ಷೆದ್‌ಜಿ ನಸ್ಸರ್‌ವಾಂಜಿ ಕಾಮಾನಿಗೆ ಹೇಳಿದನು. ಆತನು ಆ ವಿಷಯದಲ್ಲಿ ಉತ್ಸಾಹಿಯಾಗಿ ಸಹಾಯಪರ ನಾಗಿದ್ದನು.

ಹಳ್ಳಿ ಹಳ್ಳಿಯಲ್ಲೂ ನೆಲಸಿ ಪತ್ರಿಕೆಯೆಂಬ ವೇದಿಕೆಯನ್ನು ಸ್ಥಾಪಿಸಿ ಕೊಂಡು ಆ ಮೂಲಕ ಮನುಷ್ಯನ ಉದ್ಧಾರಕ್ಕೆ ತನಗೆ ತೋರುವ ಪ್ರಮುಖ ತತ್ತ್ವಗಳನ್ನು ಪ್ರತಿಪಾದಿಸುವ ಉಪದೇಶಕನಾದ ಕ್ರೈಸ್ತ ಭಿಕ್ಷುವಿನ ವಿಚಾರ ವಾಗಿ ಕಾರ್ಲೈಲ್ ಒಂದು ಕಡೆಯಲ್ಲಿ ಹೇಳುತ್ತಾನೆ. ದಾದಾಭಾಯಿ ಅಂತಹ ಉಪದೇಶಕನಾಗಿದ್ದನು. ಹೊಸ ಪತ್ರಿಕೆಯ ಮೊದಲನೆಯ ಸಂಚಿಕೆ ೧೮೫೧ ರ ನವೆಂಬರ್ ೧೫ ರಲ್ಲಿ ಹೊರಟಿತು. ೧೦೦೦ ಪ್ರತಿ

ಗಳನ್ನು ಪ್ರಕಟಿಸಿ ಉಚಿತವಾಗಿ ಹಂಚಲಾಯಿತು. ಅದರಲ್ಲಿ ಒಂದು ಜಾಹಿರಾತೂ ಇರಲಿಲ್ಲ. ಅದು ಕೇವಲ ಸೇವಾ ಪ್ರೀತಿಗಳ ಕೆಲಸವಾಗಿತ್ತು. ಪತ್ರಿಕೆಯನ್ನು ಆರಂಭಿಸಲು ನವೆಂಬರ್ ೧೫ ವಿಚಿತ್ರವಾದ ಕಾಲವಾಗಿತ್ತು. ಹೀಗೆ ಹೊಸ ವರ್ಷಕ್ಕೆ ಮುಂಚೆಯೇ ಆರಂಭಿಸಲು ಕಾರಣವಿತ್ತು. ಸ್ಥಳೀಯವಾದ ಗಲಭೆಯಿಂದ ಪಾರಸಿ-ಮುಸ್ಲಿಂ ಹೊಡೆದಾಟ ನಡೆದಿತ್ತು. ಆದ್ದರಿಂದ ಪತ್ರಿಕೆಯನ್ನು ಹೊರಡಿಸಲು ದಾದಾಭಾಯಿ ಆತುರನಾಗಿದ್ದನು.

ಪಾರಸೀ ಯುವಕನೊಬ್ಬನು ನಡಸುತ್ತಿದ್ದ 'ಚಿತ್ರಜ್ಞಾನದರ್ಪಣ'ವೆಂಬ ಪತ್ರಿಕೆಯಲ್ಲಿ ಅನುಚಿತವಾದ ಲೇಖನವೊಂದು ಪ್ರಕಟವಾಗಿ ಅಸಾಧ್ಯ ಕ್ಷೋಭೆಯನ್ನೆಬ್ಬಿಸಿತು. ಸಮಾಜದ ಮೇಲೆ ಪ್ರಭಾವ ಬೀರಿ ಅದನ್ನು ಮಾರ್ಪಾಟುಗೊಳಿಸಿದ ಮಹಾಶಯರ ಜೀವನ ಚರಿತ್ರೆಗಳು ಅದರಲ್ಲಿ ಕ್ರಮವಾಗಿ ಪ್ರಕಟವಾಗುತ್ತಿದ್ದವು. ಆದರೆ ಸಂಪಾದಕನಾದ ಜೆಹ್ರಾಮ್‌ಜಿ ಖುರ್ಷೆದ್‌ಜಿ ಗಾಂಧಿಯು ಬರೆದ ಅರೇಬಿಯದ ಪ್ರವಾದಿಯನ್ನು ಕುರಿತ ಲೇಖನದಲ್ಲಿ ಮತ್ತೊಂದು ಮತಧರ್ಮದ ವಿಚಾರದಲ್ಲಿ ತೋರಬೇಕಾದ ಗೌರವ ಭಾವವಾಗಲಿ ಸಹಿಷ್ಣುತೆಯಾಗಲಿ ಇರಲಿಲ್ಲ. ತಮ್ಮ ಮತಧರ್ಮ ವಿಚಾರಗಳಲ್ಲಿ ಬಹು ಸೂಕ್ಷ್ಮಬುದ್ಧಿಗಳಾದ ಮಹಮ್ಮದೀಯರ ಮನಸ್ಸು ಸ್ವಾಭಾವಿಕವಾಗಿಯೇ ಕದಡಿತು. ಲೇಖನದ ಜೊತೆಗೆ ಪ್ರವಾದಿಯ ಲಿಥೊ ಚಿತ್ರವನ್ನೂ ಪ್ರಕಟಿಸಿದ್ದುದರಿಂದ ಅಪಚಾರ ಅತಿಯಾಯಿತು.

ಈ ರೀತಿಯಾದ ವಿವೇಕರಹಿತವಾದ ಕೆರಳುವಿಕೆಯಿಂದ ಮಹಮ್ಮದೀಯರು ಉದ್ರೇಕಗೊಂಡು ಒಂದು ಕೈಯಲ್ಲಿ ಕೊರಾನನ್ನೂ ಇನ್ನೊಂದರಲ್ಲಿ ಚೂರಿಯನ್ನೂ ಹಿಡಿದು ಮಸೀದಿಗಳಲ್ಲಿ ಜಮಾಯಿಸಿದರು. ಪಾರಸಿಗಳು ರೊಚ್ಚಿಗೆದ್ದ ಮಹಮ್ಮದೀಯರ ಕೈಗೆ ಸಿಕ್ಕಿ ಬೀಳದ ಹಾಗೆ ನೋಡಿಕೊಂಡರು. ಮಹಮ್ಮದೀಯರು ಮುಯ್ಯಿತೀರಿಸಿಕೊಳ್ಳಲು ಹಟತೊಟ್ಟಿದ್ದರು.

ಅನೇಕ ಜನ ಪಾರಸಿಗಳಂತೆ ದಾದಾಭಾಯಿಯೂ ತಮ್ಮ ಪಂಗಡದ ನಾಯಕರು ಇಡೀ ಪಂಗಡಕ್ಕೇ ದ್ರೋಹವೆಸಗಿ ಅದನ್ನು ಅಪಮಾನಕ್ಕೆ ಗುರಿಪಡಿಸಿದರೆಂದು ತಿಳಿದನು. ಹಿರಿಯರು ತಮ್ಮ ರಕ್ಷಣೆಗೆ ನೆರವಾಗದಿದ್ದುದರಿಂದ ಬಾಹರ್ ಕೋಟೆಯ ಪಾರಸಿಗಳು ತಮ್ಮ ಅಹವಾಲನ್ನು ಅಧಿಕಾರಿಗಳಿಗೆ ತಿಳಿಸಲು 'ದಾದಾಭಾಯಿ ಮಾಸ್ತರ'ನ್ನು ನಿರೀಕ್ಷಿಸಿದರು. ಸರಕಾರಕ್ಕೆ

ಸಲ್ಲಿಸುವ ವಿಜ್ಞಾಪನಾ ಪತ್ರಿಕೆಯನ್ನು ತಯಾರುಮಾಡುವ ಕೆಲಸವನ್ನು ಅವನಿಗೇ ವಹಿಸಿದರು- ತಮ್ಮ ರಕ್ಷಣೆಗಾಗಿ ಶೇಖರಿಸಿದ್ದ ನಿಧಿಯನ್ನೂ ಅವನ ವಶಕ್ಕೆ ಒಪ್ಪಿಸಿದರು. ವಾರ್ತಾಪತ್ರಿಕೆಗಳ ಪುಕ್ಕಲುತನವನ್ನೂ ಮುಂದಾಳುಗಳ ಡೋಲಾಯಮಾನವಾದ ನೀತಿಯನ್ನೂ ಕಂಡು, ಸ್ವತಂತ್ರವಾದ ಮತ್ತು ಧೈರ್ಯದಿಂದ ಕೂಡಿದ ಪತ್ರಿಕೆಯ ಅಗತ್ಯದ ವಿಷಯದಲ್ಲಿ ಅವನಿಗೆ ಸಂಶಯ ಉಳಿಯಲಿಲ್ಲ ಅದರಲ್ಲೂ ಹೊಸದಾಗಿ ಗಲಭೆ ಏಳುವ ಸಂದರ್ಭವಿದ್ದದ್ದರಿಂದ ಅಂಥ ಪತ್ರಿಕೆಯನ್ನು ಹೊರಡಿಸುವುದು ತೀರ ಅಗತ್ಯವೆನಿಸಿತು. 'ರಾಸ್ತ್ ಗೋಫ್ತಾರ್' (ಸತ್ಯವಾದಿ) ಪತ್ರಿಕೆಯನ್ನು ಅವನು ಕೂಡಲೆ ಆರಂಭಿಸಿದ ಕಾರಣವನ್ನು ಈಗ ತಿಳಿಯಬಹುದಾಗಿದೆ.

ಹೀಗೆ ಪೊಡೆದಾಟದ ಮಧ್ಯೆ, ಪತ್ರಿಕೆ ನ್ಯಾಯ ಸತ್ಯಗಳ ನಿರ್ಭಯವಾದಿಯಂತೆ, ಪ್ರಗತಿ ಭಾವದ ಪ್ರತಿಪಾದಕನಂತೆ ಹೊರಟಿತು. ಅದರ ತರುಣ ಸಂಪಾದಕನು ಅನನುಭವಿಯಾಗಿರಲಿಲ್ಲ. ಆ ವೇಳೆಗೇ ಅವನ ಬರಹ ಗಣನೀಯವಾದ ಪ್ರಮಾಣದಲ್ಲಿತ್ತು.

'ರಾಸ್ತ್ ಗೋಫ್ತಾರ'ದ ಮೊದಲನೆಯ ಮೂರು ಸಂಚಿಕೆಗಳು ದೊಂಬಿಯಿಂದುಂಟಾದ ಪರಿಸ್ಥಿತಿಯ ಚರ್ಚೆಗೆ ಹೆಚ್ಚು ಕಡಮೆ ಮೀಸಲಾಗಿದ್ದವು. ಬಹುವಾಗಿ ಮನ ತಾಗುವ ರೀತಿಯಲ್ಲಿ ಸಂಪಾದಕನು ಪಾರಸೀ ಜನಾಂಗದ ನಾಯಕರ ನಡತೆ ಎಷ್ಟು ಜಡಭರಿತವಾದದ್ದೆಂದು ತೋರಿಸಿದನು. ಈ ಆಪಾದನೆಯ ರೀತಿ ಮುಂದೆ ಅವನ ರಾಜಕೀಯ ಭಾಷಣಗಳಲ್ಲೂ ಬರಹಗಳಲ್ಲೂ ಕಂಡು ಬರುವ ಧೈರ್ಯದ ಮುನ್ಸೂಚನೆಯಾಗಿತ್ತು. ಮುಂದೆ, ಪಟ್ಟ ಭದ್ರ ಹಿತಾರ್ಥಗಳ ವಿರುದ್ಧವಾಗಿ ಹೋರಾಡಿದ, ಆಳುವವರ ಸ್ವೇಚ್ಛಾಪ್ರವೃತ್ತಿಯನ್ನೂ ಅನ್ಯಾಯಗಳನ್ನೂ ಉದ್ಘಾಟಿಸಿದ, ನಿರ್ದಾಕ್ಷಿಣ್ಯ ಪರನಾದ ಈ ವಿಮರ್ಶಕನು ಸ್ವಮತಸ್ಥ ಜನದ ಮುಂದಾಳುಗಳನ್ನು ಎದುರಿಸಿ, ಜನರ ಪರವಾಗಿ ಮಾತಾಡಲು ಅವರಿಗೆ ಯಾವ ಹಕ್ಕಿದೆಯೆಂದು ಕೇಳಲು ಹಿಂದೆಗೆಯಲಿಲ್ಲ.

ನೆಪೋಲಿಯನ್ನನ ಯುದ್ಧಾನಂತರ ಸುಮಾರು ನಲವತ್ತು ವರ್ಷಗಳ ಕಾಲ ಯೂರೋಪಿನಲ್ಲಿ ಶಾಂತಿ ನೆಲಸಿತ್ತು. ಶಾಂತಿ ಶಾಶ್ವತವಾಗಿ ನೆಲಸುತ್ತದೆಯೆಂದು ಜನ ಆಶಿಸಿದ್ದರು. ಆದರೆ ೧೮೫೧ರ 'ಮಹಾಪ್ರದರ್ಶನ'

(Great Exhibition) ನಡೆದ ಮೂರು ವರ್ಷಗಳೊಳಗೆ ರಷ್ಯಾದ ಜಾರನು ತಾನು ತುರ್ಕಿಸುಲ್ತಾನನ ಕ್ರಿಶ್ಚಿಯನ್ ಪ್ರಜೆಗಳ ರಕ್ಷಕನೆಂದು ಸಾರಿದನು. ಆ ಹಕ್ಕನ್ನು ನಿರಾಕರಿಸಿ ತುರ್ಕಿಯು ರಷ್ಯಾದ ಮೇಲೆ ಯುದ್ಧ ಹೂಡಿತು. ಇಂಗ್ಲೆಂಡ್ ಫ್ರಾನ್ಸುಗಳು ತುರ್ಕಿಯ ಸಹಾಯಕ್ಕೆ ನಿಂತವು.

ಆ ಕಾಲದಲ್ಲಿ, ರಷ್ಯಾ ಡಾನ್ಯೂಬ್ ನದಿಯನ್ನು ವಶಪಡಿಸಿಕೊಂಡರೆ ಸಿಂಧೂನದಿಯನ್ನು ವಶಪಡಿಸಿಕೊಂಡಂತೆ ಎಂಬ ನಂಬಿಕೆಯಿತ್ತು. ಆದ್ದರಿಂದ ಈ ಯುದ್ಧಸಂದರ್ಭದಲ್ಲಿ ಇಂಡಿಯಾದಲ್ಲಿ 'ದೇಶಭಕ್ತಿಯ ನಿಧಿ' (Patriotic Fund) ಯನ್ನು ಶೇಖರಿಸಲಾಯಿತು. ಭಾರತದ ಜನ ತಮ್ಮ ರಾಜಭಕ್ತಿಯನ್ನು ತೋರಿಸುವುದಕ್ಕಾಗಿಯೂ, ಭಾರತದ ಗಡಿಯಿಂದ ರಷ್ಯನರನ್ನು ದೂರವಿರಿಸಲು ಪ್ರಯತ್ನಿಸುತ್ತಿದ್ದ ಬ್ರಿಟಿಷರ ವಿಷಯದಲ್ಲಿ ತಮ್ಮ ಕೃತಜ್ಞತೆಯನ್ನು ತೋರಿಸುವುದಕ್ಕಾಗಿಯೂ, ನಿಧಿಗೆ ಉತ್ಸಾಹದಿಂದ ಹಣವನ್ನು ಕೊಟ್ಟರು. 'ದೇಶಭಕ್ತಿಯ ನಿಧಿ'ಯ ಉದ್ದೇಶ ಸಾಧನೆಗಾಗಿ ೧೮೫೪ ರ ಜನವರಿ ೩೧ ರಲ್ಲಿ ಬೊಂಬಾಯಿಯಲ್ಲಿ ಸಾರ್ವಜನಿಕ ಸಭೆಯೊಂದು ನಡೆಯಿತು. ಎಲ್ಫಿನ್‌ಸ್ಟನ್ ಸಭೆಯ ಅಧ್ಯಕ್ಷತೆ ವಹಿಸಿದ್ದನು. ದಾದಾಭಾಯಿ ಆ ಸಂದರ್ಭದಲ್ಲಿ ಭಾಷಣಮಾಡುತ್ತಾ ಹೀಗೆ ಹೇಳಿದನು: 'ದೇಶಭಕ್ತಿಯ ನಿಧಿ'ಗೆ ಬೊಂಬಾಯಿನ ಪೌರರಾದ ನಾವು ಏಕೆ ಹಣ ಕೊಡಬೇಕೆಂದು ಪ್ರಶ್ನೆ ಕೇಳಿದಾರೆ. ಅದಕ್ಕೆ ಡಾ| ವಿಲ್ಸನ್ ಆಗಲೇ, ಭಾರತದ ಹಿತಾಸಕ್ತಿಗಳು ಇಂಗ್ಲೆಂಡಿನದರೊಡನೆ ಕೂಡಿಕೊಂಡಿವೆಯೆಂದು ಬಹು ದಕ್ಷತೆಯಿಂದ ಉತ್ತರ ಹೇಳಿದಾರೆ.

## ೭. ಕಾಲೇಜಿನಿಂದ ಲೆಕ್ಕದ ಮನೆಗೆ

ದಾದಾಭಾಯಿ ಪ್ರೊಫೆಸರ್–ಉದ್ಯೋಗವನ್ನು ಬಿಟ್ಟು ಲೆಕ್ಕದ ಮನೆಗೆ ಹೋಗಲು ನಿರ್ಧರಿಸಿರುವುದನ್ನು ಕೇಳಿ ಪ್ರಿನ್ಸಿಪಾಲ್ ಹಾರ್ಕ್ನೆಸ್ 'ಎಂಥ ಪತನ!' ಎಂದನು. ಹೀಗೆ ಹೊಸ ಉದ್ಯೋಗವನ್ನು ಅರಸಲು ಏನು ಕಾರಣವಿರಬಹುದು? ದಾದಾಭಾಯಿಯ ಕೆಲವು ಪತ್ರಗಳಿಂದ ಈ ವಿಷಯ ವಿಶದವಾಗುತ್ತದೆ.

೧೮೫೫ ರಲ್ಲಿ ಕಾಮಾ ಕುಟುಂಬದವರು ಲಂಡನ್ನಿನಲ್ಲಿ ಒಂದು ವ್ಯಾಪಾರ ಸಂಸ್ಥೆಯನ್ನು ತೆರೆಯಲು ಉದ್ದೇಶಿಸಿದರು. ಲಂಡನ್ನಿನಲ್ಲಿ ಭಾರತದ ವ್ಯಾಪಾರ ಸಂಸ್ಥೆಯೊಂದು ಆರಂಭವಾಗಲು ಇದೇ ಮೊದಲು. ಈ ಸಾಹಸದ ಕಾರ್ಯದಲ್ಲಿ ದಕ್ಷನೂ ಪ್ರಾಮಾಣಿಕನೂ ಆದ ಪಾಲುದಾರನ ಸಹಕಾರ ಅಗತ್ಯವಾಗಿತ್ತು. ವ್ಯಾಪಾರಸಂಸ್ಥೆಯನ್ನು ಸೇರುವಂತೆ ದಾದಾಭಾಯಿಯನ್ನು ಆಹ್ವಾನಿಸಿದರು. ಅವನು ಒಪ್ಪಿದನು. ಅದರಿಂದ 'ಇಂಗ್ಲೆಂಡಿಗೂ ಇಂಡಿಯಾಕ್ಕೂ ನಿಕಟ ಸಂಬಂಧವನ್ನು ಏರ್ಪಡಿಸಲು' ಸಹಾಯವಾಗುತ್ತದೆಂದು ಅವನು ನಂಬಿದನು. 'ತರುಣ ಭಾರತೀಯರಿಗೆ ಈಸಂಸ್ಥೆ ಒಂದು ಮನೆ' ಯಾಗುತ್ತದೆ. ಅವರು ಇಂಗ್ಲೆಂಡಿಗೆ ಸುಲಭವಾಗಿಹೋಗಿ ಇಂಡಿಯನ್ ಸಿವಿಲ್ ಸರ್ವಿಸ್ ಮತ್ತು ಇತರ ಪರೀಕ್ಷೆಗಳಿಗೆ ಸ್ಪರ್ಧಿಸಬಹುದೆಂದು ಅವನು ಯೋಚಿಸಿದನು. 'ಭಾರತೀಯರಿಗೆ ಮಾತ್ರ ಭಾರತ' ಎಂಬುದು ಅವನ ಧ್ಯೇಯ ಮಂತ್ರವಾಗಿತ್ತು. ಹೀಗೆ ಮೊದಲ ನೋಟದಲ್ಲಿ 'ಪತನ'ವಾಗಿ ತೋರುವ ಅವನ ಉದ್ಯೋಗ ಪರಿವರ್ತನೆ ನಿಜವಾಗಿ ಅಭಿವೃದ್ಧಿಗೊಯ್ಯುವ ಸೋಪಾನವಾಗಿತ್ತು.

ದಾದಾಭಾಯಿಯೊಡನೆ ಮಂಚೇರ್‌ಜಿ ಹೋರ್ಮ್‌ಸ್‌ಜಿ ಕಾಮಾ ಮತ್ತು ಖರ್ಷೆದ್‌ಜಿ ರುಸ್ತುಮ್‌ಜಿ ಕಾಮಾ ಅವರುಗಳು 'ಕಾಮಾ ಅಂಡ್ ಕಂಪೆನಿ'ಯನ್ನು ಸ್ಥಾಪಿಸಲು ಹೊರಟರು. ಇವರು ಮೂವರು ಸೇರಿ ಒಂದು ತ್ರಿಪ್ರಭುತ್ವ. ಮೂವರೂ ಒಪ್ಪಿ ಕೆಲಸಗಳನ್ನು ನಿರ್ಣಯಿಸಿ ಮುಂದುವರಿಸಬೇಕು; ಭಿನ್ನಾಭಿಪ್ರಾಯ ತಲೆದೋರಿದರೆ ನಿರ್ಣಯಕ್ಕಾಗಿ ಬೊಂಬಾಯಿನ ಮುಖ್ಯ ಕಚೇರಿಗೆ ವಿಷಯವನ್ನು ತಿಳಿಸಬೇಕು: ಕೆಲಸಗಳಿಗೆ ತೊಂದರೆತರುವ ವ್ಯಾಪಾರತಂತ್ರ ಬೇರೊಂದು ಇದ್ದಿರಲಾರದು. ನಾಯಕತ್ರಯರು ಏಕಾಭಿಪ್ರಾಯಕ್ಕೆ ಬರಲು ಅಸಾಧ್ಯವಾದ ಅನೇಕ ಸಂದರ್ಭಗಳು ಒದಗಿದವು.

ಮೂಲಭೂತ ತತ್ತ್ವಗಳ ವಿಚಾರದಲ್ಲೂ ವ್ಯಾಪಾರ ನೀತಿಯ ವಿಚಾರದಲ್ಲೂ ಪ್ರಬಲವಾದ ಭಿನ್ನತೆಗಳು ತಲೆಯೆತ್ತಿದವು. ದಾದಾಭಾಯಿಯ ದೃಷ್ಟಿಯಲ್ಲಿ, ವ್ಯಾಪಾರ ಸಂಸ್ಥೆ ಊರ್ಜಿತವಾಗಿ ನಿಲ್ಲುವಂತೆ ಕೆಲಸಮಾಡುವುದು ತಮ್ಮ ಕರ್ತವ್ಯ; ಆದರೆ ಅಷ್ಟು ಮಾತ್ರ ಸಾಲದು: ತಮ್ಮ ಕೆಲಸ

ಒಟ್ಟಿನಲ್ಲಿ ಭಾರತೀಯರ ವ್ಯಾಪಾರ ಸಾಹಸಕ್ಕೆ ಅನುಕೂಲವಾಗಬೇಕು. ಲಂಡನ್ನಿನ ಪೇಟೆಯಲ್ಲಿ ತಮ್ಮ ಸಂಸ್ಥೆಗೆ ನಂಬಿಕೆ ಹುಟ್ಟಿದರೆ ಅದರಿಂದ ಯೂರೋಪಿನೊಡನೆ ಭಾರತದ ವ್ಯಾಪಾರ ಬೆಳೆಯುವ ಸಂಭವವುಂಟು. ದಾದಾಭಾಯಿಯ ಈ ಆದರ್ಶ ತತ್ತ್ವಗಳು ಖರ್ಷೆದ್‌ಜಿ ಕಾಮಾಗೆ ಒಪ್ಪಿಗೆಯಾಗುತ್ತಿದ್ದವು, ಆದರೆ ಮುಂಚೆರ್‌ಜಿ ಕಾಮಾ ಅವುಗಳಿಂದ ಗಾಬರಿಯಾಗುತ್ತಿದ್ದನು. ವಿಚಿತ್ರವಾದ ವ್ಯಾಪಾರ ನೀತಿಯ ಹೆಸರಿನಲ್ಲಿ ಕಂಪೆನಿಯ ಹಿತಾಸಕ್ತಿಗಳನ್ನು ಬಲಿಕೊಡಲು ಹಿಂದೆಗೆಯದ ತತ್ತ್ವಜ್ಞಾನಿಯನ್ನು ವ್ಯಾಪಾರದ ಪಾಲುದಾರನನ್ನಾಗಿ ಮಾಡಿದ್ದೀರೆಂದು ಅವನು ಮುಖ್ಯ ಕಚೇರಿಗೆ ದೂರು ಒಯ್ದನು.

ಕಂಪೆನಿ ವ್ಯಾಪಾರಮಾಡುತ್ತಿದ್ದ ನಾನಾ ವಸ್ತುಗಳಲ್ಲಿ ಅಫೀಮು ಮತ್ತು ಮಾದಕ ದ್ರವ್ಯಗಳು ಸೇರಿದ್ದವು. ಸಾವಿರಾರು ಜನರನ್ನು ದುರ್ಗತಿಗೊಯ್ಯುವ ಈ ವಸ್ತುಗಳಿಂದ ಬರುವ ಲಾಭಾಂಶವನ್ನು ತೆಗೆದುಕೊಳ್ಳಲು ದಾದಾಭಾಯಿಯ ಮನಸ್ಸು ಒಪ್ಪಲಿಲ್ಲ. ತನ್ನ ಭಾಗದ ಲಾಭಾಂಶವನ್ನು ತೆಗೆದುಕೊಳ್ಳುವುದಿಲ್ಲವೆಂದು ನಿರ್ಧರಿಸಿ ಅದೇ ರೀತಿ ಖರ್ಷೆದ್‌ಜಿ ನಸ್ಸರ್‌ವಾನ್‌ಜಿ ಕಾಮಾಗೆ ಗುಜರಾತಿಯಲ್ಲಿ ಪತ್ರ ಬರೆದನು. ಅದಕ್ಕೆ ಉತ್ತರವಾಗಿ ಕಾಮಾ :

ಕಾಲೇಜು ಪ್ರೊಫೆಸರುಗಳ ಮತ್ತು ಇತರ ಅಧಿಕಾರಿಗಳ ಸಂಬಳ ಕೊಡಲು ಸರಕಾರಕ್ಕೆ ಯಾವ ಮೂಲದಿಂದ ಹಣ ದೊರೆಯುತ್ತದೆ, ಹೇಳುವೆಯ ? ಅಫೀಮು ಮದ್ಯಗಳ ಕ್ರಯ ವಿಕ್ರಯಗಳಿಂದ ಬಂದ ಹುಟ್ಟುವಳಿಯಿಂದ ನೀನು ನಿನ್ನ ಪ್ರೊಫೆಸರ್‌—ಸಂಬಳವನ್ನು ತೆಗೆದುಕೊಳ್ಳಲಿಲ್ಲವೆ ? ವ್ಯಾಪಾರದಿಂದ ನಿವೃತ್ತಿ ಹೊಂದಿ ಪುನಃ ಸರಕಾರಿ ಉದ್ಯೋಗಕ್ಕೆ ಹೋದರೆ, ನಿನಗೆ ಅಸಹ್ಯವಾಗಿರುವ ವಸ್ತು ವ್ಯಾಪಾರದಿಂದ ಬರುವ ಕಲುಷಿತವಾದ ಹುಟ್ಟುವಳಿಯಿಂದಲೇ ತಿರುಗಿ ಜೀವನವನ್ನು ನಡೆಸುವುದಿಲ್ಲವೇ ? ನಮ್ಮ ಕಂಪೆನಿ ಅಫೀಮಿನ ವ್ಯಾಪಾರವನ್ನು ಬಿಟ್ಟುಬಿಟ್ಟರೆ, ಆ ವಸ್ತುವಿನ ಕ್ರಯವಿಕ್ರಯವನ್ನು ತಡೆದಂತಾಯಿತೆ ? ನೀನು ನಿಷೇಧಿಸುವ ವಸ್ತುವಿನಲ್ಲಿ ಇತರರು ವ್ಯವಹರಿಸುವುದಿಲ್ಲವೆ ?

ಆದರೆ ದಾದಾಭಾಯಿ ತನ್ನ ನಿರ್ಧಾರವನ್ನು ಬದಲಿಸಲು ಒಪ್ಪಲಿಲ್ಲ. ಅದರ ಫಲವಾಗಿ ದಾದಾಭಾಯಿ ಕಾಮಾ ಸಂಸ್ಥೆಯ ಸಂಬಂಧವನ್ನು ತೊರೆದು ಇಂಡಿಯಾಕ್ಕೆ ಹಿಂದಿರುಗಿದನು. ಅವನ ಜೇಬು ಹಣದಿಂದ ತುಂಬುವ

ಬದಲು ಮನಸ್ಸು ಅನುಭವದಿಂದ ಕೂಡಿತ್ತು. ಆ ಕಾಲದ ಇಂಗ್ಲೆಂಡಿನಲ್ಲಿ ಮೂರು ವರ್ಷಗಳ ಕಾಲ ವಾಸವಾಗಿದ್ದುದೇ ಒಂದು ಉದಾರವಾದ ಶಿಕ್ಷಣ. ಗ್ಲಾಡ್‌ಸ್ಟನ್, ಕಾಬ್ಡೆನ್, ಮತ್ತು ಬ್ರೈಟ್ ಅವರಂಥ ಮಹಾವ್ಯಕ್ತಿಗಳು ಬ್ರಿಟಿಷ್ ರಾಜಕೀಯದಲ್ಲಿ ನೂತನವಾದ ಒಂದು ಉದಾರ ತತ್ತ್ವವನ್ನು ತುಂಬುತ್ತಿದ್ದ ಕಾಲವದು; ಹರ್ಬರ್ಟ್ ಸ್ಪೆನ್ಸರ್, ಮಿಲ್ ಮತ್ತು ಕಾರ್ಲೈಲ್‌ನಂಥ ಲೇಖಕರು ಸಮಾಜ ಪುನರುಜ್ಜೀವನಕ್ಕಾಗಿ ನೂತನ ತತ್ತ್ವಗಳನ್ನು ಪ್ರತಿಪಾದಿಸಿ ಸಮಾಜದಲ್ಲಿ ಮಹತ್ತರ ಬದಲಾವಣೆಗಳನ್ನುಂಟು ಮಾಡುತ್ತಿದ್ದ ಕಾಲ. ಈ ಬಗೆಯ ವಾತಾವರಣದಲ್ಲಿದ್ದು ದಾದಾಭಾಯಿಗೆ ಪಶ್ಚಿಮದ ಜನಗಳ ಸಾಮಾಜಿಕ ರಾಜಕೀಯ ಆರ್ಥಿಕ ಸ್ಥಿತಿಗಳಿಗೂ ತನ್ನ ದೇಶದವರ ಸ್ಥಿತಿಗತಿಗಳಿಗೂ ಇದ್ದ ವ್ಯತ್ಯಾಸ ಮನದಟ್ಟಾಯಿತು. 'ಪಾರ್ಲಿಮೆಂಟುಗಳ ತಾಯಿ'ಯೆಂದು ಪ್ರಸಿದ್ಧವಾದ ದೇಶದಲ್ಲಲ್ಲದೆ ಬೇರೆ ಎಲ್ಲಿ ತಾನೆ ಅವನು ರಾಜ್ಯ ತತ್ತ್ವಗಳನ್ನೂ, ಪ್ರಜಾ ಸಂಸ್ಥೆಗಳ ಕಾರ್ಯ ರೀತಿಯನ್ನೂ, ಪಾರ್ಲಿಮೆಂಟರಿ ಸರಕಾರ ಪದ್ಧತಿಯನ್ನೂ ಕಲಿಯ ಬಹುದಾಗಿತ್ತು? ಅಂತರ ರಾಷ್ಟ್ರೀಯ ವ್ಯಾಪಾರ, ಬ್ಯಾಂಕು ವ್ಯವಹಾರ ಮತ್ತು ನಾಣ್ಯ ವಿನಿಮಯ ಪದ್ಧತಿಗಳನ್ನು ತಿಳಿಯಲು ಲಂಡನ್ನಿಗಿಂತ ಉತ್ತಮವಾದ ಶಾಲೆಯಿತ್ತೆ?

ಒಂದು ಕಡೆ ಇಂಡಿಯದಲ್ಲಿನ ಬ್ರಿಟಿಷ್ ಆಡಳಿತದ ದೋಷಗಳ ಅರಿವು ಹೆಚ್ಚಾಯಿತು; ಇನ್ನೊಂದು ಕಡೆ ಇಂಗ್ಲೆಂಡಿನಲ್ಲಿ ಹಬ್ಬಿದ್ದ ನ್ಯಾಯ ಪಕ್ಷಪಾತ ದೃಷ್ಟಿಯನ್ನು ಮನಸ್ಸು ಮೆಚ್ಚಿ ಕೊಂಡಿತು. ಬ್ರಿಟಿಷ್ ಶೀಲದ ದೋಷ ದೌರ್ಬಲ್ಯಗಳನ್ನು ಅರಿತುಕೊಂಡ ದಾದಾಭಾಯಿ ಭಾರತದ ಹೋರಾಟವನ್ನು ಕಾಮನ್ಸ್‌ಸಭೆಯಲ್ಲಲ್ಲದೆ ಬ್ರಿಟನ್ನಿನಲ್ಲೆಲ್ಲ ನಡಸಬೇಕೆಂದು ನಿರ್ಧರಿಸಿದನು.

೧೮೫೬ ರ ಮಾರ್ಚಿಯಲ್ಲಿ ದಾದಾಭಾಯಿ ಲಂಡನ್ನಿನ ಯೂನಿವರ್ಸಿಟಿ ಕಾಲೇಜಿನಲ್ಲಿ ಗುಜರಾತಿಯ ಪ್ರೊಫೆಸರಾಗಿ ಗೊತ್ತಾದನು. ೧೮೬೬–೬೭ರಲ್ಲಿ ನಿವೃತ್ತನಾಗುವವರೆಗೂ ಆ ಸ್ಥಾನದಲ್ಲಿದ್ದನು. ಕಾಲೇಜಿನ ಕಲೆ ಮತ್ತು ನ್ಯಾಯಶಾಸ್ತ್ರ ಶಾಖೆಗಳ ಸದಸ್ಯನೂ ಸೆನೆಟಿನ ಸದಸ್ಯನೂ ಆಗಿದ್ದನು.

ಬೊಂಬಾಯಲ್ಲಿ ಕೊಂಚಕಾಲವಿದ್ದು ನಂತರ ೧೮೫೯ ರ ಜನವರಿ ೯ ರಲ್ಲಿ ದಾದಾಭಾಯಿ ಎರಡನೆಯ ಬಾರಿ ಇಂಗ್ಲೆಂಡಿಗೆ ಪ್ರಯಾಣ ಮಾಡಿ

ದನು. ಲಿವರ್‌ಪೂಲನ್ನು ಸೇರಿ ಅಲ್ಲಿ ಸ್ವಂತವಾಗಿ ನವರೋಜಿ ಅಂಡ್ ಕಂಪೆನಿ ಎಂಬ ಹೆಸರಿನಿಂದ ವ್ಯಾಪಾರವನ್ನು ಆರಂಭಿಸಿದನು. ಈಗ ಅವನ ತತ್ತ್ವಗಳಿಗೆ ಯಾರೂ ಅಡ್ಡ ಬರುವವರಿರಲಿಲ್ಲ. ವ್ಯಾಪಾರ ಸಲೀಸಾಗಿ ನಡೆಯಿತು. ವ್ಯಾಪಾರ ನೀತಿಗೂ ನೀತಿಧರ್ಮಕ್ಕೂ ಹೊಂದಾಣಿಕೆಯಿಲ್ಲ ವೆಂದು ಹೇಳುವ ಆಗತ್ಯವಿಲ್ಲವೆಂದು ದೃಢವಾಯಿತು.

ಈ ಹವ್ಯಾಸಗಳ ಮಧ್ಯೆ, ದಾದಾಭಾಯಿ ಭಾರತದ ಕುಂದುಕೊರತೆ ಗಳನ್ನು ಬ್ರಿಟಿಷರ ಮುಂದೆ ವಿವರಿಸುವ ಒಂದು ಅವಕಾಶವನ್ನೂ ಕಳೆದು ಕೊಳ್ಳುತ್ತಿರಲಿಲ್ಲ. ವಾಸ್ತವವಾಗಿ ಅವನು ಇಂಗ್ಲೆಂಡಿನಲ್ಲಿ ಇಂಡಿಯದ ಅನಧಿಕೃತ ರಾಯಭಾರಿಯಾಗಿದ್ದನು. ಇಂಡಿಯನ್ ಸಿವಿಲ್ ಸರ್ವಿಸ್ಸಿಗೆ ಉಮೇದುವಾರರನ್ನು ಸೇರಿಸಿಕೊಳ್ಳುವ ಪದ್ಧತಿಯಲ್ಲಿ ಅಂತರ್ಗತವಾದ ಅನ್ಯಾಯವನ್ನು ಕುರಿತು ಚಳವಳಿಯನ್ನು ೧೮೫೯ ರಲ್ಲಿ ಆರಂಭಿಸಿದನು. ಸಿವಿಲ್ ಸರ್ವಿಸ್ ಪರೀಕ್ಷೆಗೆ ಬಹಿರಂಗ ಸ್ಪರ್ಧೆಯನ್ನು ಏರ್ಪಡಿಸಿ ಬಹುಕಾಲ ವಾಗಿರಲಿಲ್ಲ, ಅಷ್ಟರಲ್ಲಿಯೆ ಇಂಡಿಯಾ ಆಫೀಸು ಅಭ್ಯರ್ಥಿಗಳ ವಯಸ್ಸಿನ ಮಿತಿಯನ್ನು ೨೩ ರಿಂದ ೨೨ ಕ್ಕೆ ಇಳಿಸಿತು. ಈ ಬದಲಾವಣೆಯಿಂದ, ಪರೀಕ್ಷೆಗೆ ಕೂರಬೇಕೆಂದಿದ್ದ ಮೊದಲನೆಯ ಭಾರತೀಯ ವಿದ್ಯಾರ್ಥಿಗೆ ತಡೆ ಯಾಯಿತು. ದಾದಾಭಾಯಿ ಪ್ರತಿಭಟನೆಯ ಅರ್ಜಿಯೊಂದನ್ನು ಸೆಕ್ರೆಟರಿ ಆಫ್ ಸ್ಟೇಟಿಗೆ ಸಲ್ಲಿಸಿ, ಇತರ ವಿಧದಲ್ಲಿ ಅರ್ಹರಾದ ಅಭ್ಯರ್ಥಿಗಳಿಗೆ ಪರೀಕ್ಷೆಗೆ ಕೂರಲು ನ್ಯಾಯವಾಗಿ ಅವಕಾಶಕೊಡಬೇಕೆಂದು ಕೇಳಿದನು.

ಈ ಪ್ರಶ್ನೆಯನ್ನು ದಾದಾಭಾಯಿ ರಾಷ್ಟ್ರಹಿತದ ದೃಷ್ಟಿಯಿಂದ ಮುಖ್ಯ ವಾದದ್ದೆಂದು ತಿಳಿದಿದ್ದನು. ಆದ್ದರಿಂದ ತಕ್ಕಷ್ಟು ಬಹಿರಂಗ ಪ್ರಕಟನೆ ಯಿಲ್ಲದೆ ಸಿವಿಲ್ ಸರ್ವಿಸ್ ನಿಯಮಗಳಲ್ಲಿ ಮತ್ತೆ ಯಾವ ಬದಲಾವಣೆ ಗಳನ್ನೂ ಮಾಡುವುದಿಲ್ಲವೆಂಬ ಆಶ್ವಾಸನೆ ದೊರೆಯುವವರೆಗೂ ಚಳವಳಿ ಯನ್ನು ಮುಂದುವರಿಸಿದನು.

ಈಸ್ಟ್ ಇಂಡಿಯಾ ಕಂಪೆನಿಯಿಂದ ಆಡಳಿತವು ಸರಕಾರಕ್ಕೆ ವರ್ಗ ವಾಗಿ, ಭಾರತದ ಪ್ರಜೆಗಳಿಗೆ ಸಮಾನವಾದ ವರ್ತನೆಯನ್ನೂ ಭರವಸೆಯನ್ನೂ ನೀಡಿದ ವಿಕ್ಟೋರಿಯಾ ರಾಣಿಯ ಸ್ಮರಣೀಯವಾದ ಪ್ರಸಿದ್ಧ ಪತ್ರಿಕೆ ಹೊರಡಲು ಹೊಸ ಆಸೆಗಳು ಭಾರತೀಯರಲ್ಲಿ ತಲೆದೋರಿದವು. ಆ ಪ್ರಸಿದ್ಧ

ಪತ್ರಿಕೆ ದಾದಾಭಾಯಿಗೆ ಬೈಬಲ್ ಆಯಿತು. ಅದನ್ನು ಪದೇ ಪದೇ ಆಧಾರವಾಗಿ ಎತ್ತಿ ಹೇಳುತ್ತಿದ್ದನು. ಆದರೆ ಆ ಸ್ವಾತಂತ್ರ್ಯದ ಸನ್ನದಿನಲ್ಲಿ ಧ್ವನಿತವಾದ ವಚನಗಳನ್ನು ಪಾಲಿಸುವುದು ಆಳುವವರಿಗೆ ಅಷ್ಟು ಸುಲಭವಾಗಿರಲಿಲ್ಲ; ಅನೇಕ ವರ್ಷಗಳವರೆಗೆ, ಅದನ್ನು ಉಪಾಯದಲ್ಲಿ ತಪ್ಪಿಸುವ ಪ್ರಯತ್ನ ನಡಸಿದರು. ಸ್ಮರಣಯೋಗ್ಯವಾದ ಸನ್ನದನ್ನು ರೂಪಿಸಲು ರಾಣಿಗೆ ಸಲಹೆಮಾಡಿದ ಮಂತ್ರಿಗಳು ಅದರ ಮಾತುಗಳನ್ನು ಸಂಕುಚಿತ ರೀತಿಯಲ್ಲಿ, ಕುಯುಕ್ತಿಯಿಂದ ಅರ್ಥಮಾಡತಕ್ಕದ್ದೆಂದು ಹೇಳಿರಲಾರರೆಂದು ದಾದಾಭಾಯಿ ತಿಳಿಯಹೇಳಿದನು.

ಇಂಗ್ಲೆಂಡಿಗೆ ಹೋದ ತರುಣ ಭಾರತೀಯರಿಗೆ ದಾದಾಭಾಯಿ ಒಂದು ರೀತಿಯಲ್ಲಿ ರಕ್ಷಕನಾಗಿದ್ದನು. ತನ್ನೆಡೆಗೆ ಅವರನ್ನು ಸೆಳೆಯುವ ಅದ್ಭುತವಾದ ಗುಣವಿತ್ತು ಅವನಲ್ಲಿ. ಅನೇಕ ವರ್ಷಗಳವರೆಗೆ ವಿದ್ಯಾರ್ಥಿಗಳ ಗುಂಪು ಅವನ ಮೇಲ್ವಿಚಾರಣೆಯಲ್ಲಿತ್ತು. ಅಸದೃಶವಾದ ಅವನ ಜ್ಞಾನದಿಂದಲೂ ಪ್ರಪಂಚದ ವಿದ್ಯಮಾನಗಳ ಅರಿವಿನಿಂದಲೂ ಅವರು ಪ್ರಯೋಜನ ಹೊಂದುತ್ತಿದ್ದರು. ಅವನ ಸರಳವಾದ ಕ್ರಮಬದ್ಧವಾದ ಅಭ್ಯಾಸಗಳೂ ಉದಾತ್ತವಾದ ಧ್ಯೇಯಗಳೂ ಅವರಿಗೆ ಮಾದರಿಯಾಗಿದ್ದವು. ರಾಜ್ಯದ ಉನ್ನತಾಧಿಕಾರಗಳಿಗೆ ಅರ್ಹತೆ ಪಡೆಯುವಂತೆ ಅವರಿಗೆ ಸಹಾಯಮಾಡುವುದು ಸರಕಾರದ ಸೇವಾವರ್ಗನ್ನು ಭಾರತೀಯವನ್ನಾಗಿ ಮಾಡುವುದರಲ್ಲಿ ಮೊದಲ ಹೆಜ್ಜೆಯೆಂದು ತಿಳಿದಿದ್ದನು.

## ೮. ಗೃಹಕೃತ್ಯದ ತೊಂದರೆಗಳು

ದಾದಾಭಾಯಿಯ ಮನೆಯಕಡೆಗೆ ಈಗ ತಿರುಗೋಣ. ೧೯ ನೆಯ ಶತಮಾನದ ಮಧ್ಯಭಾಗದಲ್ಲಿ ನಮ್ಮ ಅನೇಕ ಮುಂದಾಳುಗಳ ಸ್ಥಿತಿ, ಒಂದು ವಿಷಯದಲ್ಲಿ, ಶೋಚನೀಯವಾಗಿತ್ತು. ಅವರು ನಿರೀಕ್ಷಿಸುತ್ತಿದ್ದ ಬೌದ್ಧಿಕವಾದ ಸಾಹಚರ್ಯವಾಗಲಿ, ಸಹಕಾರವಾಗಲಿ ಅವರ ಪತ್ನಿಯರಿಂದ ದೊರೆಯುತ್ತಿರಲಿಲ್ಲ. ದಾದಾಭಾಯಿಯ ವಿಷಯದಲ್ಲಂತೂ ಪರಿಸ್ಥಿತಿ ಬಹು ದುಃಖಕರವಾಗಿತ್ತು. ಅದರ ವಿವರಗಳಿಗೆ ನಾವು ಹೋಗಬೇಕಾಗಿಲ್ಲ.

ಆದರೆ ೧೮೬೩ ರ ಸೆಪ್ಟೆಂಬರಿನಲ್ಲಿ ಅವನು ಅವಸರವಸರವಾಗಿ ಬೊಂಬಾಯಿಗೆ ಧಾವಿಸಿ ಬರಬೇಕಾಗಿ ಬಂದದ್ದರ ಕಾರಣವನ್ನು ಅರಿಯಲು ಕೆಲವು ಸಂಗತಿಗಳನ್ನಾದರೂ ತಿಳಿಯ ಬೇಕಾಗಿದೆ.

ದಾದಾಭಾಯಿಯ ಹೆಂಡತಿ ಗುಲ್‌ಬಾಯಿ ಅನಕ್ಷರಸ್ಥಳಾಗಿದ್ದಳು. ಪ್ರೀತಿಯ ಸ್ವಭಾವದವಳಾಗಿರಲಿಲ್ಲ. ಮಾತುಕತೆಗಳಲ್ಲಿ ಎಡವಟ್ಟು, ನಡತೆಯಲ್ಲಿ ನಯವಿಲ್ಲ. ಅವಳಿಗೆ ಓದುಬರಹಗಳನ್ನು ಕಲಿಸಲು ಅವನು ಬಹು ಪ್ರಯತ್ನಮಾಡಿದನು. ಆದರೆ ಅವಳಿಗೆ ಅವುಗಳಲ್ಲಿ ಇಷ್ಟವಿರಲಿಲ್ಲ. ಅವನು ಪ್ರಾಪ್ತವಯಸ್ಸಿಗೆ ಬರುತ್ತಲೇ ಅವನ ತಾಯಿ ತಾನು ಮಾಡಿದ ತಪ್ಪನ್ನು ಗ್ರಹಿಸಿದಳು. ವಿಚಾರಮಾಡದೆ, ಎಳೆಯ ವಯಸ್ಸಿನಲ್ಲಿ ಅವನಿಗೆ ಮದುವೆ ಮಾಡಿದ ತನ್ನ ಅವಿವೇಕವನ್ನು ಕಂಡು ಕೊಂಡಳು. ಈಗ ಅದನ್ನು ಸರಿಪಡಿಸಲಾಗದೆ? ಪಾರಸೀ ವೈವಾಹಿಕ ಕಾನೂನಿನ ಪ್ರಕಾರ ಇಬ್ಬರು ಹೆಂಡಿರನ್ನು ಮದುವೆಯಾಗುವುದು ಅಪರಾಧವಾಗಿ ಪರಿಗಣಿತವಾಗಿತ್ತು. ಆದ್ದರಿಂದ ಆ ಕಾನೂನು ಜಾರಿಗೆ ಬರುವುದಕ್ಕೆ ಮೊದಲು ಅನೇಕ ಮಂದಿ ಪಾರಸಿಗಳು ಮೊದಲನೆಯ ಹೆಂಡತಿ ಇದ್ದಂತೆಯೇ ಎರಡನೆಯ ಮದುವೆಯನ್ನು ಮಾಡಿಕೊಂಡರು. ತನ್ನ ಮಗನೂ ಹಾಗೆ ಮಾಡಬಹುದೆಂದು ತಾಯಿ ಆಶಿಸಿದಳು. ಆದರೆ ದಾದಾಭಾಯಿ ಅಸಹ್ಯವಾದ ಆ ಸಲಹೆಗೆ ಹೇಸಿದನು. ತಾಯಿಯ ಇಷ್ಟಕ್ಕೆ ವಿರುದ್ಧವಾಗಿ ನಡೆಯುವುದು ಅವನಿಗೆ ಸಂಕಟಕರವಾಗಿತ್ತು. ಆದರೆ ಅವನು ಈ ವಿಷಯದಲ್ಲಿ ಆಕೆಯ ಸಲಹೆ ಅನ್ಯಾಯವೆಂದು ತಿಳಿದರೆ, ಆಕೆ ಅವನು ಮೊಂಡತನ ಮಾಡುತ್ತಿದಾನೆಂದು ಭಾವಿಸಿದಳು. ದಾದಾಭಾಯಿಯನ್ನು ಒಪ್ಪಿಸುವಂತೆ ತನ್ನ ಸೋದರ ರುಸ್ತುಮ್‌ಜಿ ದೇಸಾಯಿಗೆ ಹೇಳಿದಳು. ಅದರಿಂದಲೂ ಪ್ರಯೋಜನವಾಗಲಿಲ್ಲ. ಎರಡನೆಯಬಾರಿ ದಾದಾಭಾಯಿ ಇಂಗ್ಲೆಂಡಿಗೆ ಹೋಗುವಾಗ ಪರಿಸ್ಥಿತಿ ಹೀಗಿತ್ತು.

ದಾದಾಭಾಯಿಯ ಮನೆಯೆದುರಿಗೆ ಡಾ। ಆರ್ಚರ್ ಎಂಬ ವೈದ್ಯನಿದ್ದನು. ಅವನಿಗೆ ಮೂವರು ಹೆಣ್ಣು ಮಕ್ಕಳಿದ್ದರು. ಅವರು ವಿದ್ಯಾವತಿಯರಾಗಿ ಬುದ್ಧಿವಂತೆಯರಾಗಿದ್ದರು. ದಾದಾಭಾಯಿ ಆಗಾಗ್ಗೆ ಅವರ ಮನೆಗೆ ಹೋಗುತ್ತಿದ್ದನು. ಮಂಚೆರ್‌ಜಿ ಕಾಮಾನಿಗೆ ಆ ಬಗೆಯ ಸಲಿಗೆ ಸರಿಬೀಳಲಿಲ್ಲ. ದಾದಾಭಾಯಿ ಕ್ರಿಸ್ತಮತಕ್ಕೆ ಸೇರುತ್ತಾನೆಂದೂ ಆಂಗ್ಲ ಸ್ತ್ರೀ

ಯನ್ನು ಮದುವೆಯಾಗುತ್ತಾನೆಂದೂ ಸುದ್ದಿ ಬಹು ಬೇಗ ಹರಡಿತು. ಈ ಸುದ್ದಿ ತಾಯಿಯ ಕಿವಿಯನ್ನೂ ಮುಟ್ಟಿತು. ಎರಡನೆಯ ಮದುವೆಯಾಗು ವಂತೆ ನಾನು ಹೇಳಿದರೂ ನೀನು ಕೇಳಲಿಲ್ಲ. ಆದರೆ ಈಗ ಆಂಗ್ಲ ಸ್ತ್ರೀ ಯನ್ನು ಮದುವೆಯಾಗಿ ವಂಶಕ್ಕೆ ಅಪಮಾನ ತರುವ ಯೋಚನೆ ಮಾಡು ತ್ತಿದ್ದೀಯೆ, ಎಂದು ಕಾಗದ ಬರೆಸಿದಳು.

ದಾದಾಭಾಯಿಗೆ ಅದರಿಂದ ಬಹುನೋವಾಯಿತು. ತನ್ನ ಮರ್ಯಾದೆಗೆ ಕುಂದು ಬರುವಂತೆ ಕಂಡಿತು. ತನ್ನ ಹೆಂಡತಿ ತಾಯಿಯರ ಮನ: ಶಾಂತಿಯೂ ಸುಖವೂ ಕೆಡುವಂತೆ ತೋರಿತು. ನೇರವಾಗಿ ಪಿ. ಅಂಡ್ ಓ. ಕಂಪೆನಿಗೆ ಹೋಗಿ ಬೊಂಬಾಯಿಗೆ ಹೋಗಲು ಸ್ಥಳ ಗೊತ್ತು ಮಾಡಿದನು.

೧೮೬೩ರ ಸೆಪ್ಟೆಂಬರ್ ೯ ನೆಯ ತಾರೀಕು ನಡು ರಾತ್ರಿಯಲ್ಲಿ ಆಗಂತು ಕನೊಬ್ಬನು ಬೊಂಬಾಯಲ್ಲಿ ದಾದಾಭಾಯಿಯ ಮನೆಯ ಬಾಗಿಲನ್ನು ತಟ್ಟುತ್ತಿದ್ದನು. ಮಣೆಕ್‌ಬಾಯಿಯೂ ಗುಲ್‌ಬಾಯಿಯೂ ನಿದ್ರೆಯಲ್ಲಿ ಮುಳುಗಿದ್ದರು. ಕುಟುಂಬದ ಸ್ನೇಹಿತನಾದ ಹಿರಿಯನೊಬ್ಬನು ಬಂದು "ಯಾರದು ?" ಎಂದು ಕೇಳಿದನು.

ಉತ್ತರ: "ನಾನು, ದಾದಾಭಾಯಿ."

ಒಳಗಿದ್ದ ಮನುಷ್ಯ, "ಏನು? ಇಂಗ್ಲೆಂಡಿನಲ್ಲಿರುವ ದಾದಾಭಾಯಿಯ ಹೆಸರಿನಲ್ಲಿ ಕೂಗುವುದಕ್ಕೆ ನಿನಗೆಷ್ಟು ಧೈರ್ಯವೊ, ದುರುಳ?" ಎಂದು ಗರ್ಜಿಸಿ ದನು.

"ಮಾಕು" ಎಂದು ಮೃದುವಾಗಿ ಅವನ ಹೆಸರನ್ನು ಹಿಡಿದು ಕೂಗುತ್ತ ಆಗಂತುಕನು "ದಯವಿಟ್ಟು ಬಾಗಿಲುತೆಗೆ" ಎಂದನು.

ಪರಿಚಿತವಾದ ಧ್ವನಿಯನ್ನು ಕೇಳಿ ಸಂತೋಷದಿಂದ ಬಾಗಿಲು ತೆಗೆದು. ಅವನನ್ನು ಅಪ್ಪಿ ಕೊಂಡನು.

ಏಪ್ರಿಲ್ ೨೯ರಂದು ದಾದಾಭಾಯಿ ಬೊಂಬಾಯಿನಿಂದ ಇಂಗ್ಲೆಂಡಿಗೆ ಹೊರಟನು. ಈ ಬಾರಿ—ಮೊದಲ ಬಾರಿಗೆ—ತನ್ನೊಡನೆ ತಾಯಿಯನ್ನೂ ಹೆಂಡತಿಯನ್ನೂ ಮಗ ಅರ್ದೇಷಿರ್‌ನನ್ನೂ ಮಗಳು ಶಿರಿನ್‌ಳನ್ನೂ ಕರೆದು ಕೊಂಡು ಹೊರಟನು.

ಯೂರೋಪಿಗೆ ಹೊರಡುವ ಮುಂಚೆ ಬೊಂಬಾಯಿ ವಿಶ್ವವಿದ್ಯಾ

ನಿಲಯಕ್ಕೆ ರೂ. ೧,೭೫,೦೦೦ ಗಳನ್ನು ಲಾರ್ಡ್ ಕ್ಯಾನಿಂಗ್‌ನ ನೆನಪನ್ನು ಶಾಶ್ವತಗೊಳಿಸಲು ಫೆಲೋಷಿಪ್ಪಿನ ದತ್ತಿಗಾಗಿ ನೀಡಿದನು. ಅನೇಕ ಮಂದಿ ದಾತೃಗಳು ಈ ದತ್ತಿಗೆ ಚಂದಾ ಕೊಟ್ಟಿದ್ದರು. ಇದರಲ್ಲಿ ದಾದಾಭಾಯಿಯ ಭಾಗ ರೂ. ೫೦,೦೦೦. ಆದರೆ ಹಣವನ್ನು ಕೊಡುವುದಕ್ಕೆ ಮುಂಚೆಯೆ ಹಲವು ತೊಂದರೆಗಳು ಉದ್ಭವಿಸಿ, ನೀಡಿಕೆ ನಿಂತುಹೋಯಿತು. ಅಮೆರಿಕದ ಅಂತರ್ಯುದ್ಧ ನಿಂತ ಮೇಲೆ ವ್ಯಾಪಾರಕ್ಷೇತ್ರದಲ್ಲಿ ಮುಗ್ಗಟ್ಟು ತಲೆದೋರಿ ಇಂಗ್ಲೆಂಡಿನಲ್ಲಿಯೂ ಇಂಡಿಯಾದಲ್ಲೂ ಅನೇಕ ಸಂಸ್ಥೆಗಳೂ ವ್ಯಕ್ತಿಗಳೂ ದಿವಾಳಿಯಾದರು. ಯುದ್ಧಕ್ಕೆ ಮುಂಚೆ ಇಂಗ್ಲೆಂಡು ಹತ್ತಿಯನ್ನು ಅಮೆರಿಕಾದ ದಕ್ಷಿಣ ಸಂಸ್ಥಾನಗಳಿಂದ ಕೊಳ್ಳುತ್ತಿತ್ತು. ಯುದ್ಧ ಆರಂಭವಾದ ಮೇಲೆ, ಅಲ್ಲಿಯ ವ್ಯಾಪಾರ ನಿಂತುಹೋಗಿ, ಲಂಕಾಷೈರಿನ ನೂಲುಕಾರರು ಹತ್ತಿಗಾಗಿ ಬೊಂಬಾಯಿ ಪೇಟೆಯನ್ನು ಆಶ್ರಯಿಸಬೇಕಾಯಿತು. ಅದರಿಂದ ಬೊಂಬಾಯಿಯ ಹತ್ತಿ ಪೇಟೆಯಲ್ಲಿ ಏರಿಕೆ ತಲೆದೋರಿ ಸಟ್ಟಾ ವ್ಯಾಪಾರ ಆರಂಭವಾಯಿತು. ಈ ವ್ಯಾಪಾರ ಅನೇಕ ದೊಡ್ಡ ವರ್ತಕರ ಮತ್ತು ವ್ಯಾಪಾರ ಸಂಸ್ಥೆಗಳ ನಾಶಕ್ಕೆ ಕಾರಣವಾಯಿತು.

ದಾದಾಭಾಯಿಯ ಕಂಪೆನಿಗೆ ಯುದ್ಧಕಾಲದಲ್ಲಿ ಚೆನ್ನಾಗಿ ವ್ಯಾಪಾರವಾಗಿ ಅವನಿಗೆ ಅದೃಷ್ಟ ಒದಗಿ ಬಂತು. ಇಂಗ್ಲೆಂಡಿನಲ್ಲೂ ಇಂಡಿಯಾದಲ್ಲೂ ಅನೇಕ ವ್ಯಾಪಾರ ಸಂಸ್ಥೆಗಳೊಡನೆ ಅವನಿಗೆ ವ್ಯವಹಾರವಿತ್ತು. ಆ ಸಂಸ್ಥೆಗಳಿಂದ ಭಾರಿಯಾಗಿ ಹಣ ಬರಬೇಕಾಗಿದ್ದಿತು. ಆ ಸಂಸ್ಥೆಗಳು ದಿವಾಳಿಯಾದ್ದರಿಂದ ದಾದಾಭಾಯಿಗೆ ಅಪಾರವಾದ ನಷ್ಟವುಂಟಾಯಿತು. ಆದರೆ ಅವನ ಕಷ್ಟಗಳಿಗೆ ಮುಖ್ಯವಾದ ಕಾರಣ ಅವನ ಒಳ್ಳೆಯ ಸ್ವಭಾವವೇ. ಪರಿಸ್ಥಿತಿ ವಿಷಮವಾಗಿದ್ದರೂ ಸ್ನೇಹಿತನೊಬ್ಬನನ್ನು ಕಷ್ಟದಿಂದ ಪಾರು ಮಾಡಲು ಯತ್ನಿಸಿದನು. ಸಟ್ಟಾ ವ್ಯಾಪಾರದಿಂದ ಆ ಸ್ನೇಹಿತನು ದಿವಾಳಿ ತೆಗೆಯುವ ಸ್ಥಿತಿಗೆ ಬಂದಿದ್ದನು. ೩೦,೦೦೦ ಪೌಂಡುಗಳವರೆಗೆ ನಷ್ಟವನ್ನನುಭವಿಸಿದ್ದ ಆತನಿಗೆ ದಾದಾಭಾಯಿ, ಸ್ನೇಹಿತರು ಎಚ್ಚರಿಕೆ ನೀಡಿದಾಗ್ಯೂ, ಜಾಮೀನಾಗಿ ನಿಂತನು. ಇದರಿಂದ ಸ್ನೇಹಿತನ ಅಂಗಡಿ ಉಳಿಯಿತು, ಆದರೆ ತನ್ನ ಕಂಪೆನಿಯ ಭದ್ರತೆಗೇ ತೊಂದರೆ ಬಂತು. ಸ್ನೇಹಿತನ ಸಾಲಿಗರು ಇವನ ಅಂಗಡಿ ಬಾಗಿಲಲ್ಲಿ ಜಮಾಯಿಸಿ, ಕೂಡಲೆ ಸಾಲದ ಪಾವತಿಗೆ ಒತ್ತಾಯ

ಪಡಿಸಿದರು. ಜಾಮೀನುದಾರನು ಸ್ನೇಹಿತನ ಬಗೆಗೆ ತನ್ನ ಕರ್ತವ್ಯವನ್ನು ನಿರ್ವಹಿಸಿ ತನ್ನ ಕಂಪೆನಿಯನ್ನು ದುಃಸ್ಥಿತಿಗೆ ತಂದುಕೊಂಡನು.

ಈ ಬಗೆಯ ಕಷ್ಟನಷ್ಟಗಳಲ್ಲಿದ್ದರೂ ದಾದಾಭಾಯಿಯ ಪ್ರಾಮಾಣಿಕತೆಗೂ ನಂಬಿಕೆಗೂ ಚ್ಯುತಿ ಬರಲಿಲ್ಲ. ಒಂದು ವಾರದೊಳಗೆ ತನ್ನ ಲೆಕ್ಕಗಳನ್ನೆಲ್ಲ ಇಂಗ್ಲಿಷ್ ಸಾಲಿಗರ ಮುಂದೆ ಇರಿಸಿದನು. ಅವನ ಪ್ರಾಮಾಣಿಕತನವನ್ನು ಮೆಚ್ಚಿ ಸಾಲಿಗರು ಲೇವಾದೇವಿಯ ಫೈಸಲಾತಿ ಕ್ರಮಗಳಿಗೆ ಅವನನ್ನೇ ನೇಮಿಸಿದರು. ಅಲ್ಲದೆ ವ್ಯಾಪಾರವನ್ನು ಮುಂದುವರಿಸಲು ಅವನಿಗೆ ಹೊಸದಾಗಿ ಸಾಲ ನೀಡಿ ತಮಗಿದ್ದ ನಂಬಿಕೆಯನ್ನು ವ್ಯಕ್ತಪಡಿಸಿದರು.

ಶಾಂತಚಿತ್ತನಾದ ದಾದಾಭಾಯಿ ಕಷ್ಟಗಳನ್ನು ವೇದಾಂತಿಯಂತೆ ಸಹಿಸಿಕೊಂಡನು. ಆ ಸಮಯದಲ್ಲಿ ಅತಿಥಿಯಾಗಿ ಮನೆಯಲ್ಲಿ ತಂಗಿದ್ದ ಮಿಸ್ ಹರೆನ್ ಕರ್ಸ್ಸೆಟ್‌ಜೀಯು ತನ್ನ ದಿನಚರಿಯಲ್ಲಿ ಹೀಗೆ ಬರೆದಿದ್ದಾಳೆ (ಜೂನ್ ೨೬, ೧೮೬೬) :

ನಿಜವಾಗಿ ದಾದಾಭಾಯಿಗೆ ಬಹುತಾಳ್ಮೆಯಿದೆ, ಅವನು ಕಷ್ಟಗಳನ್ನು ಸಹಿಸಿಕೊಂಡಿರುವುದು ಆಶ್ಚರ್ಯಕರವಾಗಿದೆ. ಅವನ ವ್ಯವಹಾರಗಳನ್ನೆಲ್ಲ ಒಂದೆರಡು ದಿನಗಳಲ್ಲಿ ಮುಗಿಸಬೇಕಾಗುತ್ತದೆಯೆಂದು ಅಪ್ಪಾಜಿಯಿಂದ ತಿಳಿದೆ. ಸಾಲಿಗರ ಅಯೋಗ್ಯ ವರ್ತನೆಯಿಂದಲೇ ಹೆಚ್ಚಾಗಿ ಹೀಗಾಗಿದೆ. ಅವರಲ್ಲಿ ಅನೇಕರು ಬಹು ಅಸಹ್ಯವಾಗಿ ವರ್ತಿಸಿದರು.... ಆದರೆ ಧರ್ಮಶೀಲನಾದ ಅವನಿಗೆ ದೇವರು ಒಳ್ಳೆಯದನ್ನು ಮಾಡುವನೆಂದು ನಂಬಿದ್ದೇನೆ.

ಜೂನ್ ೨೯ ರಲ್ಲಿ ಅವಳ ದಿನಚರಿ :

ದಾದಾಭಾಯಿಯ ಮುಖದಲ್ಲೂ ಕೆಲಸಕಾರ್ಯಗಳಲ್ಲೂ ತೋರುತ್ತಿದ್ದ ಅಚಲವಾದ ಶಾಂತತೆಯನ್ನೂ ತಾಳ್ಮೆಯನ್ನೂ ನೋಡಿದರೆ ಅವನ ವ್ಯವಹಾರಗಳು ಭಯಂಕರವಾದ ಕಷ್ಟಸ್ಥಿತಿಯಲ್ಲಿದ್ದುವೆಂದು ಯಾರೂ ತಿಳಿಯಲಾರರು. ಎಂದಿನಂತೆ ಅವನು ಬೆಳಗಿನ ಊಟವನ್ನು ಮುಗಿಸಿದನು—ಆದರೆ ಅವನ ತಾಯಿ ವ್ಯಥೆಪಡುತ್ತಿದ್ದಾಳೆ, ದಿನವೆಲ್ಲ ಅಳುತ್ತಲೇ ಇದ್ದಳು, ಶ್ರೀಮತಿ ದಾ। ನ್ನು ಕುರಿತು ತೀರ ಕಠಿನವಾದ ರೀತಿಯಲ್ಲಿ ಮಾತನಾಡುತ್ತಿದ್ದಳು.- ಇವೆಲ್ಲ ಬಹು ದುಃಖಕರವಾಗಿದೆ.

## ೯. ಬ್ರಿಟಿಷ್ ಜನರನ್ನು ತಿದ್ದುವ ಪ್ರಯತ್ನ

ಪ್ರತಿ ಕೇಡಿನಲ್ಲಿಯೂ ಒಳ್ಳೆಯದರ ಭರವಸೆ ಸ್ವಲ್ಪ ಇರುತ್ತದೆ. ವ್ಯಾಪಾರದಲ್ಲಿ ಕತ್ತಲೆ ಕವಿದರೂ ಇತರ ಕ್ಷೇತ್ರಗಳಲ್ಲಿ ದಾದಾಭಾಯಿಗೆ ಉಜ್ಜ್ವಲವಾದ ಜಯ ಲಭಿಸಿತು. ಅವನ ದೃಷ್ಟಿಯಲ್ಲಿ, ಇಂಗ್ಲೆಂಡಿನಲ್ಲಿ ವ್ಯಾಪಾರ ಮಾಡುವುದೇ ಒಂದು ಗುರಿಯಾಗಿರಲಿಲ್ಲ, ಬೇರೊಂದು ಗುರಿಗೆ— ಭಾರತದ ಆರ್ಥಿಕ ರಾಜಕೀಯ ಹಿತಸಾಧನೆಗಳಿಗೆ—ಅದು ಒಂದು ಸಾಧನ ಮಾತ್ರ. ಆ ಗುರಿಯನ್ನು ಸಾಧಿಸಲು ಈಗ ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿದನು.

ಬ್ರಿಟಿಷ್ ಜನರು ತಮಗೆ ಸ್ವಾಭಾವಿಕವಾದ ಸಮಾನತಾಭಾವ, ನ್ಯಾಯಪಕ್ಷಪಾತತೆ ಇವುಗಳನ್ನು ಪ್ರಾಮಾಣಿಕವಾಗಿ ಅನುಸರಿಸಿದಲ್ಲಿ, ಸ್ವಾತಂತ್ರ್ಯವನ್ನು ಹೊಂದಲು ಭಾರತಕ್ಕೆ ಅವರು ನೆರವಾಗುವರೆಂದು ದಾದಾಭಾಯಿ ನಂಬಿದನು. ಆದರೆ ಆ ಕಾಲದ ಬ್ರಿಟಿಷ್ ಅಧಿಕಾರಿಗಳ ದುರಹಂಕಾರವೂ ಭಾರತೀಯರ ಬುದ್ಧಿ ಶೀಲಗಳ ವಿಚಾರದಲ್ಲಿ ಅವರ ಮುಚ್ಚು ಮರೆಯಿಲ್ಲದ ತಿರಸ್ಕಾರವೂ ಅವನ ಆಶೆ ನಂಬಿಕೆಗಳನ್ನು ಹಾನಿಗೊಳಿಸುತ್ತಿದ್ದವು.

ಭಾರತದ ಹಿತಾಸಕ್ತಿಗಳಿಗೆ ಸಂಬಂಧಪಟ್ಟ ನಾನಾ ಸಮಸ್ಯೆಗಳ ಕಡೆಗೆ ಬ್ರಿಟಿಷರ ಗಮನವನ್ನು ಸೆಳೆಯುವ ಕೆಲಸ ಅವನೊಬ್ಬನಿಂದ ಸಾಧ್ಯವಾಗದು. ಅದಕ್ಕೆ ತಕ್ಕ ಕೆಲಸಗಾರರ ಒಂದು ಸಂಘ ಆವಶ್ಯಕ. ಅಲ್ಲದೆ ಬ್ರಿಟಿಷ್ ಮಿತ್ರರ ಸಹಾಯ ಸಹಕಾರಗಳಿಲ್ಲವೆ, ಭಾರತದ ಸುಧಾರಣೆಯ ಆವಶ್ಯಕತೆಯನ್ನು ಪರಮಾಧಿಕಾರವುಳ್ಳ ಕಾಮನ್ಸ್ ಸಭೆಗೆ ಮನದಟ್ಟು ಮಾಡಿಕೊಡುವುದು ಕಷ್ಟವಾಗುತ್ತಿತ್ತು. ಆದ್ದರಿಂದ, ದಾದಾಭಾಯಿ ಡಬ್ಲ್ಯೂ. ಸಿ. ಬಾನರ್ಜಿಯ ಸಹಕಾರದಿಂದ, ಲಂಡನ್ ಇಂಡಿಯ ಸೊಸೈಟಿ ಎಂಬ ಸಂಸ್ಥೆಯನ್ನು ಸ್ಥಾಪಿಸಿದನು. ಆಂಗ್ಲೇಯರನ್ನೂ ಭಾರತೀಯರನ್ನೂ ಸ್ನೇಹಕೂಟಗಳಲ್ಲಿ ಒಟ್ಟುಗೂಡಿಸಿ ಇಂಡಿಯಾ ವಿಚಾರವಾದ ವಿಷಯಗಳನ್ನು ಚರ್ಚಿಸುವುದು ಸಂಸ್ಥೆಯ ಉದ್ದೇಶವಾಗಿತ್ತು. ಸಂಸ್ಥೆಯ ನಿಯಮದಂತೆ ಶುದ್ಧ ಮತೀಯ ವಿಷಯ ಯಾವುದನ್ನೂ ಅಲ್ಲಿ ಚರ್ಚಿಸಲು ಅವಕಾಶವಿರಲಿಲ್ಲ; ಸೊಸೈಟಿಯು

ಇಂಗ್ಲೆಂಡಿನ ಅಥವಾ ಭಾರತದ ಯಾವ ರಾಜಕೀಯ ಅಥವಾ ಸಾಮಾಜಿಕ ಸಂಸ್ಥೆಯೊಡನೆಯೂ ಒತ್ತಾಸೆಯನ್ನು ಬೆಳಸಿ ಕೊಳ್ಳಬಾರದು. ಈ ಬಗೆಯ ರಕ್ಷಣೆಗಳನ್ನು ಕಲ್ಪಿಸಿಕೊಂಡು ಲಂಡನ್ ಇಂಡಿಯನ್ ಸೊಸೈಟಿಯು ಐವತ್ತು ವರ್ಷಗಳಿಗು ಮೇಲ್ಪಟ್ಟು ಉಪಯೋಗಕರವಾದ ಚಳವಳಿಯನ್ನು ನಡಸಿತು. ೧೯೦೭ರಲ್ಲಿ ದಾದಾಭಾಯಿ ಸಾರ್ವಜನಿಕ ಜೀವನದಿಂದ ನಿವೃತ್ತನಾಗಿ, ಇಂಗ್ಲೆಂಡನ್ನು ಬಿಟ್ಟು ಹೊರಡುವವರೆಗೂ ಸೊಸೈಟಿಯ ಅಧ್ಯಕ್ಷನಾಗಿ ಕೆಲಸಮಾಡಿದನು.

ಭಾರತೀಯರ ಆರ್ಥಿಕ ರಾಜಕೀಯ ಹಕ್ಕುಗಳ ಸ್ಥಾಪನೆಗಾಗಿ ಶ್ರಮಿಸುವುದಲ್ಲದೆ, ಅವರ ಬುದ್ಧಿ ಶಕ್ತಿಯ ಮತ್ತು ಶೀಲದ ಸಮರ್ಥನೆಗಾಗಿಯೂ ದಾದಾಭಾಯಿ ಸಾರ್ವಜನಿಕ ಚರ್ಚೆಗಳಲ್ಲಿ ವರ್ಷದುದ್ದಕ್ಕೂ ಭಾಗವಹಿಸ ಬೇಕಾಯಿತು. ಲಂಡನ್ನಿನ ಮಾನವಕುಲಶಾಸ್ತ್ರ ಸಂಘದ ಅಧ್ಯಕ್ಷನಾದ ಜಾನ್ ಕ್ರಾಫರ್ಡ್ ೧೮೬೬ ರ ಫೆಬ್ರುವರಿಯಲ್ಲಿ ಒಂದು ಪ್ರಬಂಧವನ್ನೋದಿ, ಯೂರೋಪಿನ ಜನಾಂಗದವರು ಏಷ್ಯನರಿಗಿಂತ ಮೇಧಾಶಕ್ತಿಯಲ್ಲೂ ನೀತಿ ನಡವಳಿಕೆಗಳಲ್ಲೂ ಉತ್ತಮರೆಂದು ಪ್ರತಿಪಾದಿಸಿದನು. ಬೇರೆ ಬೇರೆ ಬುಡ ಕಟ್ಟಿನ ಜನರ ತಲೆಯ ಅಳತೆ, ಅವರ ಬಣ್ಣ, ಮುಖಾಕೃತಿಯ ಕೋನ ಗಳು, ಇವುಗಳ ಮತ್ತು ಇತರ ವಿಶೇಷ ಲಕ್ಷಣಗಳ ಮೇಲುಮೇಲಿನ ಅಭ್ಯಾಸದ ಫಲವಾಗಿ ಯೂರೋಪಿನ ಜನವೆಲ್ಲ ಈ ಬಗೆಯ ಭ್ರಾಂತಿಗೆ ಒಳ ಗಾಗಿದ್ದರು. ಈ ಬಗೆಯ ನಿಂದೆಯನ್ನು ಪ್ರತಿಭಟಿಸದೆ ಹಾಗೆಯೇ ಬಿಡಲು ದಾದಾಭಾಯಿಯ ಮನಸ್ಸು ಒಪ್ಪಲಿಲ್ಲ. ಮರುತಿಂಗಳಲ್ಲಿ ಅವನು ಕ್ರಾಫರ್ಡನ ಸತ್ಯಾಭಾಸದ ವಾದಗಳನ್ನು ಚೂರುಚೂರು ಮಾಡಿ ಸದೆಬಡಿಯುವಂಥ ಪ್ರತ್ಯುತ್ತರವನ್ನು ಸಿದ್ಧಗೊಳಿಸಿದನು. ಅದು ಚರಿತ್ರಾಂಶಗಳನ್ನೂ ವಿಜ್ಞಾನಾಂಶ ಗಳನ್ನೂ ಯುಕ್ತವಾಗಿ ಜೋಡಿಸಿ ತಯಾರಿಸಿದ ಉತ್ತರವಾಗಿತ್ತು. ಏಷ್ಯಾ ಯೂರೋಪುಗಳ ಪ್ರಾಚೀನ ಮತ್ತು ಆಧುನಿಕ ಇತಿಹಾಸ ಸಾಹಿತ್ಯಗಳನ್ನು ಚೆನ್ನಾಗಿ ವ್ಯಾಸಂಗಮಾಡಿದವರು ಮಾತ್ರ ಅಷ್ಟು ಅಲ್ಪಕಾಲದಲ್ಲಿ ಆ ಬಗೆಯ ಉತ್ತರವನ್ನು ತಯಾರಿಸಬಹುದಾಗಿತ್ತು.

ಭಾರತೀಯರ ವಿಚಾರದಲ್ಲಿ ಪದೇ ಪದೇ ತಪ್ಪು ವೃತ್ತಾಂತಗಳು ಹರಡುತ್ತಿದ್ದುದರಿಂದ ಲಂಡನ್ ಇಂಡಿಯನ್ ಸೊಸೈಟಿಗಿಂತ ಹೆಚ್ಚು

ವ್ಯಾಪಕವಾದ ಸಂಸ್ಥೆಯೊಂದನ್ನು ಸ್ಥಾಪಿಸುವುದು ದಾದಾಭಾಯಿಗೆ ಅಗತ್ಯವಾಗಿ ತೋರಿತು. ಇಂಗ್ಲೆಂಡ್ ಇಂಡಿಯಾಗಳ ನಡುವೆ ಸಾಮರಸ್ಯವನ್ನೂ ಸ್ನೇಹವನ್ನೂ ಕುದುರಿಸುವ ಉದ್ದೇಶದಿಂದ ನಿವೃತ್ತ ಇಂಗ್ಲಿಷ್ ಅಧಿಕಾರಿಗಳ ಸಮಿತಿಯೊಂದರ ಸಹಾಯವನ್ನು ಪಡೆದು, ೧೮೬೬ರ ಡಿಸೆಂಬರ್ ೧ರಲ್ಲಿ ಈಸ್ಟ್ ಇಂಡಿಯಾ ಅಸೋಸಿಯೇಷನ್ ಎಂಬ ಸಂಸ್ಥೆಯನ್ನು ಪ್ರತಿಷ್ಠಿಸಿದನು. ನಿವೃತ್ತ ಇಂಗ್ಲಿಷ್ ಅಧಿಕಾರಿಗಳ ಸಮಿತಿ ಇಂಡಿಯಾಕ್ಕೆ ಸಂಬಂಧಪಟ್ಟ ವಿಷಯಗಳನ್ನು ಬ್ರಿಟಿಷ್ ಜನರಿಗೂ ಬ್ರಿಟಿಷ್ ಸರಕಾರಕ್ಕೂ ಪರಿಚಯ ಮಾಡಿಕೊಡಲು ಸಮರ್ಥವಾಗಿತ್ತು. ಇಂಡಿಯಾದ ಹಿತದಲ್ಲಿ ಆಸಕ್ತಿಯುಳ್ಳವರೆಲ್ಲ ಅಸೋಸಿಯೇಷನ್ನಿನ ಸದಸ್ಯರಾಗಬಹುದಾಗಿತ್ತು. ಇಂಡಿಯದ ಹಿತಾಸಕ್ತಿಗಳನ್ನು ಸ್ವತಂತ್ರವಾದ ಮತ್ತು ನಿಷ್ಪಕ್ಷಪಾತವಾದ ದೃಷ್ಟಿಯಿಂದ ಪ್ರತಿಪಾದಿಸುವುದೂ ಅವುಗಳ ಸಾಧನೆಗಾಗಿ ನ್ಯಾಯಬದ್ಧವಾದ ಎಲ್ಲ ರೀತಿಗಳಿಂದಲೂ ಪ್ರಯತ್ನಿಸುವುದೂ ಸಂಘದ ಗುರಿಯಾಗಿತ್ತು. ಪಾರ್ಲಿಮೆಂಟಿನ ಸದಸ್ಯರ ಮತ್ತು ಸಾರ್ವಜನಿಕರ ಉಪಯೋಗಕ್ಕಾಗಿ, ಇಂಡಿಯಾದ ವಿಷಯಗಳಿಗೆ ಸಂಬಂಧ ಪಟ್ಟಂತೆ, ಒಂದು ಪುಸ್ತಕ ಭಂಡಾರವನ್ನೂ ವಾಚನಾಲಯವನ್ನೂ ತೆರೆದು ಇಂಡಿಯಾ ವಿಷಯಕವಾದ ಸಮಾಚಾರಗಳನ್ನೆಲ್ಲ ಒದಗಿಸಿ ಆವಶ್ಯಕವಾದ ಇತರ ಸಹಾಯಗಳನ್ನೂ ನೀಡುವುದು ಉದ್ದೇಶವಾಗಿತ್ತು.

ದಾದಾಭಾಯಿ ಇಂಗ್ಲೆಂಡಿನಲ್ಲಿ ವಾಸವಾಗಿದ್ದ ಕಾಲಾವಧಿಯಲ್ಲಿ ತನ್ನ ಸ್ವಾರ್ಥರಹಿತವಾದ ಕೆಲಸ ಕಾರ್ಯಗಳಿಂದ ಆಂಗ್ಲ ಮಿತ್ರರಲ್ಲಿ ಭಾರತದ ವಿಷಯವಾಗಿ ಸಹಾನುಭೂತಿಯನ್ನುಂಟುಮಾಡಿದ್ದನು ಇದರಿಂದ ಬಹು ಮಂದಿ ಇಂಗ್ಲಿಷ್ ರಾಜಕೀಯಸ್ಥರೂ, ರಾಜನೀತಿಜ್ಞರೂ, ನಿವೃತ್ತ ಗವರ್ನರುಗಳೂ, ನಿವೃತ್ತ ಅಧಿಕಾರಿಗಳೂ ಕೂಡಬೆ ಸಂಘದ ಸದಸ್ಯರಾದರು. ಲಾರ್ಡ್ ಲೈವ್‌ಡೆನ್ ಮೊದಲನೆಯ ಅಧ್ಯಕ್ಷನಾದನು. ಈತನು, ಬಂಗಾಳ ಸರಕಾರದ ಅಡ್ವೊಕೇಟ್ ಜನರಲ್ ಆಗಿದ್ದು ಮನುವಿನಿಂದೀಚೆಗೆ ಇಂಥ ಪಂಡಿತ ಹುಟ್ಟಿರಲಿಲ್ಲವೆಂದು ಹೆಸರು ಪಡೆದಿದ್ದ ರಾಬರ್ಟ್ ಸ್ಮಿತ್‌ನ ಮಗನು. ಆರಂಭದಲ್ಲಿ ದಾದಾಭಾಯಿ ಕಮಿಟಿಯ ಸದಸ್ಯ ಮಾತ್ರನಾಗಿದ್ದನು. ಆದರೆ ಸ್ವಲ್ಪ ಕಾಲದಲ್ಲಿಯೆ ಕಾರ್ಯದರ್ಶಿಯ ಕರ್ತವ್ಯವನ್ನೂ ವಹಿಸಬೇಕಾಯಿತು.

ಇಂಡಿಯಾ ಮತ್ತು ವಸಾಹತುಗಳ ವಿಷಯವಾಗಿ, ವಿಶೇಷವಾದ ತಿಳಿವಳಿಕೆಯುಳ್ಳವರಿಗೂ ದೃಷ್ಟಿ ಇರುವವರಿಗೂ, ಸಂಘ ವಾದಸ್ಥಾನವಾಯಿತು. ಸಂಘದ ಸಭೆಗಳಲ್ಲಿ ಆಂಗ್ಲೇಯ ಪ್ರಮುಖರೂ, ಭಾರತೀಯರೂ, ಆಂಗ್ಲೋ ಇಂಡಿಯನ್ನರೂ ಭಾಗವಹಿಸಿ, ಭಾರತದ ವಿಚಾರವಾಗಿ ಅಭಿಪ್ರಾಯ ವಿನಿಮಯ ನಡಸಿ, ಇಂಡಿಯಾದ ಕುಂದು ಕೊರತೆಗಳನ್ನು ವಿವರಿಸುವುದರಲ್ಲಿ ಒಟ್ಟಾಗಿ, ಬ್ರಿಟಿಷ್ ಜನರೂ ಸರಕಾಗವೂ ಇಂಡಿಯಾವಿಚಾರದಲ್ಲಿ ಹಿಂದಿಗಿಂತ ಹೆಚ್ಚಾದ ಆಸಕ್ತಿಯನ್ನು ವಹಿಸುವಂತೆ ಪ್ರಚೋದಿಸಲು ಸಾಧ್ಯವಿರುವ ಮಟ್ಟಿಗೂ ಪ್ರಯತ್ನನಡಸುತ್ತಿದ್ದರು.

೧೮೬೭ ರ ಮೇ ೨ ರಲ್ಲಿ ಸೇರಿದ ಮೊದಲನೆಯ ಸಭೆಯಲ್ಲೇ ದಾದಾಭಾಯಿ "ಇಂಡಿಯಾದ ವಿಷಯದಲ್ಲಿ ಇಂಗ್ಲೆಂಡಿನ ಕರ್ತವ್ಯಗಳು" ಎಂಬ ಪ್ರಬಂಧವನ್ನು ಓದಿದನು. ಅದರಲ್ಲಿ ಮುಖ್ಯವಾಗಿ ಮೂರು ವಿಷಯಗಳನ್ನು ಎತ್ತಿದನು. ಇಂಡಿಯಾದಲ್ಲಿನ ಬ್ರಿಟಿಷ್ ಆಡಳಿತದಿಂದ ಇಂಡಿಯಕ್ಕೂ ಇಂಗ್ಲೆಂಡಿಗೂ ಪ್ರಯೋಜನವಾಗಿದೆಯೆ? ಹಾಗೆ ಆಗಿದ್ದಲ್ಲಿ, ದೀರ್ಘಕಾಲದವರೆಗೆ ಅದನ್ನು ನಡಸಿಕೊಂಡು ಬರಲು ಅತ್ಯುತ್ತಮನಾದ ಸಾಧನಗಳು ಯಾವುವು? ಅಂಥ ಸಾಧನೋಪಾಯಗಳನ್ನು ಅನುಸರಿಸಲಾಗಿದೆಯೆ? ಬ್ರಿಟಿಷರ ಆಳ್ವಿಕೆಯಲ್ಲಿ ಸ್ಥಿರಪಟ್ಟ ನ್ಯಾಯ ಪರಿಪಾಲನೆ ಮತ್ತು ಶಾಂತಿರಕ್ಷಣೆಗಳಿಂದ ದೊರೆತಿರುವ ಪ್ರಯೋಜನಗಳನ್ನು ತಿಳಿಯಪಡಿಸಿ, ಇಂಗ್ಲೆಂಡಿನ ಶಕ್ತಿ ಸಂಪತ್ತುಗಳ ಅಭಿವೃದ್ಧಿಗೆ ಇಂಡಿಯಾದಿಂದ ಆಗಿರುವ ಅಪಾರವಾದ ಸಹಾಯವನ್ನು ಅಂಕಿ ಅಂಶಗಳಿಂದ ವಿವರಿಸಿದನು. ಇಂಡಿಯಾದಿಂದ ವರ್ಷವರ್ಷವೂ ಇಂಗ್ಲೆಂಡಿಗೆ ಐಶ್ವರ್ಯ ಹರಿದು ಹೋಗುತ್ತಿರುವುದನ್ನೂ ಸ್ವದೇಶದ ಆಡಳಿತದಲ್ಲಿ ಭಾರತೀಯರು ಭಾಗವಹಿಸದಂತೆ ಇರುವ ಪರಿಸ್ಥಿತಿಯನ್ನೂ ತಿಳಿಸಿದನು. ವಸ್ತುಸ್ಥಿತಿ ಹೀಗಿದ್ದರೂ ಇಂಡಿಯಾ ಇಂಗ್ಲೆಂಡಿನ ಸಂಬಂಧ ನಡೆದುಬರಬೇಕೆಂದು ಆಶಿಸುವುದೇಕೆ?

ಸದಸ್ಯರು ಒಬ್ಬರಾದ ಮೇಲೊಬ್ಬರು ಪ್ರಮುಖ ವಿಷಯಗಳನ್ನು ಕುರಿತು ಲೇಖನಗಳನ್ನು ಓದಿದರು. ೧೮೬೭ ರ ಆಗಸ್ಟ್ ೧೩ ರ ಸಭೆಯಲ್ಲಿ ದಾದಾಭಾಯಿ ಸಿವಿಲ್ ಸರ್ವಿಸ್ಸಿಗೆ ಭಾರತೀಯರನ್ನು ಸೇರಿಸಿಕೊಳ್ಳುವ ಪ್ರಶ್ನೆಯನ್ನೆತ್ತಿ, ಆ ಪರೀಕ್ಷೆಯನ್ನು ಇಂಡಿಯದಲ್ಲೂ ನಡಸುವಂತೆ ಸ್ಟೇಟ್

ಸೆಕ್ರೆಟರಿಗೆ ವಿಜ್ಞಾಪನ ಪತ್ರಿಕೆಯೊಂದನ್ನು ಕಳಿಸಬೇಕೆಂದು ಸೂಚಿಸಿದನು. ಕಾಮನ್ಸ್ ಸಭೆಯ ಸದಸ್ಯರಿಗೆ ಈ ವಿಷಯದಲ್ಲಿ ಆಸಕ್ತಿ ಉಂಟಾಗುವಂತೆ ಪ್ರಯತ್ನಿಸಿದನು. ಕಡೆಗೆ ಹೆನ್ರಿ ಫಾಸೆಟ್‌ನ ಮೂಲಕ ಸಿವಿಲ್ ಸರ್ವಿಸ್ 'ಪರೀಕ್ಷೆಯನ್ನು ಲಂಡನ್, ಕಲ್ಕತ್ತ, ಬೊಂಬಾಯಿ ಮತ್ತು ಮದ್ರಾಸು ನಗರಗಳಲ್ಲಿ ಏಕಕಾಲದಲ್ಲಿ ನಡಸುವುದು ಅಪೇಕ್ಷಣೀಯವಾಗಿದೆ' ಎಂಬ ಸೂಚನೆ ಕಾಮನ್ಸ್ ಸಭೆಗೆ ಹೋಯಿತು.

ವಿರೋಧಿಗಳಾದ ವಿಮರ್ಶಕರು, ಅನೇಕ ವೇಳೆ, ನಂಬಿಕೆಯಾದ ಮತ್ತು ಜವಾಬ್ದಾರಿಯಾದ ಉದ್ಯೋಗಸ್ಥಾನಗಳನ್ನು ನಡಸಲು ಭಾರತೀಯರಿಗೆ ಅರ್ಹತೆಯಿದೆಯೆ ಎಂದು ಪ್ರಶ್ನಿಸುತ್ತಿದ್ದರು. ಅರ್ಹತೆ, ಪ್ರಾಮಾಣಿಕತನ, ದೇಹಶಕ್ತಿ ಮತ್ತು ಚೈತನ್ಯ, ಇವು ಭಾರತೀಯರಲ್ಲಿ ತಕ್ಕಷ್ಟು ಪ್ರಮಾಣದಲ್ಲಿ ಇಲ್ಲವೆಂಬ ಭ್ರಾಂತಿ ಅನೇಕರಲ್ಲಿ ಇತ್ತು. ಭಾರತೀಯರ ವಿಚಾರದಲ್ಲಿ ತಿರಸ್ಕಾರದಿಂದ ಮಾತನಾಡುವವರನ್ನು ದಾದಾಭಾಯಿ ಈರೀತಿ ಎಚ್ಚರಿಸಿದನು: ಹಿಂದೆ, ಇಂಡಿಯಾಕ್ಕೆ ಹೋಗಿದ್ದ ಹಲವರು ಇಂಗ್ಲಿಷರು ಹೇಗೆ ಇದ್ದಕಿದ್ದಂತೆ ಐಶ್ವರ್ಯವಂತರಾದ ನವಾಬರಾದರೆಂಬುದನ್ನು ಮರೆಯಬೇಡಿ; ಕಂಪೆನಿಯ ಅಧಿಕಾರಿಗಳು ಇಂಡಿಯಾದಲ್ಲಿ ತಮ್ಮ ಸೈನ್ಯಬಲವನ್ನೂ ಪ್ರಭಾವವನ್ನೂ ವಿಕ್ರಯಮಾಡಿ ಹಣ ಸಂಪಾದಿಸಿ, ಇಂಗ್ಲೆಂಡಿನಲ್ಲಿ ಲಂಚ ಕೊಟ್ಟು ಪಾರ್ಲಿಮೆಂಟ್ ಸಭೆಯಲ್ಲಿ ಹೇಗೆ ಬಲಸಂಪಾದನೆ ಮಾಡಿದರು; ಕಂಪೆನಿಯ ಉದ್ಯೋಗಸ್ಥರು ಹೇಗೆ ತಮ್ಮ ಪ್ರಭುಗಳನ್ನೇ ವಂಚಿಸಿದರು; ಸ್ವಪ್ರಯೋಜನಕ್ಕಾಗಿ ಅವರು ಹೇಗೆ ನಾಚಿಕೆಯನ್ನೂ ನ್ಯಾಯಬುದ್ಧಿಯನ್ನೂ ಸಂಪೂರ್ಣವಾಗಿ ತೊರೆದುಬಿಟ್ಟರು;—ಇವು ಯಾವುದನ್ನೂ ಮರೆಯಬೇಡಿ. ಭಾರೀ ಸಂಬಳವನ್ನೋ ಲಾಭವನ್ನೋ ತೆಗೆಯುವ ಇಂಗ್ಲಿಷ್ ಅಧಿಕಾರಿಗಳು ಅಲ್ಪ ಸಂಬಳವನ್ನು ಪಡೆಯುವ ಬಡ ಉದ್ಯೋಗಸ್ಥರು ಲಂಚಕ್ಕೆ ಕೈಚಾಚುವುದನ್ನು ಕಂಡು ಉದ್ರಿಕ್ತರಾಗುವುದು ಸ್ವಾಭಾವಿಕ. ಆದರೆ ಲಂಡನ್ನಿನಲ್ಲಿ ನಿಮ್ಮ ಸುತ್ತಲೂ ನಡೆಯುವ ಮೋಸಗಳನ್ನು ನೋಡಿ, ಎಂದು ದಾದಾಭಾಯಿ ನುಡಿದನು. ಅನೇಕ ಜನ ಇಂಗ್ಲಿಷರು ಇಂಡಿಯಾದಲ್ಲಿ ಗೌರವದಿಂದ ನಡೆದುಕೊಳ್ಳುತ್ತಿಲ್ಲವೆಂಬುದನ್ನೂ ನೆನಪಿನಲ್ಲಿಡಿ ಎಂದು ತಿಳಿಯ ಹೇಳಿದನು.

ನಿಜವಾದ ಪ್ರಶ್ನೆಯೇನೆಂದರೆ, ಭಾರತೀಯರು ಆಂಗ್ಲರಂತೆಯೇ ಉಚ್ಚಮಟ್ಟದ ಶಿಕ್ಷಣವನ್ನು ಹೊಂದಿದಾಗ, ಅವರ ಮಟ್ಟದ ಶೀಲವನ್ನೂ ಪ್ರಾಮಾಣಿಕತನವನ್ನೂ ತೋರುವರೆ, ಹೇಗೆ? "ಇಂಡಿಯಾದಲ್ಲಿ ನೇಟಿವ್ ಜನರ ದಕ್ಷತೆಗೆ ಸಂಬಂಧಪಟ್ಟ ಪ್ರಮಾಣಾಂಶಗಳು" ಎಂಬ ೯೫ ಪುಟಗಳ ಲಘುಪುಸ್ತಕವನ್ನು ಕೈಯಲ್ಲಿ ಹಿಡಿದು, ಇಂಡಿಯಾದಲ್ಲಿ ನಾನಾ ಇಲಾಖೆಗಳಲ್ಲಿ, ಜವಾಬ್ದಾರಿಯಾದ ಸ್ಥಾನಗಳಲ್ಲಿ ನೇಮಿತರಾದ ಭಾರತೀಯ ಉದ್ಯೋಗಸ್ಥರು ದಕ್ಷತೆಯಿಂದಲೂ ಪ್ರಾಮಾಣಿಕತೆಯಿಂದಲೂ ನಡೆದಿದಾರೆ ಎಂಬುದಕ್ಕೆ ಇದರಲ್ಲಿ ರುಜುವಾತಿದೆ ಎಂದು ದಾದಾಭಾಯಿ ತಿಳಿಸಿದನು. ಅದರಲ್ಲಿ ನಿವೃತ್ತ ಗವರ್ನರುಗಳ, ನಾನಾ ಕ್ಷೇತ್ರಗಳಲ್ಲಿ ಅನುಭವವುಳ್ಳ ದೊಡ್ಡ ದೊಡ್ಡ ಅಧಿಕಾರಿಗಳ ಮತ್ತು ಮಿಲಿಟರಿ ಆಫೀಸರುಗಳ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿತ್ತು. ಭಾರತೀಯರ ಮೇಧಾಶಕ್ತಿಯನ್ನು ಕುರಿತು ಎಲ್ಲರೂ ಹೊಗಳಿದ್ದರು. ಕೆಲವರು ಮಾತ್ರ ಭಾರತೀಯರಲ್ಲಿ ಪ್ರಾಮಾಣಿಕತೆ ಪ್ರಮುಖವಾದ ಒಂದು ಗುಣವಾಗಿದ್ದಂತೆ ತೋರುವುದಿಲ್ಲ ಎಂದಿದ್ದರು. ಭಾರತೀಯರಿಗೆ ವಿರುದ್ಧವಾದ ಯಾವ ಅಭಿಪ್ರಾಯವನ್ನೂ ದಾದಾಭಾಯಿ ಮರೆಮಾಡಲು ಪ್ರಯತ್ನಿಸಿರಲಿಲ್ಲ. ವಾಚಕರೇ ನೋಡಿ ನಿರ್ಣಯಿಸಿಕೊಳ್ಳುವಂತೆ ಎಲ್ಲ ಅಭಿಪ್ರಾಯಗಳನ್ನೂ ಅವರ ಮುಂದೆ ಇಟ್ಟಿದ್ದನು.

ಸ್ಥಾಪಿತವಾದ ಎರಡು ವರ್ಷಗಳ ಅವಧಿಯಲ್ಲಿ, ಮಾಡಬೇಕಾದ ಉತ್ತಮ ಕೆಲಸ ಬೇಕಾದಷ್ಟಿದೆಯೆಂದು ಸಂಘದ ಸದಸ್ಯರಿಗೆ ಮನವರಿಕೆಯಾಗಿತ್ತು. ಇಂಡಿಯಾದೇಶದ ಮುಖ್ಯ ನಗರಗಳಲ್ಲಿ ಸಂಘದ ಶಾಖೆಗಳನ್ನು ತೆರೆದರೆ, ಅವುಗಳಿಗೆ ರಾಜರುಗಳೂ ಸಾರ್ವಜನಿಕರೂ ಧನಸಹಾಯಮಾಡಿದರೆ, ಸಂಘದ ಚಟುವಟಿಕೆಗಳನ್ನು ಹೇಗೆ ಬಲಪಡಿಸಬಹುದೆಂದು ದಾದಾಭಾಯಿ ಯೋಚಿಸಲಾರಂಭಿಸಿದನು. ಸಹೋದ್ಯೋಗಿಗಳು ಈ ಅಭಿಪ್ರಾಯವನ್ನು ಅನುಮೋದಿಸಿದರು. ದಾದಾಭಾಯಿ ಇಂಡಿಯಾಕ್ಕೆ ಹೋಗಿ ಪ್ರಮುಖಸ್ಥಳಗಳಲ್ಲಿ ಶಾಖೆಗಳನ್ನು ಸ್ಥಾಪಿಸಬೇಕೆಂದೂ, ನಿಧಿಯನ್ನು ಶೇಖರಿಸಬೇಕೆಂದೂ, ನಿರ್ಧರಿಸಲಾಯಿತು.

## ೧೦. ಫಲಪ್ರದವಾದ ಕಾರ್ಯ

ದಾದಾಭಾಯಿ ಬೊಂಬಾಯಿಗೆ ಬಂದಿಳಿದವನು ೧೮೬೯ ರ ಮೇ ೫ ರಲ್ಲಿ ತನ್ನ ಮೊದಲನೆಯ ಭಾಷಣವನ್ನು ಮಾಡಿ ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನ ಉದ್ದೇಶಗಳನ್ನೂ ಅದು ಮಾಡುತ್ತಿರುವ ಕಾರ್ಯಗಳನ್ನೂ ವಿವರಿಸಿದನು. ಇಂಗ್ಲಿಷರನ್ನು ಜಾಗ್ರತಗೊಳಿಸುವುದು ಕಷ್ಟ, ಆದರೆ ವಿಷಯ ಅವರ ಮನಸ್ಸಿಗೆ ತಾಗಿದರೆ ಅದನ್ನು ಸಾಧಿಸುವವರೆಗೆ ನಿಲ್ಲುವುದಿಲ್ಲ ಎಂದು ಹೇಳಿ ನಮ್ಮ ಪಕ್ಷವನ್ನು ಸಾಧಿಸುವುದೇ ಈಗ ನಾವು ಅವಶ್ಯವಾಗಿ ಮಾಡಬೇಕಾಗಿರುವ ಕೆಲಸ ಎಂದು ತಿಳಿಸಿದನು. "ಆಂಗ್ಲೇಯರಿಗೆ ನಿರಂಕುಶ ರೀತಿಯಲ್ಲಿ ವರ್ತಿಸುವುದು ಸಾಧ್ಯವಿಲ್ಲ. ದರ್ಪದಿಂದ ಕೆಲಸಗಳನ್ನು ಮಾಡಬಹುದು, ಒಮ್ಮೊಮ್ಮೆ ಹಾಗೆ ಮಾಡಿಯೂ ಇದ್ದಾರೆ. ಆದರೆ ಸ್ವಾತಂತ್ರ್ಯ ಪ್ರವೃತ್ತಿಯೂ ಸ್ವಾತಂತ್ರ್ಯ ಪ್ರೀತಿಯೂ ಅವರಲ್ಲಿ ಸಹಜವಾಗಿ ಬಂದಿವೆ; ವ್ಯವಸ್ಥಾಬದ್ಧ ವರ್ತನೆ ಹುಟ್ಟಿನೊಡನೆಯೆ ಬಂದು ಅವರಲ್ಲಿ ಬೇರೂರಿ ನಿಂತಿದೆ. ಆದ್ದರಿಂದ ನಿರಂಕುಶರೆಂಬ ಅಪವಾದಕ್ಕೆ ಒಳಗಾಗುವ ಪರೀಕ್ಷೆಯ ಸಮಯ ಬಂದರೆ, ಕೂಡಲೆ ಅಂಥ ವರ್ತನೆಯಿಂದ ಹಿಂದೆಗೆಯುತ್ತಾರೆ" ಎಂದು ಸಭಿಕರಲ್ಲಿ ಅರಿಕೆ ಮಾಡಿದನು.

ಭಾಷಣದಿಂದ ಜನರಲ್ಲಿ ವಿಶೇಷ ಉತ್ಸಾಹವುಂಟಾಯಿತು. ಮೇ ೨೨ ನೆಯ ತಾರೀಕಿನ ದಿವಸ ಬೊಂಬಾಯಿನ ಪುರ ಪ್ರಮುಖರ ದೊಡ್ಡ ಸಭೆ ಸೇರಿ ಅಸೋಸಿಯೇಷನ್ನಿನ ಬೊಂಬಾಯಿ ಶಾಖೆ ಸ್ಥಾಪಿತವಾಯಿತು.

ಆ ಮೇಲೆ ದಾದಾಭಾಯಿ ಸಂಚಾರ ಹೊರಟನು. ದೇಶೀಯ ರಾಜರ ಬೆಂಬಲವನ್ನು ಪಡೆಯುವುದು ಅವನ ಸಂಚಾರದ ಉದ್ದೇಶವಾಗಿತ್ತು. ಅವನ ಮಿತ್ರರಾದ ಡಾ|| ಭೌದಾಜಿ, ಕೆ. ಟಿ. ತೆಲಂಗ್ ಮೊದಲಾದವರು ನವ ಭಾರತದ ಆಶಯಗಳಲ್ಲಿ ರಾಜಮಹಾರಾಜರುಗಳು ಭಾಗವಹಿಸಲಾರರೆಂದು ಹಿಂಜರಿದರು. ಬ್ರಿಟಿಷ್ ಇಂಡಿಯದ ನಾಯಕರು ತಮ್ಮ ರಾಜಕೀಯ ಕ್ಷೇತ್ರದಿಂದ ರಾಜರುಗಳನ್ನು ಹೊರಗಿಡುವುದರಿಂದ ಉಪಯುಕ್ತವಾದ ಶಕ್ತಿಯೊಂದನ್ನು ವ್ಯರ್ಥಗೊಳಿಸಿದಂತಾಗುತ್ತದೆ ಎಂದು ದಾದಾಭಾಯಿ ಅಭಿ

ಪ್ರಾಯಪಟ್ಟನು. ಬ್ರಿಟಿಷ್ ಇಂಡಿಯದಲ್ಲಿನ ದಕ್ಷರೂ ಪ್ರಭಾವಶಾಲಿಗಳೂ ಆದ ನಾಯಕರು ರಾಜರುಗಳಿಗೆ ಬೇಕಾದ ಸಲಹೆಯನ್ನೂ ಸೇವೆಯನ್ನೂ ನಿರಾಕರಿಸಬಾರದು: ರಾಜರುಗಳಾದರೂ ಭಾರತದ ಪ್ರಗತಿಗಾಗಿ ದೇಶ ನಾಯಕರು ಕೈಕೊಳ್ಳುವ ಚಳವಳಿಗಳಿಗೆ ಧನಸಹಾಯ ಮಾಡಬೇಕು.

ದಾದಾಭಾಯಿಯ ನಂಬಿಕೆ ವ್ಯರ್ಥವಾಗಲಿಲ್ಲ. ಕಾಥಿಯವಾಡದಲ್ಲಿ ರಾಜರುಗಳು ಅವನನ್ನು ವಿಶ್ವಾಸದಿಂದ ಬರಮಾಡಿ ಕೊಂಡರು. ಕಚ್, ಜುನಘಡ್, ಗೋಂಡಾಲ್ ಸಂಸ್ಥಾನಗಳಿಂದ ತುಂಬ ಧನ ಸಹಾಯ ದೊರಿಯಿತು. ಗೋಂಡಾಲದ ಥಾಕೂರ್ ಸಾಹೇಬ'ಮಹಾರಾಜಾ ಶ್ರೀ ಭಗವತ್ ಸಿನ್ಹಜೀಯು ದಾದಾಭಾಯಿಯನ್ನು ಬಹುವಾಗಿ ಮೆಚ್ಚಿಕೊಂಡಿದ್ದನು; ಅವನಲ್ಲಿ ಉದ್ದಕ್ಕೂ ಬಹು ವಿಶ್ವಾಸವಾಗಿದ್ದನು. ತನ್ನ ಪ್ರಜೆಗಳು ಅವನ ಭಾಷಣವನ್ನು ಕೇಳಲೆಂದು ಸಾರ್ವಜನಿಕ ಸಭೆಯನ್ನೇರ್ಪಡಿಸಿದನು. ದೇಶ ಪ್ರೇಮವನ್ನು ಸೂಸುತ್ತಿದ್ದ ಅವನ ಭಾಷಣವನ್ನು ಕೇಳಿ ಪ್ರಜೆಗಳು ಉತ್ಸಾಹ ಭರಿತರಾದರು. ಅಂಥ ನಿರ್ಮಲಚಿತ್ತನೂ ಋಷಿ ಸಮಾನನೂ ಆದ ವಕ್ತಾರನನ್ನು ಅವರು ಅದಕ್ಕೆ ಮುಂಚೆ ಕಂಡಿರಲಿಲ್ಲ.

ಕೆಲವು ತಿಂಗಳುಗಳಲ್ಲಿಯೆ ಕಲ್ಕತ್ತ ಮದರಾಸು ಮೊದಲಾದ ನಗರಗಳಲ್ಲಿ ಅಸೋಸಿಯೇಷನ್ನಿನ ಶಾಖೆಗಳು ಸ್ಥಾಪಿತವಾದವು. ದೇಶೀಯ ಸಂಸ್ಥಾನಗಳಿಂದ ಅಧಿಕವಾದ ಧನ ಸಹಾಯ ಬಂತು. ಹೀಗೆ ಆಧುನಿಕ ಇತಿಹಾಸದಲ್ಲಿ ಮೊದಲಬಾರಿಗೆ, ದಾದಾಭಾಯಿ ಇಂಡಿಯಾದಲ್ಲಿ ಸ್ಪಷ್ಟವಾದ ರಾಷ್ಟ್ರೀಯ ಭಾವನೆಯನ್ನು ಜಾಗೃತಿಗೊಳಿಸಿದನೆಂದು ಹೇಳಬಹುದು. ಅವನ ತೀವ್ರವಾದ ಶ್ರದ್ಧೆಯೂ, ನಿಷ್ಕಪಟವಾದ ವರ್ತನೆಯೂ, ತ್ಯಾಗ ಮನೋಭಾವವೂ, ಸಮಂಜಸವಾದ ವಿಷಯ ನಿರೂಪಣೆಯೂ, ಮಿತವಾದವೂ ಅವನ ಭಾಷಣಗಳಿಗೆ ಅಪೂರ್ವವಾದ ಮೋಹಕತೆಯನ್ನುಂಟು ಮಾಡುತ್ತಿದ್ದವು. ಬ್ರಿಟಿಷ್ ಆಡಳಿತಕ್ಕೆ ಸಂಬಂಧಪಟ್ಟ ವಿಮರ್ಶೆಗಳನ್ನು ಬಹು ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದ ಭಾರತದಲ್ಲಿದ್ದ ಆ ಕಾಲದ ಆಂಗ್ಲೇಯರೂ ಅವನ ಭಾಷಣಗಳನ್ನು ಮೆಚ್ಚುತ್ತಿದ್ದರು.

ಸುಮಾರು ಈ ವೇಳೆಗೆ ಫಿರೋಜ್‌ಷಾ ಮೆಹತಾ ಇಂಗ್ಲೆಂಡಿನಿಂದ ಬೊಂಬಾಯಿಗೆ ಹಿಂದಿರುಗಿದನು. ಮೆಹತಾ ಇಂಗ್ಲೆಂಡಿನಲ್ಲಿ ನ್ಯಾಯ

ಪರೀಕ್ಷೆಗೆ ಓದುತ್ತಿದ್ದಾಗ ದಾದಾಭಾಯಿಯ ಆಶ್ರಯದಲ್ಲಿದ್ದನು. ಅವನ ವಿವೇಕ ಪೂರ್ಣವಾದ ಬುದ್ಧಿವಾದದಿಂದ ತನ್ನ ಶೀಲವನ್ನು ರೂಪಿಸಿಕೊಂಡಿದ್ದನು. ಅವನಿಂದ ಸ್ಫೂರ್ತಿಗೊಂಡು ಉದಾತ್ತ ಧ್ಯೇಯಗಳನ್ನು ಕಲ್ಪಿಸಿಕೊಂಡಿದ್ದನು. ಇಂಡಿಯಾ ವಿಚಾರಗಳಲ್ಲಿ ಬ್ರಿಟಿಷ್ ಜನರ ಆಸಕ್ತಿಯನ್ನು ಕೆರಳಿಸಲು ದಾದಾಭಾಯಿ ಎಷ್ಟು ಶ್ರಮ ಪಟ್ಟಿದ್ದನೆಂಬುದನ್ನು ಮೆಹತಾ ಕಣ್ಣಾರ ಕಂಡಿದ್ದನು. ಈಗ ದಾದಾಭಾಯಿಯ ಭಾಷಣಗಳಿಂದ ಜನರ ದೇಶಾಭಿಮಾನದ ಭಾವನೆ ಹೇಗೆ ಕೆರಳಿ ಪ್ರಾಂತದಲ್ಲೆಲ್ಲ ಉತ್ಸಾಹ ಹರಡಿತ್ತು ಎಂಬುದನ್ನೂ ಕಂಡನು. ದಾದಾಭಾಯಿಯ ಸೇವಾತ್ಯಾಗಗಳಿಗೆ ಸಾರ್ವಜನಿಕವಾದ ಮೆಚ್ಚುಗೆಯನ್ನು ದೊರಕಿಸಲು ಮೆಹತಾ ತಾನೇ ಒಂದು ಚಳವಳಿಯನ್ನು ಆರಂಭಿಸಿದನು.

ಬೊಂಬಾಯಿಯ ಸಾರ್ವಜನಿಕರು ಉತ್ಸಾಹದಿಂದ ಸಹಕರಿಸಿದರು. ಪುರ ಪ್ರಮುಖರು ಹಲವರು ಸೇರಿ ದಾದಾಭಾಯಿಗೆ ಬಿನ್ನವತ್ತಳೆಯನ್ನೂ ನಿಧಿಯನ್ನೂ ಅರ್ಪಿಸಬೇಕೆಂದು ನಿರ್ಧರಿಸಿದರು. ದೇಶಕಾರ್ಯಕ್ಕೆ ಮನಕೊಟ್ಟ ಆತನು ಸ್ವಹಿತವನ್ನು ಉಪೇಕ್ಷೆ ಮಾಡಿರುವುದನ್ನು ಅವರು ಅರಿತಿದ್ದರು. ಅವನು ಸ್ವಂತದ ಕಷ್ಟಗಳನ್ನು ಕುರಿತು ಬೇರೆಯವರಲ್ಲಿ ಮಾತನಾಡತಕ್ಕ ವ್ಯಕ್ತಿಯಾಗಿರಲಿಲ್ಲ ಅವನಿಗೆ ಅರ್ಪಿಸಲು ರೂ. ೩೦,೦೦೦ಗಳ ನಿಧಿ ಶೇಖರವಾಯಿತು.

ಈ 'ರಾಜಕೀಯ ಚಳವಳಿಗಾರ'ನ ಗೌರವಾರ್ಥವಾಗಿ ಏರ್ಪಟ್ಟ ಸಂತೋಷ ಸಮಾರಂಭದಲ್ಲಿ, ಹಿಂದೆಯಾಗಲಿ ಮುಂದೆಯಾಗಲಿ, ಎಂದೂ ಸೇರದ ರೀತಿಯಲ್ಲಿ, ಪರಂಗಿ ನಿವಾಸಿಗಳು ಸಹ ಭಾಗ ವಹಿಸಿದರು. ೧೮೬೯ರ ಜುಲೈ ೩ ರಲ್ಲಿ, ಫ್ರೇಮ್‌ಜಿ ಕೊವಾಸ್‌ಜಿ ಸಂಸ್ಥೆಯಲ್ಲಿ ಗೌರವ ಸಭೆ ಏರ್ಪಾಟಾಗಿತ್ತು. ಬಿನ್ನವತ್ತಳೆಯಲ್ಲಿ, ದಾದಾಭಾಯಿ ಸ್ವದೇಶದಲ್ಲೂ ವಿದೇಶದಲ್ಲೂ, ತನ್ನ ಕಾಲವನ್ನೂ ಶಕ್ತಿಯನ್ನೂ ಬುದ್ಧಿಯನ್ನೂ ಇಂಡಿಯಾ ದೇಶದ ಜನರ ಏಳಿಗೆಗಾಗಿ ನಿಸ್ಸ್ವಾರ್ಥ ಬುದ್ಧಿಯಿಂದ ವಿನಿಯೋಗಿಸಿದ ಸಂಗತಿಯನ್ನು ನಮೂದಿಸಿದ್ದರು. ಜನತೆಯ ಶಿಕ್ಷಣ, ಜ್ಞಾನ ಪ್ರಸಾರ, ದೇಶಭಾಷೆಯ ಅಭಿವೃದ್ಧಿ, ಬೊಂಬಾಯಿ ಪ್ರಾಂತದ ಗುಜರಾತಿ ಭಾಷೆಯನ್ನಾಡುವ ಜನಗಳಲ್ಲಿ ಓದುವ ಅಭಿರುಚಿಯ ನಿರ್ಮಾಣ, ಈ ವಿಚಾರಗಳಲ್ಲಿ

ಅವನು ವಹಿಸಿದ ಶ್ರಮವನ್ನು ಹಿತವಾದ ಮಾತುಗಳಲ್ಲಿ ಸೂಚಿಸಿದ್ದರು.

ತನ್ನ ಮೊದಮೊದಲ ಕಾರ್ಯಗಳನ್ನೆಲ್ಲ ಒಂದರ ಮೇಲೊಂದರಂತೆ ಮೆಚ್ಚಿಕೆಯಿಂದಲೂ ವಿಶ್ವಾಸದಿಂದಲೂ ನೆನೆದದ್ದನ್ನು ಕಂಡು ದಾದಾಭಾಯಿ ಸಂತೋಷದಿಂದ ಪರವಶನಾದನು. ಆದರೆ ನಿಧಿಯ ಅರ್ಪಣೆಯಿಂದ ಬಹು ಇರುಸು ಮುರುಸಾಯಿತು.

ಶೇಖರಿಸಿದ ನಿಧಿಯಲ್ಲಿ ರೂ. ೨೫,೦೦೦ ಗಳನ್ನು ಅವನಿಗೆ ಅರ್ಪಿಸಿದರು, ಉಳಿದದ್ದನ್ನು ಅವನ ಭಾವಚಿತ್ರ ತಯಾರಿಕೆಗೆ ವಿನಿಯೋಗಿಸಲಾಗಿಟ್ಟರು. ನಿಧಿಯ ಬಹುಭಾಗ ಈಸ್ಟ್ ಇಂಡಿಯಾ ಅಸೋಸಿಯೇಷನ್ನಿಗೆ ಹೋಯಿತು. ಅಸೋಸಿಯೇಷನ್ನಿನ ಅಧಿಕಾರಿಯೊಬ್ಬನು ಹಣತಿಂದು ಹಾಕಿದ್ದರಿಂದ ಸಂಸ್ಥೆಯ ಆರ್ಥಿಕಸ್ಥಿತಿ ವಿಷಮಾವಸ್ಥೆಯಲ್ಲಿತ್ತು. ಆ ಅಧಿಕಾರಿಯ ಹೊಣೆಯನ್ನೆಲ್ಲ ದಾದಾಭಾಯಿ ವಹಿಸಿಕೊಂಡನು. ಹಣತಿಂದವನಿಂದ ಒಂದು ಫಾರ್ದಿಂಗೂ ಬರುವಂತಿರಲಿಲ್ಲ. ಆದರೆ ದಾದಾಭಾಯಿಗೆ ಸಂಸ್ಥೆಗೆ ಹೊಸಜೀವವನ್ನು ಕೊಟ್ಟಷ್ಟು ಸಂತೋಷವಾಯಿತು. ಈ ಸಂದರ್ಭ ಅವನ ತ್ಯಾಗಮನೋಭಾವವನ್ನೂ ನೀತಿನಿಷ್ಠೆಯನ್ನೂ ಪರೀಕ್ಷೆಗೆ ಒಳಪಡಿಸುವಂಥದಾಗಿತ್ತು.

ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನ ಪರವಾಗಿ ಕೈಕೊಂಡ ಕಾರ್ಯ ಜಯಪ್ರದವಾಗಿ ಕೊನೆಗೊಂಡದ್ದರಿಂದ ತೃಪ್ತಿ ಹೊಂದಿ ದಾದಾಭಾಯಿ ನಾಲ್ಕನೆಯ ಬಾರಿಗೆ ಇಂಗ್ಲೆಂಡಿಗೆ ಪ್ರಯಾಣಮಾಡಿದನು. ತನ್ನ ರಾಜಕೀಯ ಪ್ರಚಾರದಿಂದ ಬ್ರಿಟಿಷ್ ಇಂಡಿಯದ ಜನರಲ್ಲಿ ಹೊಸ ಆಸೆ ಆಶಯಗಳು ಉದ್ಭವವಾಗಿದ್ದುವಲ್ಲದೆ, ದೇಶೀಯ ರಾಜರುಗಳಲ್ಲೂ ಜಾಗೃತಿಯುಂಟಾಗಿತ್ತೆನ್ನುವುದು ಅವನಿಗೇ ತಿಳಿದಿರಲಿಲ್ಲ. ತನ್ನ ಪ್ರಭಾವದ ಕ್ಷೇತ್ರ ಈ ಕೆಲವು ತಿಂಗಳುಗಳಲ್ಲಿ ಎಷ್ಟರಮಟ್ಟಿಗೆ ಹರಡಿತ್ತೆನ್ನುವುದರ ಅರಿವಾಗಲಿ, ತನ್ನ ಸಾಮರ್ಥ್ಯವೂ ಪ್ರಾಮಾಣಿಕತೆಯೂ ದೇಶಾಭಿಮಾನವೂ ತನ್ನ ವಿಷಯಕ್ಕೆ ರಾಜರುಗಳಲ್ಲಿ ಎಂಥ ಗೌರವವನ್ನೂ ಮೆಚ್ಚಿಕೆಯನ್ನೂ ಉಂಟುಮಾಡಿತ್ತೆನ್ನುವುದರ ಅರಿವಾಗಲಿ ಅವನಿಗೆ ಇರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ, ತನ್ನ ಹೊಸ ಸಂಬಂಧಗಳಿಂದ ಜೀವನಯಾತ್ರೆಯಲ್ಲಿ ಅನಿರೀಕ್ಷಿತ ಬದಲಾವಣೆಯಾಗಿ, ಇಂಡಿಯಕ್ಕೆ ಹಿಂದಿರುಗಿ ಬಂದು, ದೇಶೀಯ ಸಂಸ್ಥಾನವೊಂದರ ಮುಖ್ಯ

ಮಂತ್ರಿಯಾಗಬಹುದೆಂದು ಅವನು ಕನಸಿನಲ್ಲಿಯೂ ತಿಳಿದಿರಲಿಲ್ಲ.

ಇಂಗ್ಲೆಂಡಿಗೆ ಬಂದವನೇ ಅಸೋಸಿಯೇಷನ್ನಿನ ಕಾರ್ಯ ಕಲಾಪಗಳಲ್ಲಿ ಪುನಃ ತೊಡಗಿದನು. ೧೮೭೧ ರಲ್ಲಿ ಸಂಸ್ಥೆಯ ಸದಸ್ಯರ ಸಂಖ್ಯೆ ನಾಲ್ಕು ಅಂಕಿಗಳಿಗೆ ಹೋಗಿತ್ತು. ಕಾಮನ್ಸ್ ಸಭೆಯ ಮೇಲೆ ಸಂಸ್ಥೆಯ ಪ್ರಭಾವ ತೋರಲಾರಂಭವಾಗಿತ್ತು. 'ಇಂಡಿಯಾ ಪರನಾದ ಸದಸ್ಯ'ನೆಂದು ಹೆಸರು ಪಡೆದಿದ್ದ ಹೆನ್ರಿ ಫಾಸೆಟ್‌ನು ದಾದಾಭಾಯಿಯ ನಿದರ್ಶನದ ಮೇರೆಗೆ ಇಂಡಿಯನ್ ಸಿವಿಲ್ ಸರ್ವಿಸ್ಸಿಗೆ ಉಮೇದುವಾರರನ್ನು ಸೇರಿಸಿಕೊಳ್ಳಲು "ಏಕ ಕಾಲದಲ್ಲಿ ಪರೀಕ್ಷೆ" ನಡಸುವ ನಿರ್ಣಯವನ್ನು ಕಾಮನ್ಸ್ ಸಭೆಯಲ್ಲಿ ಸೂಚಿಸಿದನು. ಈ ಸೂಚನೆ ವರ್ಷ ವರ್ಷದ ಪದ್ಧತಿಯಾಯಿತು. ಪಾರ್ಲಿಮೆಂಟಿನಲ್ಲಿ ಇಂಡಿಯದ ಪ್ರಶ್ನೆಗಳು ಚರ್ಚೆಗೆ ಬಂದಾಗ ಭಾರತದ ಜನತೆಯ ಆವಶ್ಯಕತೆಗಳನ್ನೂ ಅಪೇಕ್ಷೆಗಳನ್ನೂ ಅರಿತು ಮಾತನಾಡುವ ಸದಸ್ಯರು ಈಗ ಅನೇಕರಿದ್ದರು. ಇವರು ಅಸೋಸಿಯೇಷನ್ನಿನ ಸದಸ್ಯರ ಪ್ರೇರಣೆಯಿಂದ ಅಥವಾ ಅಲ್ಲಿಯ ಚರ್ಚೆಗಳಿಂದ ಸ್ಫೂರ್ತಿ ಪಡೆದು ಮಾತನಾಡುತ್ತ ಇಂಡಿಯಾ ಪ್ರಶ್ನೆಗಳ ವಿಚಾರವಾಗಿ ತಿಳಿವಳಿಕೆಯುಳ್ಳ ಪರಿಹಾರಗಳನ್ನು ಸೂಚಿಸುತ್ತಿದ್ದರು.

ಅಸೋಸಿಯೇಷನ್ನಿನ ಕೆಲಸಗಳು ವಿಪರೀತವಾಗಿ ಹೆಚ್ಚುತ್ತಿದ್ದವು. ಸಂಸ್ಥೆಯ ಕಲಾಪಗಳಿಗೆ ಕೇಂದ್ರ ಸ್ಥಳವೊಂದು ಬೇಕಾಗಿತ್ತು. ಪುಸ್ತಕ ಭಂಡಾರವನ್ನು ಪುಷ್ಟಿಗೊಳಿಸಿ ನಡಸ ಬೇಕಾಗಿತ್ತು; ಸಂಸ್ಥೆಯನ್ನು ಭದ್ರವಾದ ತಳಹದಿಯ ಮೇಲಿಡಲು ದತ್ತಿಗಳನ್ನು ಕೂಡಿಸ ಬೇಕಾಗಿತ್ತು. ದಾದಾಭಾಯಿ ಇಂಡಿಯದಿಂದ ಶೇಖರಿಸಿ ತಂದ ಹಣ ಈ ಎಲ್ಲ ಆವಶ್ಯಕತೆಗಳಿಗೆ ಸಾಲದಾಗಿತ್ತು. ತಿರುಗಿ ಇಂಡಿಯಾಕ್ಕೆ ಹೋಗಿ ಧನ ಶೇಖರಣೆ ಮಾಡುವನೆ? ಭಿಕ್ಷೆ ಎತ್ತುವ ಕಾರ್ಯವನ್ನು ಅವನು ಸಂತೋಷದಿಂದ ಒಪ್ಪಿಕೊಂಡನು. ಇಂಡಿಯಾಕ್ಕೆ ಹಿಂದಿರುಗಿದವನೇ ಬೊಂಬಾಯಿ ಶಾಖೆಯ ಕೆಲಸಗಳು ತಕ್ಕರೀತಿಯಲ್ಲಿ ನಡೆಯುವಂತೆ ವ್ಯವಸ್ಥೆ ಮಾಡಿ, ಕಾಥಿಯವಾಡ ಮತ್ತು ರಾಜಪುತ್ರಸ್ಥಾನ ಸಂಸ್ಥಾನಗಳಲ್ಲಿ ಧನ ಸಂಗ್ರಹಕ್ಕಾಗಿ ಸಂಚಾರ ಮಾಡಿದನು.

ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನ ಸಮಿತಿಯವರು ದಾದಾಭಾಯಿಯ ಸಹಾಯವನ್ನು, ಅದರಲ್ಲೂ ವಿಷಮ ಸನ್ನಿವೇಶಗಳಲ್ಲಿ ಅವನಿಂ

ದಾದ ಸಹಾಯವನ್ನು-ಬಹುವಾಗಿ ಮೆಚ್ಚಿದರು. ಆದರೆ ಯಾವ ಮೆಚ್ಚುಗೆಯ ಮಾತುಗಳೂ ಆ ಕಾಲದಲ್ಲಿ ಅವನು ಸಂಸ್ಥೆಗೆ ಜನರನ್ನೂ ಧನವನ್ನೂ ಸಂಗ್ರಹಿಸಲು ವಹಿಸಿದ ಅಪಾರ ಶ್ರಮವನ್ನು ಜನರಿಗೆ ಸರಿಯಾಗಿ ತಿಳಿಸಲಾರವು. ಆ ಕಾಲದಲ್ಲಿ ಸಂಕ್ಷಿಪ್ತ ಲಿಪಿಕಾರರು ಇರಲಿಲ್ಲ, ದಾದಾಭಾಯಿಯೇ ತನ್ನ ಅಪಾರವಾದ ಪತ್ರ ವ್ಯವಹಾರಗಳನ್ನೆಲ್ಲ ನೋಡಿಕೊಳ್ಳಬೇಕಾಗಿತ್ತು; ಸಭಾಕಾರ್ಯಗಳ ಸಂಕ್ಷಿಪ್ತ ವರದಿಯನ್ನು ತಯಾರಿಸ ಬೇಕಾಗಿತ್ತು; ವಾರ್ತಾ ಪತ್ರಿಕೆಗಳಿಗೆ ಲೇಖನಗಳನ್ನೂ ಧನ ಸಹಾಯಕ್ಕಾಗಿ ಬಿನ್ನಹ ಪತ್ರಗಳನ್ನೂ ಬರೆಯಬೇಕಾಗಿತ್ತು.

## ೧೧. ದೇಶದ ಐಶ್ವರ್ಯ ಬರಿದಾಗುತ್ತಿದೆ

೧೮೭೦ ರ ಸುಮಾರಿನಲ್ಲಿ, ಇಂಡಿಯಾದೇಶ ಅಸಹ್ಯವಾದ ದಾರಿದ್ರ್ಯದಲ್ಲಿ ಮುಳುಗಿದ್ದರೂ, ಆಡಳಿತಮಾತ್ರ ಅತಿದುಬಾರಿ ವೆಚ್ಚದ ಶ್ರೀಮಂತ ರೀತಿಯದಾಗಿತ್ತು. ವಿದೇಶೀ ಆಳ್ವಿಕೆಯಲ್ಲಿ ಅಧೀನರಾಷ್ಟ್ರದಿಂದ ಪ್ರಭುತ್ವ ರಾಷ್ಟ್ರಕ್ಕೆ ಐಶ್ವರ್ಯ ಎಡಬಿಡದೆ ಸಾಗುವುದು ಎಲ್ಲಿಯೂ ಉಂಟು. ಆದರೆ ಬಡಇಂಡಿಯಾದಲ್ಲಿ ಅಧಿಕಾರಿಗಳ ದುಂದಿನಿಂದ ಸಾಗಾಣಿಕೆಯ ಗತಿ ತೀವ್ರವಾಯಿತು. ದೇಶದ ಹುಟ್ಟುವಳಿಯ ಬಹುಭಾಗ ಪ್ರತಿ ವರ್ಷವೂ ಇಂಗ್ಲೆಂಡಿಗೆ ಸಾಗುತ್ತಿತ್ತು; ರಾಷ್ಟ್ರೀಯ ಬಂಡವಾಳ ಬರಿದಾಗುತ್ತಿತ್ತು. ಇಂಗ್ಲೆಂಡಿನ ಜನರಿಗೆ ಇದರ ಅರಿವಿರಲಿಲ್ಲ. ಆದ್ದರಿಂದ ದಾದಾಭಾಯಿ ಭಾರತದ ಜನರ ಭಯಂಕರವಾದ ದಾರಿದ್ರ್ಯವನ್ನೂ, ಕಷ್ಟಸ್ಥಿತಿಯನ್ನೂ, ಅಧಿಕಾರಿಗಳ ಅಸಡ್ಡೆಯನ್ನೂ ದುಂದನ್ನೂ ಸಿದ್ಧಾಂತ ಮಾಡಿ ತೋರಿಸುವ ಪ್ರಯಾಸಕರವಾದ ಕಾರ್ಯದಲ್ಲಿ ತೊಡಗಿದನು. ಈ ಕೆಲಸಕ್ಕೆ ಬೇಕಾದ ಗುಣಗಳೆಂದರೆ—ವಿವರಗಳನ್ನು ಪರಿಶೀಲಿಸುವುದರಲ್ಲಿ ತಾಳ್ಮೆ, ವಿಷಯ ಸಂಶೋಧನೆಯಲ್ಲಿ ಬುದ್ಧಿವಂತಿಕೆ, ಅಂಕಿ ಅಂಶಗಳನ್ನು ತಕ್ಕ ಕ್ರಮದಲ್ಲಿ ಜೋಡಿಸುವುದರಲ್ಲಿ ವಿಶೇಷವಾದ ತಿಳಿವಳಿಕೆ, ಕೌಶಲ ಮತ್ತು ತರ್ಕಬದ್ಧವಾದ ಪರ್ಯಾಲೋಚನೆ. ಭಾರತದ ಪುಣ್ಯವಿಶೇಷದಿಂದ ದಾದಾಭಾಯಿಯಲ್ಲಿ ಈ ಗುಣಗಳೆಲ್ಲ ಇದ್ದವು. ಅವನಿಗೆ ಕೆಲಸ ಮಾಡುವುದರಲ್ಲಿ ಅಮಿತವಾದ ಉತ್ಸಾಹವಿತ್ತು. ಅವನ ಮನಸ್ಸು ತನ್ನ ವ್ಯಾಪಾರಕ್ಕಿಂತ ಹೆಚ್ಚಾಗಿ ದೇಶದ

ಉತ್ಪನ್ನಕ್ಕೆ ಸಂಬಂಧಪಟ್ಟ ಆಧಾರಾಂಶಗಳನ್ನು ಪರೀಕ್ಷಿಸುವುದರಲ್ಲಿಯೂ ಪ್ರಜಾಸಮುದಾಯದಲ್ಲಿ ಪ್ರತಿಯೊಬ್ಬನ ಆದಾಯವನ್ನು ಗೊತ್ತು ಹಚ್ಚುವುದರಲ್ಲಿಯೂ ಲೀನವಾಗಿತ್ತು. ಆಡಳಿತದ (ಹಣಕಾಸಿನ ಮತ್ತು ಇತರ) ತಳಪಾಯವೆಲ್ಲ ಒಂದು ವಸ್ತುವನ್ನು ಆಧರಿಸಿ ನಿಂತಿದೆ,— ಬಂಡವಾಳ, ಕೂಲಿ, ಕೈಗಾರಿಕೆಗಳ ಫಲವಾದ ದೇಶದ ಹುಟ್ಟುವಳಿಯನ್ನು,—ಅವಲಂಬಿಸಿ ನಿಂತಿದೆ.

ಈ ವಿಷಯಕ್ಕೆ ಸಂಬಂಧಪಟ್ಟ ಸರಕಾರೀ ದಾಖಲೆಗಳು ಅಂಕಿ ಅಂಶಗಳನ್ನು ತಕ್ಕಪ್ರಮಾಣದಲ್ಲಿ ಒದಗಿಸಿರಲಿಲ್ಲ; ಪ್ರಕಟಿಸಿದ ಅಂಕಿ ಅಂಶಗಳು ತಪ್ಪು ಅಭಿಪ್ರಾಯವನ್ನು ಕೊಡುತ್ತಿದ್ದವು. ವಿಷಯವನ್ನು ನಿರ್ಧರಿಸಲು ದಕ್ಷನಾದ ಗಣಿತಶಾಸ್ತ್ರಜ್ಞನು ಅಪೇಕ್ಷಿಸುವ ಅಂಕಿ ಅಂಶಗಳಕಡೆಗೆ ಗಮನವನ್ನು ಕೊಡದೆಯೆ ಸರ್ಕಾರದ ವರದಿಗಳು ತಯಾರಾಗಿದ್ದವು. ಸರಕಾರದ ರೀತಿ ಹೀಗಿದ್ದರೆ ಈ ವಿಷಯದಲ್ಲಿ ಸಾರ್ವಜನಿಕ ಮೂಲಗಳು ಯಾವವೂ ಇರಲಿಲ್ಲವೆನ್ನಬೇಕು. ಇಂಡಿಯದ ವಿಶ್ವವಿದ್ಯಾನಿಲಯಗಳಲ್ಲಿ ಅರ್ಥಶಾಸ್ತ್ರ ಆಗಿನ್ನೂ ಪಠ್ಯ ವಿಷಯವಾಗಿರಲಿಲ್ಲ. ಆ ವಿಷಯದ ಮೇಲೆ ಪುಸ್ತಕಗಳೂ ಅಪರೂಪ. ೧೮೭೦ ರಲ್ಲಿ, ದೇಶದ ಕೃಷಿ, ಖನಿಜ ಮತ್ತು ಇತರ ರಾಷ್ಟ್ರೀಯ ಸಂಪತ್ತುಗಳಿಗೆ ಸಂಬಂಧಿಸಿದ ಅಂಕಿ ಅಂಶಗಳನ್ನು ಪ್ರಕಟಿಸುತ್ತಿದ್ದ ಪತ್ರಿಕೆ ಇಂಡಿಯದಲ್ಲಿ ಒಂದೇ ಒಂದು ಇತ್ತು: ರಾಬರ್ಟ್ ನೈಟ್ ಎಂಬಾತನಿಂದ ಸಂಪಾದಿತವಾದ 'ಇಂಡಿಯನ್ ಈಕಾನೊಮಿಸ್ಟ್'. ದಾದಾಭಾಯಿಗೆ ಬೇಕಾದ ವಿಷಯಗಳು ಅದರಲ್ಲಿ ದೊರೆಯಲಿಲ್ಲ. ಸಾಗುವಳಿಯಲ್ಲಿರುವ ಭೂಮಿಯ ವಿಸ್ತೀರ್ಣಕ್ಕೆ ಸಂಬಂಧಪಟ್ಟ ವಿವರಗಳು ದೊರೆಯಲಿಲ್ಲ; ಬೇರೆ ಬೇರೆ ಬೆಳೆಗಳಿಗೆ ಸಂಬಂಧಪಟ್ಟಂತೆ ಎಕರೆಗೆ ಸರಾಸರಿ ಉತ್ಪತ್ತಿಯ ಅಂದಾಜುಗಳೂ ಇರಲಿಲ್ಲ; ಬೆಲೆಯ ಅಂಕಿ ಅಂಶಗಳ ಪಟ್ಟಿಗಳು ಇದ್ದರೂ ಅವು ಅಪೂರ್ಣವಾಗಿದ್ದವು; ಅಲ್ಲದೆ ಅಮುಖ್ಯವಾದ ಬೆಳೆಗಳಿಗೆ ಸಂಬಂಧಪಟ್ಟ ಪಟ್ಟಿಗಳು ಕರಾರುವಾಕ್ಕಾಗಿರಲಿಲ್ಲ.

ಇಷ್ಟೆಲ್ಲ ತೊಂದರೆಗಳಿದ್ದರೂ ನಮ್ಮ ಸಂಶೋಧಕನು ಕೆಲಸವನ್ನು ಕೈಬಿಡಲಿಲ್ಲ. ನಾನಾ ಕಡೆಗಳಿಂದ ಸಾಧ್ಯವಿದ್ದ ವಿಷಯಗಳನ್ನೆಲ್ಲ ಸಂಗ್ರಹಿಸಿ, ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಭಾರತೀಯನ ಸರಾಸರಿ ವಾರ್ಷಿಕ

ಆದಾಯ ೪೦ ಷಿಲಿಂಗ್‌ಗಳು ಮಾತ್ರ ಅಥವಾ ಸ್ಥೂಲವಾಗಿ ರೂ. ೨೦ ಗಳು ಮಾತ್ರ ಎಂಬ ನಿರ್ಣಯಕ್ಕೆ ಬಂದನು.

ಆ ಕಾಲದಲ್ಲಿ ದೇಶದ ಒಳಗಾಗಲಿ ಹೊರಗಾಗಲಿ ಯಾವ ಗಲಭೆಯೂ ಇರಲಿಲ್ಲ. ಆದರೂ ಆದಾಯದಲ್ಲಿ ಕೊರತೆಯಾಗಿ ಹೊಸ ತೆರಿಗೆಗಳನ್ನು ಹಾಕಲಾಗುತ್ತಿತ್ತು. ರಾಜ್ಯದ ಹುಟ್ಟುವಳಿ ಹೆಚ್ಚಿತ್ತು, ಆದರೆ ವೆಚ್ಚ ಅದಕ್ಕಿಂತಲೂ ಹೆಚ್ಚಾಗಿ ಬೆಳೆದಿತ್ತು. ರಾಜ್ಯದ ಹಣಕಾಸಿನ ಸ್ಥಿತಿಯನ್ನು ತನಿಖೆ ಮಾಡುವಂತೆ ಕೇಳಲು ಸರಿಯಾದ ಕಾರಣ ಒದಗಿ ಬಂದಿತ್ತು. ದಾದಾಭಾಯಿ ಮತ್ತು ನವರೋಜಿ ಫರ್ದೂನ್‌ಜಿ ಇವರುಗಳ ಪ್ರೇರಣೆಯಿಂದ, ಅಸೋಸಿಯೇಷನ್ನಿನ ಬೊಂಬಾಯಿ ಶಾಖೆಯು ಇಂಡಿಯಾದ ಹಣಕಾಸಿನ ಸ್ಥಿತಿಯನ್ನು ಸರಿಯಾದ ತಳಹದಿಯ ಮೇಲೆ ಇಡಬೇಕೆಂದು ಪ್ರಾರ್ಥಿಸಿ, ಸೆಕ್ರೆಟರಿ ಆಫ್ ಸ್ಟೇಟಿಗೆ ಅರ್ಜಿಯನ್ನು ಕಳಿಸಿತು. ಅರ್ಜಿಯ ಪರವಾಗಿ ಬೆಂಬಲವನ್ನು ಪಡೆಯಲು ನವರೋಜಿ ಫರ್ದೂನ್ಜಿಯು ಇಂಗ್ಲೆಂಡಿಗೆ ಪ್ರಯಾಣಮಾಡಿದನು.

ಈಸ್ಟ್ ಇಂಡಿಯಾ ಅಸೋಸಿಯೇಷನ್ ಇದೇ ಸಂದರ್ಭದಲ್ಲಿ ಪರಿಸ್ಥಿತಿಯನ್ನು ಪರಿಶೀಲಿಸುತ್ತಿತ್ತು. ದಾದಾಭಾಯಿ ತನ್ನ ಪ್ರಬಂಧವನ್ನು ಓದಿದ ಮೇಲೆ ಸಂಸ್ಥೆಯ ಅಧ್ಯಕ್ಷನಾದ ಸರ್ ಚಾರ್ಲ್ಸ್ ಟ್ರೆವೆಲಿಯನ್ ಅದೇ ವಿಷಯವನ್ನು ಕುರಿತು ವಿಶದವಾದ ಉಪನ್ಯಾಸವನ್ನು ಮಾಡಿದನು. ಆತನು ಇಂಡಿಯಾದ ಆಡಳಿತ ವರ್ಗದಲ್ಲಿ ಹನ್ನೆರಡು ವರ್ಷ ಕಾಲ ಇದ್ದನು; ಆ ಮೇಲೆ ಬ್ರಿಟಿಷ್ ಖಜಾನೆ ಖಾತೆಯಲ್ಲಿ ೧೯ ವರ್ಷಗಳನ್ನು ಕಳೆದಿದ್ದನು. ಆಗ ಮದ್ರಾಸ್ ಗವರ್ನರಾಗಿಯೂ ಕೊನೆಯಲ್ಲಿ ಇಂಡಿಯಾ ಸರಕಾರದ ಹಣಕಾಸಿನ ಮಂತ್ರಿಯಾಗಿಯೂ ನೇಮಕ ಹೊಂದಿದನು. ಹೀಗೆ ಅಪೂರ್ವವಾದ ಅನುಭವವುಳ್ಳ ಆತನು ನಿಜವಾಗಿ ಉತ್ಕಟ ಸ್ಥಿತಿ ಉಂಟಾಗಿದೆಯೆಂದು ಅಭಿಪ್ರಾಯಪಟ್ಟನು; ಬೊಂಬಾಯಿ ನಿವಾಸಿಗಳ ಅರ್ಜಿ ಸ್ವಾಗತಾರ್ಹವಾಗಿವೆಯೆಂದನು. ಅವರು ಪಾರ್ಲಿಮೆಂಟನ್ನು ನ್ಯಾಯಬದ್ಧ ರೀತಿಯಲ್ಲಿ ಕರ್ತವ್ಯಪರರಾಗಿ ಪ್ರಾರ್ಥಿಸಿದ್ದಾರೆ; ಅವರ ದೂರುಗಳನ್ನು ಮರ್ಯಾದೆಯಿಂದ ಕೇಳತಕ್ಕದ್ದು ಎಂದು ನುಡಿದನು. ಹಣಕಾಸಿನ ಈ ಪ್ರವೀಣನು ದಾದಾಭಾಯಿ ಗೃಹವೆಚ್ಚಗಳನ್ನು 'ಪ್ರೊಗದಿ', 'ಐಶ್ವರ್ಯದ ಸೂರೆ' 'ರಾಜಕೀಯ ಹಣದ ರವಾನೆ' ಎಂದು ವಿವರಿಸಿದ್ದನ್ನು ಒಪ್ಪಲಿಲ್ಲ. ವಿದೇಶೀ ಆಡಳಿತದ ಪರಿಣಾಮ

ವಾಗಿ ದೇಶ ಬಡವಾಗುತ್ತಿದೆ ಎನ್ನುವ ಮಾತನ್ನೂ ಒಪ್ಪಲಿಲ್ಲ. ಗೃಹ ವೆಚ್ಚ ಗಳೆಂದರೇನು? ಬಹು ಮಟ್ಟಿಗೆ, ಇಂಡಿಯಾಕ್ಕೆ ಒದಗಿಸಿದ ಸರಕುಗಳು; ಇಂಗ್ಲೆಂಡಿನಲ್ಲಿ ತೆಗೆದ ಸಾಲದ ಮೇಲಿನ ಬಡ್ಡಿ ಮತ್ತು ವಿರಾಮ ವೇತನ ಗಳು; ಇವು ನ್ಯಾಯವಾದ ವೆಚ್ಚಗಳಲ್ಲವೆ? ಎಂದು ಕೇಳಿ, ವಿದೇಶೀ ಆಡ ಳಿತದಲ್ಲಿ ಕೆಲವು ಕೆಡುಕುಗಳೂ ಇವೆ ಎಂದೂ ಒಪ್ಪಿಕೊಂಡನು.

ಸಂಬಳಗಳ ಮತ್ತು ರಜಾಭತ್ಯಗಳ ಸಂಬಂಧದಲ್ಲಿಯೂ, ವರ್ಷದಲ್ಲಿ ಸುಮಾರು ಆರು ತಿಂಗಳ ಕಾಲ ಗಿರಿವಸತಿಗಳಲ್ಲಿ ನಾನಾ ಅಧಿಕಾರಿಗಳು ಅಧಿಕ ಸಂಖ್ಯೆಯಲ್ಲಿ ಸೇರುವುದರಿಂದಲೂ ಅತಿಯಾದ ದುಂದು ನಡೆಯು ತ್ತಿತ್ತು. ಹುಟ್ಟುವಳಿಯ ಸುಮಾರು ಮೂರನೇ ಒಂದು ಭಾಗವನ್ನು ಆಕ್ರ ಮಿಸುತ್ತಿದ್ದ ಮಿಲಿಟರಿ ವೆಚ್ಚವು, ಯೂರೋಪಿನ ಮಿಲಿಟರಿ ರಾಜಪ್ರಭುತ್ವ ಗಳ ಸಾಮಾನ್ಯ ಮಿಲಿಟರಿ ವೆಚ್ಚವನ್ನು ಮೀರಿಸಿತ್ತು; ಇಂಗ್ಲೆಂಡು ಸ್ವದೇಶದ ಮತ್ತು ತನ್ನ ಎಲ್ಲ ವಸಾಹತುಗಳ (ಕೆನಡವೂ ಸೇರಿ) ಭದ್ರತೆಗಾಗಿ ಖರ್ಚು ಮಾಡುತ್ತಿದ್ದ ವೆಚ್ಚಕ್ಕಿಂತಲೂ ಹೆಚ್ಚಾಗಿತ್ತು. ಪಬ್ಲಿಕ್ ವರ್ಕ್ಸ್ ಇಲಾಖೆ ಯಲ್ಲೂ ಅತಿಯಾದ ವೆಚ್ಚ ನಡೆಯುತ್ತಿತ್ತು.

ಕೆಲವು ದಿನಗಳಲ್ಲಿಯೆ, ಇಂಡಿಯದ ಹಣಕಾಸಿನ ಸ್ಥಿತಿಯನ್ನು ವಿಚಾರಿ ಸುವುದಕ್ಕಾಗಿ ಪಾರ್ಲಿಮೆಂಟಿನ ಸಮಿತಿಯೊಂದು ನೇಮಕವಾಯಿತು. ಇದು ದಾದಾಭಾಯಿ ಹೆಮ್ಮೆ ಪಡಬಹುದಾದ ವಿಷಯವೇ. ಅವನು ಸಮಿತಿಯ ಪರಿಶೀಲನೆಗಾಗಿ ೧೬,೦೦೦ ಪದಗಳುಳ್ಳ ಪತ್ರವನ್ನು ಅರ್ಪಿಸಿದನು.

ದಾದಾಭಾಯಿ ಅಂಕಿ ಅಂಶಗಳ ಸಂಗ್ರಹಣದಲ್ಲಿ ನಿಪುಣನಾಗಿದ್ದರೂ ಪಾರ್ಲಿಮೆಂಟರಿ ಸಮಿತಿಗಳ ಕಾರ್ಯ ವಿಧಾನಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಅನನುಭವಿಯಾಗಿದ್ದನು. ಆದ್ದರಿಂದ ಸೆಲೆಕ್ಟ್ ಕಮಿಟಿಯ ಮುಂದೆ, ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನ ಪರವಾಗಿ, ರುಜುವಾತು ಕೊಡಲು ಹೋದ ಮೊದಲ ದಿವಸ, ಸಮಿತಿಯವರ ಮನವೊಪ್ಪುವಂತೆ ನುಡಿಯಲು ಸಮರ್ಥನಾ ಗಲಿಲ್ಲ. ಆದರೆ ಮರುದಿವಸ, ಫಾಸೆಟ್ ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರ ಕೊಡುತ್ತ ತಾನು ಹೇಳಬೇಕೆಂದಿರುವುದನ್ನೆಲ್ಲ ವ್ಯಕ್ತಪಡಿಸಿದನು. ಸೆಲೆಕ್ಟ್ ಕಮಿಟಿಯ ವರದಿಯನ್ನು ಕುತೂಹಲದಿಂದ ನಿರೀಕ್ಷಿಸಿಕೊಂಡಿರಲಾಗಿತ್ತು.

ಆದರೆ ೧೮೭೪ರ ಆದಿಭಾಗದಲ್ಲಿ ಸರಕಾರ ಸೋಲಿಗೆ ಒಳಗಾದ್ದರಿಂದ ಪಾರ್ಲಿಮೆಂಟು ವಿಸರ್ಜನೆಯಾಯಿತು; ಆದರಿಂದ ನೇಮಿತವಾದ ಸಮಿತಿಯೂ ರದ್ದಾಯಿತು.

## ೧೨. ಮಹಾರಾಜನ ಸಹಾಯಕ್ಕೆ

ಬರೋಡಾಕ್ಕೆ ಸಮೀಪದಲ್ಲಿರವ ಪಾದ್ರ ಎಂಬ ಸ್ಥಳದಲ್ಲಿ, ಚಿಕ್ಕ ದರಿದ್ರ ಮನೆಯೊಂದರಲ್ಲಿ,ಬರೋಡಾದ ರಾಜಮನೆತನಕ್ಕೆ ಸೇರಿದ ಮನುಷ್ಯನೊಬ್ಬನು ಸೆರೆಯಾಗಿ ಬಿದ್ದಿದ್ದನು. ಅವನು ಪ್ರತಿಕ್ಷಣವೂ ತನ್ನ ಸೋದರನ ಸಾವನ್ನು ಹಾರೈಸುತ್ತಿದ್ದನು. ಸೋದರ ಖಂಡೇರಾಯನು ರಾಜನಾಗಿ ಆಳುತ್ತಿದ್ದನು. ಅವನನ್ನು ಮಾಟ, ವಿಷ, ಖೂನಿ ಹೀಗೆ ಯಾವುದಾದರೂ ಒಂದು ಬಗೆಯಿಂದ ನಾಶಮಾಡಬೇಕೆಂದು ಪಿತೂರಿ ನಡಸುತ್ತಿದಾನೆಂಬ ಸಂಶಯದ ಮೇಲೆ ಇವನು ಬಂಧನಕ್ಕೊಳಗಾಗಿದ್ದನು. ಇವನ ಮಿತ್ರರು ಇಂಡಿಯಾ ಸರಕಾರಕ್ಕೂ ಸ್ಟೇಟ್‌ಸೆಕ್ರೆಟರಿಗೂ ಅರ್ಜಿಹಾಕಿಕೊಂಡರು. ಏನೂ ಪ್ರಯೋಜನವಾಗಲಿಲ್ಲ. ಅಣ್ಣನ ಸಾವಿನಿಂದಲೇ ಇವನ ಬಿಡುಗಡೆಯಾಗಬೇಕಿತ್ತು.

೧೮೭೦ರ ನವೆಂಬರ್ ೨೫ ರಲ್ಲಿ ಬಂದಿಯು ಎಂದಿಗಿಂತ ಹೆಚ್ಚಾಗಿ ಒದ್ದಾಡುತ್ತಿದ್ದನು. ರಾತ್ರಿಯೆಲ್ಲ ಹುಚ್ಚು ಹುಚ್ಚಾಗಿ ಮಾತಾಡುತ್ತ ನಿದ್ದೆಯಿಲ್ಲದೆ ಸುಸ್ತಾಗಿದ್ದನು. ಅಷ್ಟು ಹೊತ್ತಿಗೆ ಬಾಗಿಲನ್ನು ತಟ್ಟಿದ ಸದ್ದಾಯಿತು. ಹೊರಗಿನಿಂದ 'ಸರ್ಕಾರ್' ಎಂಬ ಕೂಗು ಕೇಳಿಸಿತು.

ಬಂದಿಯಾಗಿದ್ದ ಮಲ್ಹಾರ್‌ರಾವ್ ಗಾಯಕವಾಡನು, "ಸರ್ಕಾರ್! ಏನು ಅಣಕವಿದು?" ಎಂದು ತನ್ನಲ್ಲೀ ಗೊಣಗುತ್ತ, ಮರುಕ್ಷಣದಲ್ಲಿ ಹೊತ್ತಿಗೆ ಮುಂಚೆ ಕರೆಯಲು ಬಂದಿರುವ ಕಾರಣವನ್ನು ಊಹಿಸುತ್ತ. ಮುಂದೆ ಹೆಜ್ಜೆಯಿಟ್ಟು, 'ಬಾ ಒಳಗೆ' ಎಂದನು.

ಬಂದಿದ್ದವನು ಬರೋಡಾದ ಬ್ರಿಟಿಷ್ ರೆಸಿಡೆಂಟನ ಕಡೆಯ ಅಧಿಕಾರಿ. ಖಂಡೇರಾವ್ ಮೃತನಾದನೆಂದೂ, ವಿಕ್ಟೋರಿಯಾ ರಾಣಿಯ ಕಾಯಂ ಆಜ್ಞೆಗೊಳಪಟ್ಟು ಇಂಡಿಯಾ ಸರಕಾರ ರಾಜ ಬಂದಿಯನ್ನು ಗಾದಿಗೆ ಕೂರಿಸಬೇಕೆಂದಿದೆಯೆಂದೂ ತಿಳಿಸಲು ಬಂದಿದ್ದನು. ಮಲ್ಹಾರರಾವ್

ಶಾಂತನಾಗಿಯೆ ಸುದ್ದಿಯನ್ನು ಕೇಳಿದನು.

ಇವನು ಗಾದಿಯನ್ನೇರಿದಾಗ ಬರೋಡಾದಲ್ಲಿ ರಾಜ್ಯಾಡಳಿತ ಅಸಮರ್ಪಕತೆಯ ಪರಮಾವಧಿಯನ್ನು ಮುಟ್ಟಿತ್ತು. ಸುಲಿಗೆ ಕೋರರ ಗುಂಪೊಂದು ಅಧಿಕಾರಗಳನ್ನು ಚಲಾಯಿಸುತ್ತಿತ್ತು. ಅವರ ದುರಾಡಳಿತದಿಂದ ದುಃಸ್ಥಿತಿಗೊಳಗಾಗಿ ಕಂಗೆಟ್ಟ ಜನ ಪರಿಹಾರಕ್ಕಾಗಿ ಮೊರೆಯಿಡುತ್ತಿದ್ದರು.

'ಕಿರೀಟವನ್ನು ಧರಿಸಿದ ತಲೆ ಕ್ಲೇಶಕ್ಕೊಳಗಾಗುತ್ತದೆ'ಯೆಂದು ಕವಿ ಹೇಳುತ್ತಾನೆ. ಆದರೆ ಮಲ್ಹಾರರಾವ್‌ಗೆ ತಲೆಯಿತ್ತೆ? ಒಳ್ಳೆಯ ಬುದ್ಧಿಯಿತ್ತೆ? ಸರ್ವೇಸಾಧಾರಣವಾದ ಬುದ್ಧಿ ಅವನಲ್ಲಿತ್ತು; ವಿವೇಚನೆಯೂ ಇಲ್ಲದಿರಲಿಲ್ಲ. ದೀರ್ಘಾವಧಿಯ ಸೆರೆಯಿಂದ ಅವನ ಮನಸ್ಸು ಅಸ್ತಿಮಿತವಾಗಿತ್ತು. ಈ ಸ್ಥಿತಿಯಲ್ಲಿ ಗಾದಿಯನ್ನು ಏರುತ್ತಲೇ, ಅವನನ್ನು ಬೇರೆಬೇರೆ ಪಂಗಡಗಳವರು ಬೇರೆಬೇರೆ ಮಾರ್ಗಗಳಲ್ಲಿ ಎಳೆಯಲಾರಂಭಿಸಿದರು. ಬಂಧನದಲ್ಲಿದ್ದಾಗ ಸಹಾಯಕರಾಗಿದ್ದ ಜನ ಈಗ ನಂಬಿಕೆಯ ಮತ್ತು ಜವಾಬ್ದಾರಿಯ ಸ್ಥಾನಗಳಿಗೆ ಆಸೆಪಟ್ಟರು. ತನ್ನನ್ನು ಹಿಂಬಾಲಿಸಿಕೊಂಡಿದ್ದ ಜನಕ್ಕೆ ಸಹಾಯ ಮಾಡುವುದು ಕರ್ತವ್ಯವೆಂದು ಮಲ್ಹಾರರಾವ್ ತಿಳಿದನು. ಕಾಲವಾದ ರಾಜನ ರಾಣಿಯೊಬ್ಬಳು ಗರ್ಭವತಿಯಾಗಿದ್ದಳು. ಅವಳಿಗೆ ಗಂಡು ಮಗುವಾಗಬಹುದೆಂಬ ನಿರೀಕ್ಷೆಯಿಂದ ರಾಣಿಗೆ ಆಸರೆಯಾಗಿ ದರ್ಬಾರಿನಲ್ಲಿ ಹೊಸದೊಂದು ಪಕ್ಷ ಹುಟ್ಟಿತ್ತು. ಎರಡು ಪಕ್ಷದವರನ್ನೂ ಸಮಾಧಾನ ಪಡಿಸುತ್ತ ಗಾಳಿ ಬಂದಾಗ ಎತ್ತ ಕಡೆಗೆ ಎಂದರೆ ಅತ್ತ ಕಡೆಗೆ ತೂರಿಕೊಳ್ಳುವ ಮೂರನೆಯ ಪಕ್ಷವೂ ಒಂದಿತ್ತು.

ದೇಶೀಯ ಸಂಸ್ಥಾನಗಳಲ್ಲಿ ಈ ಬಗೆಯ 'ಖಟ್‌ಪಟ್' ಸಾಮಾನ್ಯವಾಗಿತ್ತು. ಮಲ್ಹಾರರಾವ್ ಒಳಸಂಚುಗಳನ್ನೆಲ್ಲ ತಿಳಿಯುವಷ್ಟು ಸಮರ್ಥನಾಗಿದ್ದನು. ಆದರೆ ಅತಿಯಾದ ಸ್ತ್ರೀವ್ಯಾಮೋಹಕ್ಕೆ ಬಲಿಯಾಗಿದ್ದನು. ಚೆಲುವೆಯರ ತಂದೆತಾಯಿಯರೂ ತಲೆಹಿಡುಕರೂ ಸುಲಿಗೆಕಾರರೂ ಸುಲಭವಾಗಿ ಮಹಾರಾಜನನ್ನು ಆಶ್ರಯಿಸಿ ಲಾಭಕರವಾದ ಸ್ಥಾನಗಳನ್ನು ಆಕ್ರಮಿಸಿಕೊಂಡರು. ರಾಜಾದಾಯವನ್ನು ಸ್ವಂತ ಬೊಕ್ಕಸದ ಹಣದಂತೆ ಗಣಿಸಲಾಗಿತ್ತು. ರಾಜ್ಯದ ವೆಚ್ಚಕ್ಕೆ ಕಡಮೆ ಬಿದ್ದ ಹಣವನ್ನು ಮಿತಿಮೀರಿದ

ತೆರಿಗೆಯಿಂದಲೂ ಸರದಾರರನ್ನು ಸುಲಿಗೆ ಮಾಡುವುದರಿಂದಲೂ ಭರ್ತಿಮಾಡ ಲಾಗುತ್ತಿತ್ತು. ಈ ದಬ್ಬಾಳಿಕೆಯಿಂದ ತಪ್ಪಿಸಿಕೊಳ್ಳಲು ಅನೇಕ ಜನ ಊರು ಬಿಟ್ಟು ಹೋದರು. ನ್ಯಾಯಾಡಳಿತದ ರೀತಿ ಹಾಸ್ಯಾಸ್ಪದನಾಗಿತ್ತು; ಹೆಚ್ಚಾಗಿ ಹಣ ಕೊಡುವವರ ಕಡೆ ನಿರ್ಣಯ ಓಲುತ್ತಿತ್ತು.

ತಡೆಯಿಲ್ಲದ ಅಧಿಕಾರದಿಂದಲೂ ಮಿತಿಯಿಲ್ಲದ ಭೋಗದಿಂದಲೂ ಪ್ರಮತ್ತನಾದ ಮಲ್ಹಾರರಾವ್‌ಗೆ ದಿನೇ ದಿನೇ ರಾಜ್ಯವು ಅಧೋಗತಿಗೆ ಇಳಿಯುತ್ತಿರುವದರ ಅರಿವಾಗಲಿಲ್ಲ.

ಪತಿತನಾದ ರಾಜನನ್ನು ದುಷ್ಕರ್ಮಫಲ ನಿಧಾನವಾಗಿ ಅಟ್ಟಿ ಬರುತ್ತಿತ್ತು. ಬರೋಡಾದಲ್ಲಿ ದರಬಾರಿನ ಕಾಲದಲ್ಲಿ ರಾಜನ ಎಡಪಕ್ಕದಲ್ಲಿ ಬೊಂಬಾಯಿನ ಗವರ್ನರಿಗೆ ಆಸನವನ್ನು ಏರ್ಪಡಿಸುವುದು ಪದ್ಧತಿಯಾಗಿತ್ತು. ಬೇರೆ ಯಾವ ದರಬಾರಿನಲ್ಲಿಯೂ ಈ ಪದ್ಧತಿ ಇರಲಿಲ್ಲ. ೧೮೭೧ ರಲ್ಲಿ ಮಲ್ಹಾರರಾವ್ ನಡಸಿದ ದರಬಾರಿನಲ್ಲಿ ಅವನ ಎಡಕ್ಕೆ ಕುಳಿತ ಬೊಂಬಾಯಿ ಗವರ್ನರ್ ಸರ್ ಸೀಮೌರ್ ಫಿಟ್‌ಜೆರಲ್ಡ್, ರಾಣಿಯ ಪ್ರತಿನಿಧಿಯಾದ ತನಗೆ, ತಕ್ಕ ಗೌರವ ದೊರೆಯಲಿಲ್ಲವೆಂದು ಭಾವಿಸಿದನು. ರೆಸಿಡೆಂಟನಿಂದ ಮಹಾರಾಜನಿಗೆ ಬಂದ ಯಾದ್ (ಪತ್ರ) ನಲ್ಲಿ ಬೊಂಬಾಯಿ ಗವರ್ನರ್ ತನ್ನ ದರಬಾರಿನಲ್ಲಿ ಬರೋಡಾದ ಗಾಯಕವಾಡನಿಗೆ ಯಾವ ರೀತಿಯ ಮರ್ಯಾದೆಯನ್ನು ತೋರಿಸುತ್ತಾನೋ ಅದೇ ರೀತಿಯ ಮರ್ಯಾದೆಯನ್ನು ಗಾಯಕವಾಡನೂ ತನ್ನ ದರಬಾರಿನಲ್ಲಿ ಬೊಂಬಾಯಿ ಗವರ್ನರಿಗೆ, ಬಲದಲ್ಲಿ ಆಸನ ಏರ್ಪಡಿಸುವುದರ ಮೂಲಕ, ತೋರಿಸಬೇಕೆಂದು ನಮೂದಾಗಿತ್ತು. ಕ್ರುದ್ಧನಾದ ಮಹಾರಾಜನು ಈ ಏರ್ಪಾಡನ್ನು ಒಪ್ಪಲು ಸಿದ್ಧನಾಗಿರಲಿಲ್ಲ. ಆದರೆ ರಾಣಿಯ ಇಂಡಿಯಾ ಪ್ರತಿನಿಧಿಗಳು ಹಟತೊಟ್ಟಿದ್ದರು. ಈ ನಡುವೆ ಮಲ್ಹಾರರಾವ್‌ಗೆ ೧೮೭೨ ರ ನವೆಂಬರಿನಲ್ಲಿ, ಬೊಂಬಾಯಲ್ಲಿ ನಡೆಯುವ ವೈಸರಾಯರ ದರಬಾರಿಗೆ, ಆಹ್ವಾನ ಬಂತು. ತನ್ನ ಮರ್ಯಾದೆಗೆ ತಕ್ಕ ಸ್ಥಾನ ದೊರೆಯಲಾರದೆಂದು ಹೆದರಿ ಅವನು ಅಲ್ಲಿಗೆ ಹೋಗುವುದಿಲ್ಲವೆಂದು ನಿರ್ಧರಿಸಿದನು. ಹಾಗೆ ಮಾಡಿದರೆ ವೈಸರಾಯನ್ನು ಬೇಕೆಂದೇ ಅವಮಾನ ಪಡಿಸಿದಂತಾಗುವುದೆಂದು ದರಬಾರಿಗಳು ಹೆದರಿದರು. ಆದರೆ ಮಹಾರಾಜನು ತನ್ನ ನಿರ್ಧಾರವನ್ನು ಬದ

ಲಾಯಿಸಲು ಒಪ್ಪಲಿಲ್ಲ. ಆಗ ಕೆಲವರು ದರಬಾರಿಗಳು ಈ ವಿಷಯದಲ್ಲಿ ದಾದಾಭಾಯಿಯ ಸಲಹೆ ಕೇಳಬೇಕೆಂದು ಸೂಚಿಸಿದರು.

ದಾದಾಭಾಯಿ ಕೆಲವು ತಿಂಗಳುಗಳ ಹಿಂದೆ ತಾನೆ, ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನ ಕಾರ್ಯಗಳಿಗೆ, ಮಹಾರಾಜನ ಸಹಾಯ ಪಡೆಯುವುದಕ್ಕಾಗಿ ಬರೋಡಾಕ್ಕೆ ಹೋಗಿದ್ದನು; ಬರಿಗೈಯಲ್ಲೂ ಬಂದಿದ್ದನು. ಅವನಿಗೆ ದೇಶೀಯ ಸಂಸ್ಥಾನಗಳ ಘನತೆ ಗೌರವಗಳನ್ನು ಹೆಚ್ಚಿಸುವ ಆಸಕ್ತಿಯಿದೆಯೆಂದು ಮಹಾರಾಜನಿಗೆ ತಿಳಿದಿತ್ತು. ಬರೋಡಾದ ದರಬಾರಿಗಳು ದಿಕ್ಕು ತೋರದೆ ಕಷ್ಟದಲ್ಲಿದ್ದಾಗ ದಾದಾಭಾಯಿ ಇಂದೂರಿನಲ್ಲಿ ಇದ್ದನು. ಆದ್ದರಿಂದ ಅವರು ಅವನಿಗೆ ಹೇಳಿ ಕಳಿಸುವಂತೆ ಸಲಹೆ ಮಾಡಿದ್ದರು. ಮಲ್ಹಾರರಾವ್ ಅದಕ್ಕೆ ಒಪ್ಪಿದನು.

"ಮಹಾರಾಜ್", ಎಂದನು ದಾದಾಭಾಯಿ, "ನೀವು ದರಬಾರಿಗೆ ಹೋಗಲೇಬೇಕು; ಬೇರೆ ಮಾರ್ಗತೋರುವುದಿಲ್ಲ. ನೀವು ಬೇಕೆಂದೇ ಹಾಜರಾಗಲಿಲ್ಲವೆಂದು ವೈಸರಾಯ್ ತಿಳಿಯಬಾರದು."

"ಆದರೆ, ಹೋಗಬಾರದೆಂದು ನಾನು ನಿರ್ಧರಿಸಿದ್ದೇನೆ. ವೈಸರಾಯ್‌ಗೆ ಬೇಸರವಾಗದ ರೀತಿಯಲ್ಲಿ, ನನ್ನ ನಿರ್ಧಾರವನ್ನು ನಡಸುವ ಮಾರ್ಗವನ್ನು ಕಂಡುಹಿಡಿಯುವುದಕ್ಕಾಗಿ ನಿಮ್ಮನ್ನು ಇಲ್ಲಿಗೆ ಕರೆಸಿರುವುದು."

" ನಾನು ಯಾವ ಮಾರ್ಗವನ್ನೂ ಕಾಣೆ, ಮಹಾರಾಜ್ " ಎಂದು ದಾದಾಭಾಯಿ ನಯವಾಗಿ ಆದರೂ ದೃಢವಾಗಿತಿಳಿಸಿದನು. "ಕೆಡುಕಾಗಬಹುದೆಂದು ತಿಳಿದಿರುವ ಕೆಲಸವನ್ನು ಮಾಡುವಂತ ನಿಮಗೆ ಹೇಳಲು ನನ್ನ ಮನಸ್ಸು ಒಪ್ಪುವುದಿಲ್ಲ."

ಅವನು ಮೌನವಾಗಿ, ಗಂಭೀರವಾಗಿ, ಹಿಂದಿರುಗಿದನು. ಮಹಾರಾಜನಿಗೆ ವಿನಾಶಕ್ಕೆ ಆ ಬುದ್ಧಿ ಬಂದಿದೆಯೆಂದು ತಿಳಿದ ದರಬಾರಿಗಳಲ್ಲೊಬ್ಬನು ದಾದಾಭಾಯಿಯನ್ನು ಅನುಸರಿಸಿ ಓಡಿ, ಅವನನ್ನು ಒಂದುಗಳಿಗೆ ನಿಲ್ಲಬೇಕಾಗಿಯೂ, ಬಂದಿರುವ ಅಪಾಯದಿಂದ ಪಾರುಮಾಡಲು ಏನಾದರೂ ಮಾರ್ಗವನ್ನು ಯೋಚಿಸಬೇಕಾಗಿಯೂ, ಬೇಡಿಕೊಂಡನು. ದಾದಾಭಾಯಿ ಒಂದು ಕಡೆ ಕುಳಿತನು. ಸ್ವಲ್ಪ ಹೊತ್ತಿನಲ್ಲಿಯೆ, ಅವನು ಮನಸ್ಸು ಮಾಡಿರುವಂತೆ ತೋರಿತು.

ಕೆಲವು ದಿನಗಳ ಹಿಂದೆ, ಮಹಾರಾಣೀ ಸಾಹೇಬಳು ಹೆಣ್ಣು ಮಗುವೊಂದನ್ನು ಕಾಲಕ್ಕೆ ಮುಂಚೆಯೆ ಹೆತ್ತಿದ್ದಳು. ಮಗು ಒಂದು ವಾರಕ್ಕಿಂತ ಹೆಚ್ಚುಕಾಲ ಬದುಕಲಿಲ್ಲ; ತಾಯಿ ಅಸ್ವಸ್ಥಳಾಗಿದ್ದಳು. ಈ ಸಂಗತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ದಾದಾಭಾಯಿ ಎರಡನೆಯ ಬಾರಿ ಮಹಾರಾಜನನ್ನು ನೋಡಲು ಹೋದನು. ಸಂತೋಷಭರಿತನಾದ ರಾಜನು "ಒಳ್ಳೇ ನೆಪವನ್ನು ಕಂಡು ಹಿಡಿದಿರುವಂತೆ ಕಾಣುತ್ತದೆ, ನನಗೆ ಅದನ್ನು ಬೇಗ ಹೇಳಬಾರದೇ ?" ಎಂದನು.

"ದರಬಾರಿಗೆ ಹೋಗಬೇಕೆಂದು ನಾನು ಸಲಹೆ ಮಾಡುತ್ತೇನೆ. ಹೋಗದಿರಲು ಏನಾದರೂ ಕಾರಣ ಹುಡುಕಬೇಕಾದರೆ, ಮಹಾರಾಣೀ ಸಾಹೇಬ್ ಮ್ಹಾಲಸಾಬಾಯಿಯ ಅಸ್ವಸ್ಥತೆಯಿದೆ; ಕಾಲಕ್ಕೆ ಮುಂಚೆ ಪ್ರಸವವಾದ್ದರಿಂದ ಆಕೆ ಅಸ್ವಸ್ಥಳಾಗಿದಾಳೆಂದೂ, ಮಗು ಕಾಲವಾದ್ದರಿಂದ ಆಕೆಯ ಸ್ಥಿತಿ ಕೇಡಾಗಿವೆಯೆಂದೂ, ಈ ಪರಿಸ್ಥಿತಿಯಲ್ಲಿ ದರಬಾರಿಗೆ ಹಾಜರಾಗಲು ಸಾಧ್ಯವಿಲ್ಲವಾಗಿದೆಯೆಂದೂ, ತಂತಿ ಕಳಿಸಿ."

ಮಹಾರಾಜನ ಮನಸ್ಸು ಹಗುರವಾಯಿತು. ತನ್ನ ದರಬಾರಿನಲ್ಲಿ ನಡೆಯತಕ್ಕ ಗೌರವದ ಬಗೆಗೆ, ಬೊಂಬಾಯಿ ಸರಕಾರ ಎತ್ತಿರುವ ಪ್ರಶ್ನೆಯ ವಿಚಾರದಲ್ಲಿ ಮಾಡಬೇಕಾದ್ದನ್ನು ಸೂಚಿಸುವಂತೆ ಕೇಳಿದನು.

"ಮಹಾರಾಜ್, ವೈಸರಾಯ್‌ಗೆ ಒಂದು, ಸ್ಟೇಟ್‌ಸೆಕ್ರೆಟರಿಗೆ ಒಂದು, ಹೀಗೆ ಎರಡು ವಿಜ್ಞಾಪನಾ ಪತ್ರಗಳನ್ನು ಕಳಿಸಿಕೊಡಿ" ಎಂದು ದಾದಾಭಾಯಿ ಹೇಳಿದನು.

"ನಿಮಗಿಂತ ಚೆನ್ನಾಗಿ ಅದನ್ನು ಯಾರು ತಯಾರಿಸಬಲ್ಲರು ? ನೀವು ಬರೆಯುವಿರಾ ?"

ದಾದಾಭಾಯಿ ಒಪ್ಪಿಕೊಂಡನು. ಅವನು ತಯಾರಿಸಿದ ಪತ್ರದಲ್ಲಿ, ಬರೋಡಾ ಸಂಸ್ಥಾನವು ಬಹುಹಿಂದಿನಿಂದ ಸಿಪಾಯಿ ದಂಗೆಯವರೆಗೂ ಬ್ರಿಟಿಷರಿಗೆ ಮಾಡಿದ ನಾನಾಸೇವೆಗಳನ್ನು ಸ್ಮರಿಸಿ, ಬ್ರಿಟಿಷರೊಡನೆ ಸಂಸ್ಥಾನದ ಸಂಬಂಧ ಮೊದಲಿನಿಂದಲೂ ವಿಶೇಷ ಮಧುರ ರೀತಿಯದೂ ಮತ್ತು ಬಹು ರಾಜಭಕ್ತಿಯುತವಾದುದೂ ಆಗಿವೆಯೆಂದು ತಿಳಿಸಿ, ಆ ಕಾರಣದಿಂದಲೆ ಸಂಸ್ಥಾನಕ್ಕೆ ವಿಶೇಷ ಮರ್ಯಾದೆಗಳನ್ನು ಉಳಿಸಿ ಕೊಟ್ಟಿದಾರೆಂದೂ, ದರಬಾರಿ

ನಲ್ಲಿ ರಾಜನು ಬಲಕ್ಕೆ ಕೂರುವುದು ಅಂಥ ಮರ್ಯಾದೆಗಳಲ್ಲಿ ಒಂದೆಂದೂ, ಉಲ್ಲೇಖಿಸಿದನು.

ಪ್ರಶ್ನೆಯನ್ನು ಪುನರ್ವಿಮರ್ಶೆ ಮಾಡುವುದು ಸಾಧ್ಯವಿಲ್ಲವೆಂದು ವೈಸ್ ರಾಯಿಂದ ಉತ್ತರ ಬಂತು. ದಾದಾಭಾಯಿ ತಯಾರಿಸಿದ ಇನ್ನೊಂದು ಪತ್ರ ೧೮೭೩ ರ ಜುಲೈ ತಿಂಗಳಲ್ಲಿ ಮಹಾರಾಜನಿಂದ ನೇರವಾಗಿ ಸ್ಟೇಟ್ ಸೆಕ್ರೆಟರಿಗೆ ರವಾನೆಯಾಯಿತು.

ಬರೋಡಾದಲ್ಲಿ ರಾಜ್ಯಾಡಳಿತ ತೀರ ಅಸಮರ್ಪಕವಾಗಿದ್ದುದರಿಂದ ಗಾಯಕವಾಡನ ಮೇಲೆ ಬಂದ ಆರೋಪಣೆಗಳನ್ನು ಪರೀಕ್ಷಿಸಲು ಸಾರ್ವಭೌಮ ಸರಕಾರ ಒಂದು ಸಮಿತಿಯನ್ನು ನೇಮಿಸಿತು. ರಾಜ್ಯವನ್ನು ವ್ಯವಸ್ಥೆಗೊಳಿಸಬೇಕೆಂಬ ಅರಿವು ಮಹಾರಾಜನಿಗೆ ಈಗ ಮೊದಲ ಬಾರಿಗೆ ಉಂಟಾಯಿತು. ಆದರ ಆ ಕೆಲಸ ಅವನಿಂದಾಗಲಿ ಅವನ ಮಂತ್ರಿಗಳಿಂದಾಗಲಿ ಸಾಧ್ಯವಾಗುವಂತಿರಲಿಲ್ಲ. ಅವನ ದೃಷ್ಟಿ ದಾದಾಭಾಯಿಯ ಮೇಲೆ ಬಿತ್ತು. ಮನೆ ಉರಿಯುತ್ತಿರುವ ಕಾಲದಲ್ಲಿ ಕರಕಳಿಸಿದಂತಾಯಿತು. ಆ ರೀತಿಯ ಅಧಿಕಾರ ಸ್ಥಾನವನ್ನು ಸ್ವೀಕರಿಸುವುದು ಅತಿಯಾಸೆ ಆದೀತೆಂದು ದಾದಾಭಾಯಿ ಅನುಮಾನಿಸಿದನು.

ಸರ್ ಬಾರ್ಟ್ಲ್ ಫ್ರಿಯರ್ ಮತ್ತು ಸರ್ ಅರ್‌ಸ್ಕಿನ್ ಪೆರ್ರಿ ಇವರುಗಳ ಸಲಹೆಯನ್ನು ಕೇಳಿದನು. ಸರ್ ಬಾರ್ಟ್ಲ್ 'ಬಹು ಕಷ್ಟವಾದ ಕೆಲಸ'ವನ್ನು ಕೈಕೊಂಡಂತೆ ಆಗುತ್ತದೆಯೆಂದು ಹೇಳಿದನು. ಒಳ್ಳೆಯ ಆಡಳಿತವನ್ನು ಸ್ಥಾಪಿಸುವುದಕ್ಕಾಗಿಯೂ ಗಾಯಕವಾಡನ ಮತ್ತು ಬ್ರಿಟಿಷರ ಹಿತಾಸಕ್ತಿಗಳನ್ನು ರಕ್ಷಿಸುವುದಕ್ಕಾಗಿಯೂ ಮಂತ್ರಿ ಪದವಿಗೆ ದಾದಾಭಾಯಿಗಿಂತ ಉತ್ತಮವಾದ ಆಯ್ಕೆ ಇರಲಾರದೆಂದು ಸರ್ ಅರ್‌ಸ್ಕಿನ್ ನುಡಿದನು. ಶೀಲಯುತರೂ ಉನ್ನತ ಶಿಕ್ಷಣ ಪಡೆದ ಪದವೀಧರರೂ ಆದ ಬ್ರಿಟಿಷ್ ಇಂಡಿಯದ ಪ್ರಜೆಗಳು, ಉತ್ತಮ ಆಡಳಿತದ ವ್ಯವಸ್ಥೆಗಾಗಿ, ಅವಕಾಶ ದೊರೆತಾಗ, ಸಂಸ್ಥಾನಗಳಿಗೆ ಸಹಾಯ ಮಾಡಬೇಕೆಂದು ದಾದಾಭಾಯಿ ಪದೇ ಪದೇ ಹೇಳಿದ್ದನು. ತನಗೇ ಅಂಥ ಅವಕಾಶ ಒದಗಿಬಂದಿರುವಾಗ ಅದನ್ನು ಬಿಡಬಹುದೆ?

ರಾಜರುಗಳು ಸಾಮಾನ್ಯವಾಗಿ ಚಂಚಲ ಚಿತ್ತರು. ಒಂದು ದಿನ

ಇದ್ದಕಿದ್ದಂತೆ ಮಹಾರಾಜನು, ನಿನ್ನ ಕಾಲದಲ್ಲಿ ಒಳ್ಳೇ ಪಾಠವನ್ನು ಕಲಿತೆ. ಒಂದೇ ಸ್ವಭಾವದವರು ಮಾತ್ರ ಒಟ್ಟಿಗೆ ಇರಬಲ್ಲರು. ನನ್ನ ಹಳೆಯ ದಿವಾನನೊಡನೆ ನಾನು ವ್ಯವಹರಿಸಬಲ್ಲೆ ...ಲಂಡನ್ನಿಗೆ ನಿನ್ನ ದಾರಿಯನ್ನು ನೀನು ನೋಡಿಕೋ! ಎಂದು ಹೇಳಬಹುದಲ್ಲವೆ?

ಮಹಾರಾಜನ ನಂಬಿಕೆಯೂ ಸಹಕಾರವೂ ಇರುವವರೆಗೆ ಬರೋಡ ಕ್ಕಾಗಿ ತನ್ನ ಕೈಲಾದದ್ದನ್ನೆಲ್ಲ ಮಾಡುತ್ತೇನೆ, ಅವು ಮಾಯವಾದರೆ, ಒಂದು ಕ್ಷಣವೂ ಅಲ್ಲಿ ನಿಲ್ಲುವುದಿಲ್ಲ ಎಂದು ಕೊಂಡನು. ಅಂತು, ಒಳ್ಳೆಯದಕ್ಕೋ ಕೆಟ್ಟದಕ್ಕೋ ದಾದಾಭಾಯಿ ನಿರ್ಧಾರ ಮಾಡಿ ಬರೋಡಾಕ್ಕೆ ಹೊರಟನು.

## ೧೩. ಮುಳ್ಳಿನ ಹಾಸಿಗೆ

೧೮೭೩ನೆಯ ಇಸವಿಯ ಕೊನೆಯ ವೇಳೆಗೆ ಬರೋಡಾದ ದಿವಾನ ನೆಂದು ಗೊತ್ತಾದ ನಮ್ಮ ನಾಯಕನು ರಾಜ್ಯಕ್ಕೆ ಸಂಬಂಧ ಪಟ್ಟ ಪತ್ರಗ ಳನ್ನೂ ದಫ್ತರಗಳನ್ನೂ ಪರಿಶೀಲಿಸುವುದರಲ್ಲಿ ಮುಳುಗಿದ್ದನು. ಇತ್ಯರ್ಥ ಕ್ಕಾಗಿ ಬಂದ ಪ್ರಶ್ನೆಗಳ ಪೂರ್ವೇತಿಹಾಸವನ್ನು ಸಂಶೋಧನೆ ಮಾಡುವುದು, ದಿನದಿನದ ವಿದ್ಯಮಾನಗಳನ್ನು ಗಮನಿಸುವುದು, ಆಡಳಿತದ ಯಂತ್ರವನ್ನು ಸರಿಪಡಿಸುವುದು, ಮುಂದಿನ ಯೋಜನೆಗಳನ್ನು ತಯಾರಿಸುವುದು,— ಬೆಳಗಿನಿಂದ ನಡು ರಾತ್ರಿಯವರೆಗೂ ಈ ಕೆಲಸಗಳು ಅವನ ಕಾಲವನ್ನು ತೆಗೆದುಕೊಳ್ಳುತ್ತಿದ್ದವು. ಆದರೆ ಮಹಾರಾಜನನ್ನು ಸುತ್ತುವರಿದ ಕುಯು ಕ್ತಿಯ ಜನರಿಂದ ಆಗುತ್ತಿದ್ದ ಕಿರಿಕಿರಿಕಾಟಗಳ ಮುಂದೆ, ನಾನಾವಿಷಯ ಗಳನ್ನು ಕುರಿತು ಸಮಜಾಯಿಷಿ ಕೇಳುತ್ತಿದ್ದ ರೆಸಿಡೆಂಟನ ಕಿರುಕುಳದ ಪತ್ರ ಗಳ ಮುಂದೆ, ಆ ಶ್ರಮವೆಲ್ಲ ಅಲ್ಪವಾಗಿ ತೋರಿತು. ರೆಸಿಡೆಂಟನ ಕಚೇರಿಯ ಲ್ಲಿದ್ದ ಚೇಷ್ಟೆಗಾರರ ಬೆಂಬಲದಿಂದ ರಾಜ್ಯದ ಅಧಿಕಾರಿಗಳನ್ನು ಧಿಕ್ಕರಿಸಿ ಅವರ ಮೇಲೆಯೇ ರೆಸಿಡೆಂಟನಿಗೆ ದೂರು ಒಯ್ಯುವ ಜನರಿದ್ದರು. ರೆಸಿಡೆಂಟನು ಆ ಕ್ಷುದ್ರವಾದ ದೂರುಗಳನ್ನು ವಿಚಾರಣೆಗಾಗಿ ದಿವಾನನ ಬಳಿಗೆ ಕಳಿಸುತ್ತಿದ್ದನು. ಹೀಗೆ ಕೆಲಸಗಳು ಬೆಳೆಯುತ್ತ ದಾದಾಭಾಯಿ ದಿನಕ್ಕೆ ೧೮ ಗಂಟೆಗಳ ಕಾಲ ಕಾರ್ಯಮಗ್ನನಾಗಿರುತ್ತಿದ್ದನು.

ದೇಹವೂ ಮನಸ್ಸೂ ಸರಿಯಾದ ಸ್ಥಿತಿಯಲ್ಲಿರಬೇಕಾದರೆ ದಿನಕ್ಕೆ ೮ ಗಂಟೆಗಳ ಕಾಲ ನಿದ್ರೆ ಅವಶ್ಯವೆಂದು ದಾದಾಭಾಯಿ ನಂಬಿದ್ದನು. ಆದರೆ ಈಗ ನಿತ್ಯಗಟ್ಟಳೆಯ ಕೆಲಸಗಳಿಗೆ ವೇಳೆಯೆಲ್ಲಿ? ಒಮ್ಮೊಮ್ಮೆ ನಿದ್ರೆಯನ್ನು ಕಡಿಮೆಮಾಡುವನು; ಒಮ್ಮೊಮ್ಮೆ ಕೆಲಸದ ಮಧ್ಯೆ ಒಂದು ಗಂಟೆಯ ವಿರಾಮವನ್ನು ಹೊಂದಿಸಿಕೊಳ್ಳುವನು. ಬೆಳಗಿನ ಊಟವನ್ನು ಬಿಟ್ಟು ಬಿಟ್ಟನು. ಮಧ್ಯಾಹ್ನದ ಊಟವನ್ನು ಮೂರು ನಾಲ್ಕು ನಿಮಿಷಗಳಲ್ಲಿ ಮುಗಿಸಿ ಬಿಡುತ್ತಿದ್ದನು. ರಾಜ್ಯದ ಕೆಲಸಗಳು ಸರಿಯಾಗಿ ನಡೆಯಬೇಕಾದರೆ ದಕ್ಷರೂ ಪ್ರಾಮಾಣಿಕರೂ ಆದ ಅಧಿಕಾರಿಗಳು ಅಗತ್ಯ. ಆದ್ದರಿಂದ ಬೊಂಬಾಯಿನಿಂದ ಅಧಿಕಾರಿಗಳನ್ನು ಕರೆಸಿಕೊಂಡನು. ಹಾಗೆ ಬಂದವರಲ್ಲಿ ಬಾಲ ಮಂಗೇಶನು ಮುಖ್ಯ ನ್ಯಾಯಾಧೀಶನಾಗಿಯೂ, ಕಾಜಿ ಷಹಾಬುದ್ದೀನ್ ರೆವಿನ್ಯೂ ಶಾಖೆಯ ಮುಖ್ಯಾಧಿಕಾರಿಯಾಗಿಯೂ, ಹೋರ್ಮ್ಸ್‌ಜಿ ಅರ್ದೇಸೀರ್ ವಾಡಿಯ ಕ್ರಿಮಿನಲ್ ಮತ್ತು ಪೊಲೀಸ್ ಶಾಖೆಗಳ ಮುಖ್ಯಾಧಿಕಾರಿಯಾಗಿಯೂ ನೇಮಿತರಾದರು. ವಾಡಿಯ ದಿವಾನನ ಪರ್ಸನಲ್ ಆಸಿಸ್ಟೆಂಟ್ ಆಗಿಯೂ, ಇದ್ದನು. ದಾದಾಭಾಯಿ ದಿವಾನನ ಕೆಲಸಗಳನ್ನು ನೋಡುತ್ತಿದ್ದರೂ ಅಧಿಕಾರಯುತವಾಗಿ ಅವನ ನೇಮಕವಾಗಲು ಅನೇಕ ತಿಂಗಳುಗಳು ಹಿಡಿದವು.

ಅವನು 'ಛಾರ್ಜು' ವಹಿಸಿಕೊಂಡ ವಿಷಯವನ್ನು ಮಹಾರಾಜನು ರೆಸಿಡೆಂಟನಿಗೆ ಪತ್ರ ಮುಖೇನ ತಿಳಿಸಿದನು. ಆ ಪತ್ರವನ್ನು ರೆಸಿಡೆಂಟನು ಬೊಂಬಾಯಿ ಸರಕಾರಕ್ಕೆ ಕಳಿಸುವಾಗ, ಬ್ರಿಟಿಷ್ ಸರಕಾರದ ವಿಷಯದಲ್ಲಿ ದಾದಾಭಾಯಿಯ ಒಂದೇ ಸಮನಾದ ವರ್ತನೆಯನ್ನು ಗಮನಿಸಿದರೆ, ಅವನನ್ನು ದಿವಾನನನ್ನಾಗಿ ಅಂಗೀಕರಿಸುವುದು ಗುರುತರವಾದ ಜವಾಬ್ದಾರಿಯೇ ಸರಿ, ಎಂದು ತನ್ನ ಅಭಿಪ್ರಾಯವನ್ನು ನಮೂದಿಸಿದನು. ಅಧಿಕಾರ ಪದವಿಗಳ ಆಸೆಯಿಂದಲೇ ದಾದಾಭಾಯಿ ಮಲ್ಹಾರರಾವ್‌ನ ಕೈ ಕೆಳಗೆ ಕೆಲಸ ಮಾಡಲು ಒಪ್ಪಿರಬೇಕೆಂದು ರೆಸಿಡೆಂಟ್ ನಿರ್ಧರಿಸಿದನು. ಆಡಳಿತವನ್ನು ವಹಿಸಿ ಕೊಳ್ಳುವ ಮೊದಲು ದಾದಾಭಾಯಿ ಮಹಾರಾಜನಿಗೆ ಈ ರೀತಿಯಾಗಿ ತಿಳಿಸಿದ್ದನು. "ಲಾಭದ ಆಸೆಗಾಗಲಿ, ಕೀರ್ತಿಯ ಮೋಹಕ್ಕಾಗಲಿ, ನಾನು ನಿಮ್ಮ ಸೇವೆಯನ್ನು ಅಂಗೀಕರಿಸುತ್ತಿಲ್ಲ. ನಿಮ್ಮ ಸಹಕಾರದಿಂದ,

ರಾಜ್ಯಾಡಳಿತದಲ್ಲಿ ಸುಧಾರಣೆಗಳನ್ನು ತರುವುದೇ ನನ್ನ ಉದ್ದೇಶ. ನನ್ನಲ್ಲಿ ನಿಮ್ಮ ನಂಬಿಕೆ ಇರುವವರೆಗೆ, ನನ್ನಿಂದ ರಾಜ್ಯಕ್ಕೆ ಪ್ರಯೋಜನವಾಗುತ್ತದೆ ಎಂಬ ನಂಬಿಕೆ ಇರುವವರೆಗೆ, ನನ್ನ ಸರ್ವ ಶಕ್ತಿಯೂ ನಿಮ್ಮ ಸೇವೆಗಾಗಿ ಉಪಯೋಗವಾಗುತ್ತದೆ. ಆದರೆ ಪರಸ್ಪರ ನಂಬಿಕೆ ವಿಶ್ವಾಸಗಳು ತಪ್ಪಿದ ಕ್ಷಣವೇ ಅಥವಾ ನನ್ನಿಂದ ಪ್ರಯೋಜನವಿಲ್ಲವೆಂದು ಕಂಡು ಬಂದ ಕ್ಷಣವೇ, ನಾನು ಹೊರಟು ಬಿಡುತ್ತೇನೆ."

ರೆಸಿಡೆಂಟ್ ಕರ್ನಲ್ ಫೇಯರ್ ಈ ಮಾತುಗಳನ್ನಾಗಲಿ, ವಾಡಿಯ ನೊಡನೆ ನಡೆದ ಮಾತುಗಳನ್ನಾಗಲಿ ಕೇಳಿದ್ದಲ್ಲಿ ದಾದಾಭಾಯಿಯೊಡನೆ ಅವನ ಸಂಬಂಧ ಬೇರೆ ರೀತಿಯದಾಗಿರುತ್ತಿತ್ತು. ದರಬಾರಿನ ಪದ್ಧತಿಯ ಪ್ರಕಾರ ಅಧಿಕಾರವನ್ನು ವಹಿಸಿ ಕೊಳ್ಳುವ ಮೊದಲು ಮಹಾರಾಜನಿಗೆ ನಜ ರನ್ನು ಒಪ್ಪಿಸಬೇಕಾಗಿತ್ತು. ಮಹಾರಾಜನ ರೂಪವನ್ನು ನೋಡಿದರೆ ರಾಜ ಮನೆತನಕ್ಕೆ ಸೇರಿದವನಂತೆ ಕಾಣಿಸುತ್ತಿರಲಿಲ್ಲ; ಅವನ ಆಕಾರ ಕುಳ್ಳು; ಸ್ವರೂಪ ಒರಟು, ದೃಷ್ಟಿ ವಕ್ರ, ಹಲ್ಲು ಕಪ್ಪಾಗಿದ್ದು ತುಟಿಗಳನ್ನು ತೂರಿ ಕೊಂಡು ಬಂದಿತ್ತು. ಆ ರೂಪವನ್ನು ಮೊದಲ ಬಾರಿಗೆ ಕಂಡ ವಾಡಿಯ "ಎಂಥ ಮನುಷ್ಯನ ಸೇವೆ ಮಾಡಬೇಕಾಗಿದೆ!" ಎಂದನು.

ಯುವಕನ ಹೆಗಲ ಮೇಲೆ ಕೈ ಇಡುತ್ತ ದಾದಾಭಾಯಿ, "ಹೋಮಿ, ನಾವು ಆ ಮನುಷ್ಯನ ಸೇವೆಗಾಗಿ ಬಂದಿಲ್ಲ; ನಮ್ಮ ಧ್ಯೇಯ ಸಾಧನೆಗಾಗಿ ಬಂದಿದ್ದೇವೆ" ಎಂದು ಹೇಳಿದನು.

ಈ ನಡುವೆ ಸರಕಾರದ ಆಡಳಿತವನ್ನು ಕುರಿತು ನೇಮಕವಾಗಿದ್ದ ವಿಚಾರಣಾ ಸಮಿತಿ ತನ್ನ ವರದಿಯನ್ನು ಪ್ರಕಟಿಸಿತು. ಅದರಲ್ಲಿ, ಮಲ್ಹಾರ ರಾಯನ ಆಡಳಿತ ಕೇವಲ ನಿರಂಕುಶ ರೀತಿಯದಾಗಿದ್ದು, ಹಲವು ಸಂದರ್ಭ ಗಳಲ್ಲಿ ತೀರ ಅನ್ಯಾಯಯುತವಾಗಿದೆಯೆಂದೂ, ಸರಕಾರಕ್ಕೆ ಕೆಟ್ಟ ಹೆಸರನ್ನು ತರುವುದಲ್ಲದೆ, ಅದರ ವಿಷಯದಲ್ಲಿ ಗೌರವಯುತರಾದ ಪ್ರಜೆಗಳಿಗೆ ಅವಿ ಶ್ವಾಸ ಹುಟ್ಟಿಸತಕ್ಕದ್ದಾಗಿದೆಯೆಂದೂ, ಅಭಿಪ್ರಾಯ ವ್ಯಕ್ತವಾಗಿತ್ತು.

ಪರಿಸ್ಥಿತಿಯನ್ನು ಕುರಿತು ಬೊಂಬಾಯಿ ಸರಕಾರ ಇಂಡಿಯಾ ಸರ ಕಾರಕ್ಕೆ ಈ ಬಗೆಯಾದ ತಿಳಿವಳಿಕೆಯನ್ನು ನೀಡಿತ್ತು: ಗಾಯಕವಾಡನು ದಾದಾಭಾಯಿಯನ್ನು ದಿವಾನನನ್ನಾಗಿ ನೇಮಕ ಮಾಡಿಕೊಂಡಿದ್ದಾನೆ.

ದಾದಾಭಾಯಿಯ ವಿಷಯದಲ್ಲಿ ಇಂಡಿಯಾದಲ್ಲೂ ಇಂಗ್ಲೆಂಡಿನಲ್ಲೂ ಗೌರವ ವಿದೆ. ಆತನು ಉತ್ತಮ ರೀತಿಯ ರಾಜ್ಯಾಡಳಿತವನ್ನು ಸ್ಥಾಪಿಸಲು ತನ್ನ ಕೈಲಾದ್ದನ್ನೆಲ್ಲ ಮಾಡುತ್ತಾನೆ. ಆದರೆ ಮಹಾರಾಜನ ಇಷ್ಟದ ಪ್ರಕಾರ ಅವನ ಭಾವಮೈದುನನಾದ ಹಿಂದಿನ ದಿವಾನನು ಈಗಲೂ (ರಾಜ) ಪ್ರತಿನಿಧಿಯಾಗಿ ಅಧಿಕಾರದಲ್ಲಿರುತ್ತಾನೆ. ಹೊಸದಾಗಿ ಬಂದಿರುವ ನಾಲ್ಕು ಜನ ಮುಖ್ಯ ಅಧಿಕಾರಿಗಳೊಡನೆ ಹಿಂದಿನ ನಾಲ್ವರು ಅಧಿಕಾರಿಗಳೂ ಇರುತ್ತಾರೆ. ಈ ಸನ್ನಿವೇಶದಲ್ಲಿ ಗಾಯಕವಾಡನೂ ಅವನ ಅನುಯಾಯಿಗಳೂ, ದಾದಾಭಾಯಿಯ ಹೆಸರಿನ ಹಿಂದೆ, ತಮ್ಮ ಕೆಲಸಗಳನ್ನು ಮುಂದುವರಿಸುತ್ತಾರೆ; ಅವನು ಯಾವ ಸುಧಾರಣೆಯನ್ನು ಎಸಗಲೂ ಸಮರ್ಥನಾಗುವುದಿಲ್ಲ. ಆದ್ದರಿಂದ, ಮಂತ್ರಿಯನ್ನಾಗಿ ನೇಮಿಸಿಕೊಳ್ಳುವಂತೆ ಗಾಯಕವಾಡನಿಗೆ ಸೂಚಿಸಲು ತಕ್ಕ ಮನುಷ್ಯನನ್ನು ಶಿಫಾರಸು ಮಾಡುವ ಅಧಿಕಾರವನ್ನು ವೈಸರಾಯರು ಬೊಂಬಾಯಿ ಸರಕಾರಕ್ಕೆ ನೀಡುವರೆಂದು ಆಶಿಸಿರುವುದಾಗಿ ಆ ಸರಕಾರ ತಿಳಿಸಿತ್ತು.

ಮಹಾರಾಜನ ಪ್ರಾರ್ಥನೆಯಂತೆ ವಿಚಾರಣಾ ಸಮಿತಿಯ ವರದಿಯ ನಕಲು ಅವನಿಗೆ ತಲಪಿತ್ತು. ಅದರಲ್ಲಿನ ಆಕ್ಷೇಪಣೆಗಳಿಗೆ ಮಹಾರಾಜನು ಉತ್ತರ ಕಳಿಸ ಬೇಕಾಗಿತ್ತು. ವಾಡಿಯನೂ ದಾದಾಭಾಯಿಯೂ ಸಂಬಂಧಪಟ್ಟ ದಾಖಲೆಗಳನ್ನು ಹುಡುಕಿ ನೋಡುತ್ತ ನಿದ್ದೆಯಿಲ್ಲದೆ ರಾತ್ರಿಗಳನ್ನು ಕಳೆದರು: ಮಹಾರಾಜನ ಪರವಾಗಿ ಸಮರ್ಥಿಸಿ ಹೇಳ ಬಹುದಾದ ಒಂದು ಸಂಗತಿಯಾದರೂ ದೊರೆಯಲಿಲ್ಲ. ಆದರೂ ವಾಡಿಯನು ಮಹಾರಾಜನ ಪಕ್ಷ ವಹಿಸಿ ವಾದಿಸಲು ಇಷ್ಟಪಡುತ್ತಿದ್ದನೆಂದು ತೋರುತ್ತದೆ. ಆದರೆ ದಾದಾಭಾಯಿ, "ನೋಡು ಹೋಮಿ, ಮಹಾರಾಜನು ಹಿಂದೆ ಎಸಗಿರುವುದನ್ನೆಲ್ಲ ಸಮರ್ಥಿಸುವುದಕ್ಕಾಗಿ ನಾವು ಇಲ್ಲಿ ಇರುವುದಲ್ಲ; ಸದ್ಯಸ್ಥಿತಿಯನ್ನೂ ಮುಂದಿನದನ್ನೂ ನಾವು ಗಮನಿಸಬೇಕು" ಎಂದನು. ಮಲ್ಹಾರರಾವ್ ಮಾತ್ರ ತನ್ನ ಭವಿಷ್ಯವೆಲ್ಲ ಹಿಂದಿನ ಕೃತ್ಯಗಳನ್ನು ಸಮರ್ಥಿಸುವುದರ ಮೇಲೆ ನಿಂತಿದೆಯೆಂದು ತಿಳಿದಿದ್ದನು. ಹಾಗೆ ಸಮರ್ಥಿಸುವುದು ಆತ್ಮಘಾತಕವೆಂದು ದಾದಾಭಾಯಿ ಹೇಳಿದನು.

"ನಾನು ಸೂಚಿಸುವ ಉತ್ತರ: ಹಿಂದಿನದನ್ನೆಲ್ಲ ಕೆಣಕುವುದರಿಂದ

ಯಾವ ಪ್ರಯೋಜನವೂ ಆಗುವುದಿಲ್ಲ; ಆದ್ದರಿಂದ, ಒಂದೆರಡು ವರ್ಷಗಳಲ್ಲಿ ಪರಿಸ್ಥಿತಿಯನ್ನು ಸುಧಾರಿಸುವುದು ನಿಮ್ಮ ಇಷ್ಟವೆಂದು ತಿಳಿಸಿ. ಮುಂದೆ, ಸರಕಾರದ ಆಡಳಿತವನ್ನು ಉತ್ತಮರೀತಿಯಲ್ಲಿ ನಡೆಸಿಕೊಂಡು ಹೋಗುವುದಾಗಿ ಭರವಸೆಕೊಡುವುದಾಗಿಯೂ, ಬೇಕಾದರೆ ತಿಳಿಸಿ."

ಮಹಾರಾಜ: "ಎಂದರೆ, ಸಮಿತಿಯವರ ತೀರ್ಪನ್ನು ನಾನು ಒಪ್ಪಿಕೊಂಡಂತಾಗುತ್ತದೆ."

ದಾದಾಭಾಯಿ: "ಹಾಗೇನೂ ಇಲ್ಲ ...ನಾನು ಸೂಚಿಸಿದ ಮಾರ್ಗವನ್ನು ಅನುಸರಿಸಿದರೆ, ಸಮಿತಿಯವರ ಸಿದ್ಧಾಂತಗಳನ್ನು ಒಪ್ಪಿಕೊಂಡಂತೆಯೂ ಆಗುವುದಿಲ್ಲ, ವಿರೋಧಿಸಿದಂತೆಯೂ ಆಗುವುದಿಲ್ಲ. ಆ ವಿಷಯವನ್ನು ಚರ್ಚಿಸುವುದು ವ್ಯರ್ಥವೆಂದು ತಿಳಿಯುತ್ತೀರಿ, ಅಷ್ಟೆ. ಏನನ್ನೂ ಒಪ್ಪಿಕೊಳ್ಳದೆ, ಒಳ್ಳೆಯ ಆಡಳಿತವನ್ನು ಸ್ಥಾಪಿಸಲು ಸಿದ್ಧರಿರುವುದಾಗಿ ತಿಳಿಸುತ್ತೀರಿ."

ಮಹಾರಾಜನು ತನ್ನ ಹಟವನ್ನೇ ಹಿಡಿದನು. "ನಾನು ದಿವಾನನಾಗಿರುವವರೆಗೆ, ಮಹಾರಾಜರು ಇಚ್ಛಿಸುವಂಥ ಹೇಳಿಕೆ ನನ್ನ ಕಚೇರಿಯಿಂದ ಹೊರಡುವುದಿಲ್ಲ" ಎಂದು ದಾದಾಭಾಯಿ ನುಡಿದು, "ಇನ್ನು ನನಗಿರುವ ಬೇರೆ ಮಾರ್ಗವೆಂದರೆ, ರಾಜಿನಾಮೆಯನ್ನು ಸಲ್ಲಿಸುವುದು. ತಮ್ಮ ಕರೆಯನ್ನು ಮನ್ನಿಸಿ ಹೇಗೆ ಕೂಡಲೆ ಬಂದೆನೊ ಹಾಗೆಯೇ, ತಮಗೆ ಇಷ್ಟವಾದರೆ, ಹೊರಡಲೂ ಸಿದ್ಧನಾಗಿದ್ದೇನೆ" ಎಂದು ತಿಳಿಸಿದನು.

ಕೆಲವು ದಿನಗಳು ಕಳೆದ ಮೇಲೆ ಮಲ್ಹಾರರಾವ್ ದಾದಾಭಾಯಿಯನ್ನು ಕುರಿತು, "ನಿಮ್ಮ ಸಲಹೆಯ ವಿಚಾರವಾಗಿ ಚೆನ್ನಾಗಿ ಯೋಚಿಸಿದ್ದೇನೆ. ನೀವು ಸೂಚಿಸಿದ ರೀತಿಯಲ್ಲಿ ಸರಕಾರಕ್ಕೆ ಉತ್ತರ ಕಳಿಸಲು ಇಷ್ಟಪಡುತ್ತೇನೆ. ಕೂಡಲೆ ಉತ್ತರವನ್ನು ತಯಾರಿಸಿ ರವಾನೆಗೆ ಸಿದ್ಧಪಡಿಸುವುದು ..." ಎಂದು ಹೇಳಿದನು. ಉತ್ತರವನ್ನು ತಯಾರಿಸಿ ರೆಸಿಡೆಂಟನಿಗೆ ಕಳಿಸಲಾಯಿತು.

ದಾದಾಭಾಯಿ ಮಂತ್ರಿಪದವಿಯನ್ನು ವಹಿಸಿಕೊಂಡು ಏಳು ತಿಂಗಳುಗಳು ಕಳೆದಿದ್ದರೂ ಅವನ ನೇಮಕ ಅಧಿಕಾರಯುತವಾಗಿ ಅಂಗೀಕೃತವಾಗಿರಲಿಲ್ಲ. ಈ ಅವಧಿಯಲ್ಲಿ ದಿನವೂ ವ್ಯಾಜ್ಯಗಳೂ ದೂರುಗಳೂ

ಪಿತೂರಿಗಳೂ ಹೆಚ್ಚುತ್ತ ಇದ್ದವು. ಮಹಾರಾಜನ ಭವಿಷ್ಯವೂ ಅನಿಶ್ಚಿತ ವಾಗಿತ್ತು. ಆಡಳಿತವನ್ನು ಉತ್ತಮಪಡಿಸುವುದಾಗಿಯೂ, ನಡತೆಯನ್ನು ತಿದ್ದಿಕೊಳ್ಳುವುದಾಗಿಯೂ, ಅವನು ಬರೆದ ಪತ್ರಕ್ಕೆ ಪ್ರತ್ಯುತ್ತರ ಬಂದಿರಲಿಲ್ಲ. ದಾದಾಭಾಯಿಯೂ ಅವನ ಸಂಗಾತಿಗಳೂ ಆಡಳಿತದ ಸುಧಾರಣೆಗಾಗಿ ಹಾಕಿಕೊಂಡಿದ್ದ ಯೋಜನೆಗಳನ್ನು ಮುಂದುವರಿಸುತ್ತಲೇ ಇದ್ದರು.

ಹೊಸ ಆಡಳಿತದ ಪರಿಣಾಮಗಳು ನಿಧಾನವಾಗಿಯಾದರೂ ಒಂದೇ ಸಮನಾಗಿ ಕಾಣಿಸಿಕೊಳ್ಳುತ್ತಿದ್ದವು. ಇಲಾಖೆಗಳೆಲ್ಲ ಪುನರ್ವ್ಯವಸ್ಥೆಗೊಳ್ಳು ತ್ತಿದ್ದವು; ಕಾರ್ಯವಿಧಾನದಲ್ಲಿ ನೂತನಪದ್ಧತಿಗಳೂ ಉತ್ತಮ ಮಾರ್ಗ ಗಳೂ ಆಚರಣೆಗೆ ಬರುತ್ತಿದ್ದವು.

ರೆವಿನ್ಯೂ ಇಲಾಖೆಯ ಮುಖ್ಯಾಧಿಕಾರಿಯು ಸಂಸ್ಥಾನವನ್ನೆಲ್ಲ ಸಂಚ ರಿಸಿ, ಕಷ್ಟಕ್ಕೊಳಗಾಗಿದ್ದ ರೈತಾಪಿ ಜನರನ್ನು ಕಂಡು, ಕಂದಾಯದ ಹೊರೆ ಯನ್ನು ಹೊಸಯೋಜನೆಗಳ ಪ್ರಕಾರ ಇಳಿಸುವುದಾಗಿ ಸ್ವತಃ ಆಶ್ವಾಸನೆ ಕೊಟ್ಟು, ಸಮಾಧಾನ ಪಡಿಸಿದನು. ನ್ಯಾಯವನ್ನು ಹೆಚ್ಚಾಗಿ ಹಣ ಕೊಡುವವನಿಗೆ ವಿಕ್ರಯಿಸುವ ಪದ್ಧತಿಯನ್ನು ನಿಲ್ಲಿಸಲಾಯಿತು. ಈ ಸಂದರ್ಭ ದಲ್ಲಿ ಮಹಾರಾಜನೊಡನೆ ತಿಕ್ಕಾಟವಾಗದಿರಲಿಲ್ಲ. ಮಹಾರಾಜನು ನಜ ರಾನ ಸ್ವೀಕರಿಸುವುದನ್ನು ತನ್ನ ವರಮಾನದ ಒಂದು ಮಾರ್ಗವೆಂದು ತಿಳಿದಿದ್ದನು. ಸಣ್ಣ ವಿಷಯಗಳಲ್ಲಿ ದಾದಾಭಾಯಿ ಪ್ರವೇಶಿಸುತ್ತಿರಲಿಲ್ಲ. ಆದರೆ ಮುಖ್ಯ ತತ್ತ್ವಗಳ ವಿಚಾರದಲ್ಲಿ ತನ್ನ ನಿಲವನ್ನು ಬಿಟ್ಟುಕೊಡುತ್ತಿರ ಲಿಲ್ಲ. ತಾನು ಮಂತ್ರಿಯಾಗಿರುವವರೆಗೆ ನಜರಾನದಿಂದ ನ್ಯಾಯಪದ್ಧ ತಿಯು ಕಳಂಕಿತವಾಗಲು ಆಸ್ಪದ ಕೊಡುವುದಿಲ್ಲವೆಂದು ತಿಳಿಸಿದನು. ಮಹಾರಾಜನು ಹಿಮ್ಮೆಟ್ಟಬೇಕಾಯಿತು. ವ್ಯಾಜ್ಯದಲ್ಲಿ ಗಾಯಕವಾಡನಿಗೆ ಏನು ನಜರಾನ ಸಲ್ಲಬೇಕು, ಜಡ್ಜಿಗಳಿಗೂ ದರಬಾರಿಗಳಿಗೂ ಏನು ಲಂಚ ಸಲ್ಲಬೇಕು,ಎಂದು ಜಡ್ಜಿಗಳೂ ವಕೀಲರೂ ಕಿತ್ತಾಡುತ್ತಿದ್ದ ಪದ್ಧತಿ ಮಾಯ ವಾಗಿ, ಪ್ರತಿವ್ಯಾಜ್ಯವೂ ಕೋರ್ಟಿನಲ್ಲಿ ಬಹಿರಂಗ ವಿಚಾರಣೆಗೆ ಒಳಗಾಗಿ, ಅದರ ಯೋಗ್ಯತೆಗೆ ತಕ್ಕಂತೆ ತೀರ್ಮಾನವಾಗುವ ಪದ್ಧತಿ ಜಾರಿಗೆ ಬಂದಿತು. ಲಂಚಕೋರ ನಡವಳಿಕೆಗಳಿಗಾಗಿ ಪೊಲೀಸರು ವಿಚಾರಣೆಗೆ ಗುರಿ ಯಾಗಿ ವಾಡಿಯನ ಕೋರ್ಟಿನಲ್ಲಿ ನಿಲ್ಲುವುದನ್ನು ಕಂಡು ಜನ ಬೆರಗಾದರು.

ದಿವಾನನ ಅಪ್ಪಣೆಯ ಪ್ರಕಾರ, ಅವನ ಸಲಹೆಗಳನ್ನನುಸರಿಸಿ, ಬಾಲ ಮಂಗೇಶ್ ಮತ್ತು ವಾಡಿಯ ಇಬ್ಬರೂ ಸೇರಿ ಪೀನಲ್ ಕೋಡ್, ಸಿವಿಲ್ ಮತ್ತು ಕ್ರಿಮಿನಲ್ ಪ್ರೊಸೀಜರ್ ಕೋಡ್‌ಗಳನ್ನು ರಚಿಸಲಾರಂಭಿಸಿದರು. ಕಾಜಿ ಷಾಬುದ್ದೀನ್ ರೆವಿನ್ಯೂ ಪದ್ಧತಿಯನ್ನು ಸರಿಪಡಿಸುತ್ತಿದ್ದನು. ಹೊಸ ಆಡಳಿತ ಪದ್ಧತಿ ಮುಚ್ಚುಮರೆಯಿಲ್ಲದ್ದಾಗಿ ಜವಾಬ್ದಾರಿಯುತವಾಗಿತ್ತು.

ದಾದಾಭಾಯಿಯೂ ಅವನ ಸಂಗಾತಿಗಳೂ ಬೆಳಗಿನ ಜಾವದಿಂದ ರಾತ್ರಿಯವರೆಗೂ ದುಡಿದು ಅಯೋಗ್ಯನಾದ ಆ ಮಹಾರಾಜನಿಗೆ ತಮ್ಮ ಅತ್ಯುತ್ತಮ ಸೇವೆಯನ್ನು ಸಲ್ಲಿಸಿದರು. ಧರ್ಮಪರಾಯಣನಾದ ದಿವಾನನ ಮಾರ್ಗದಲ್ಲಿ ಮಹಾರಾಜ ಒಂದು ದೊಡ್ಡ ವಿಪತ್ತಾಗಿದ್ದನು. ಹಿಂದೆ ತೀರ್ಮಾನವಾದ ವ್ಯಾಜ್ಯಗಳ ಸಂಬಂಧವಾಗಿ ಮಹಾರಾಜನಿಗೆ ತಕ್ಕಷ್ಟು ಹಣ ಬರಬೇಕಾಗಿತ್ತು. ಅದನ್ನೆಲ್ಲ ವಸೂಲು ಮಾಡಬೇಕೇ ಎಂದು ಬಾಲ ಮಂಗೇಶ ದಿವಾನನನ್ನು ವಿಚಾರಿಸಿದನು "ಒಂದು ಕಾಸೂ ವಸೂಲು ಮಾಡತಕ್ಕದ್ದಲ್ಲ" ವೆಂದು ದಿವಾನನು ತಿಳಿಸಿದನು. ದರಬಾರಿನ ಸುಲಿಗೆ ಕೋರರು ಈ ಸಂಬಂಧದಲ್ಲಿ ದಿವಾನನಿಗೂ ಮಹಾರಾಜನಿಗೂ ವಿರೋಧವನ್ನು ತಂದೊಡ್ಡಲು ಹವಣಿಸಿದರು. ಬಹುವಾಗಿ ಚರ್ಚೆಯಾದ ಮೇಲೆ, ಹಳೆಯ ಪದ್ಧತಿಗಳನ್ನು ಕುದುರಿಸಲು ಮಹಾರಾಜನು ಪ್ರಯತ್ನಪಟ್ಟಲ್ಲಿ. ತಾನು ರಾಜಿನಾಮೆ ಕೊಡುವುದಾಗಿ ದಾದಾಭಾಯಿ ತಿಳಿಸಿದನು. ಆಡಳಿತ ನಿರ್ವಹಣೆಯಲ್ಲಿ ಸ್ವಾತಂತ್ರ್ಯವಿದ್ದರೆ ಮಾತ್ರವೇ ಅಧಿಕಾರದಲ್ಲಿರುವುದಾಗಿ ಹೇಳಿ ಕಳಿಸಿದನು. ಯಾವ ನಿಬಂಧನೆಗಳಿಗೂ ಷರತ್ತುಗಳಿಗೂ ಒಪ್ಪಿ ತಾನು ಕೆಲಸ ಮಾಡಬಹುದೆಂಬುದನ್ನೂ ತಿಳಿಸಿ ಪತ್ರ ಬರೆದನು. ಮಹಾರಾಜನು ದಾದಾಭಾಯಿಯ ಷರತ್ತುಗಳಿಗೆ ಒಪ್ಪಿಕೊಳ್ಳಬೇಕಾಯಿತು. ಈ ನಡುವೆ, ಆಗಸ್ಟ್ ೩ರಲ್ಲಿ, ವೈಸರಾಯರಿಂದ ಬಂದ ಪತ್ರದಿಂದ ಇತರ ವಿಷಯಗಳೆಲ್ಲ ಹಿಂದಕ್ಕೆ ಸರಿದವು.

ಬೊಂಬಾಯಿ ಸರಕಾರದ ಸಲಹೆಯನ್ನು ತಳ್ಳಿಹಾಕಿ ವೈಸ್‌ರಾಯ್ ಸಂಸ್ಥಾನದ ಉತ್ತಮ ಆಡಳಿತಕ್ಕೆ ಗಾಯಕವಾಡನೇ ಜವಾಬ್ದಾರನೆಂದು ನಿರ್ಧರಿಸಿದ್ದನು; ಅಲ್ಲದೆ, ೧೮೭೪ರ ಡಿಸೆಂಬರ್ ಅಂತ್ಯದೊಳಗೆ ಆಡಳಿತ

ಪದ್ಧತಿಯನ್ನು ಪರಿಷ್ಕರಿಸದಿದ್ದರೆ ಮಹಾರಾಜನನ್ನು ಪದಚ್ಯುತನನ್ನಾಗಿ ಮಾಡುವುದಾಗಿಯೂ ಎಚ್ಚರಿಸಿದ್ದನು. ಮಂತ್ರಿಯನ್ನು ನೇಮಿಸಿಕೊಳ್ಳುವ ಅಧಿಕಾರವನ್ನು ಮಹಾರಾಜನಿಗೇ ಬಿಟ್ಟಿದ್ದನು.

ಈ ಆಜ್ಞೆಯಿಂದ ಅರಮನೆಯಲ್ಲಿ ಸಂತೋಷವುಂಟಾಯಿತು, ರೆಸಿಡೆಂಟನ ಕಚೇರಿಯಲ್ಲಿ ವ್ಯಸನವುಂಟಾಯಿತು. ದಾದಾಭಾಯಿಯನ್ನು ಮುರಿಯುವುದಾಗಿ ರೆಸಿಡೆಂಟ್ ಪ್ರತಿಜ್ಞೆ ಮಾಡಿದನು.

ದರಬಾರಿಗಳು ದಾದಾಭಾಯಿಗೆ ವಿರೋಧವಾಗಿ ನಡೆಯಲಾರಂಭಿಸಿದರು. ಮಹಾರಾಜನಿಗೆ ಚುಚ್ಚಿಕೊಟ್ಟರು: "ಇನ್ನು ಮೇಲೆ ಎಲ್ಲವೂ ರೆಸಿಡೆಂಟನು ರಾಜ್ಯಾಡಳಿತವನ್ನು ಕುರಿತು ಬರೆಯುವ ವರದಿಗಳನ್ನು ಅವಲಂಬಿಸುತ್ತದೆ; ಅವನು ಅನುಕೂಲನಾಗಿದ್ದಾನೆ; ದಾದಾಭಾಯಿ ಈಗ ಏನು ತಾನೆ ಮಾಡಬಲ್ಲ?"

ಒಂದು ವಾರದೊಳಗೆ ಪಿತೂರಿಗಳು ಹೆಚ್ಚಿ ಭಯಂಕರ ರೂಪವನ್ನು ತಾಳಿದವು. ದಿವಾನನ ವಿಷಯದಲ್ಲಿ ಮಹಾರಾಜನ ವರ್ತನೆ ಸ್ನೇಹರೀತಿಯದಾಗಿರಲಿಲ್ಲ. ಇನ್ನು ಹದಿನೇಳು ತಿಂಗಳ ಕಾಲ ತಾನು ಹೇಗಿದ್ದರೂ ನಿರ್ಭಯವಾಗಿರಬಹುದು. ಆ ವೇಳೆಗೆ ವೈಸರಾಯನನ್ನು ಹೇಗಾದರೂ ಸಮಾಧಾನಪಡಿಸಿದರಾಯಿತು. ತನ್ನ ಸ್ವಾತಂತ್ರ್ಯವನ್ನು ಮೊಟಕು ಮಾಡಲು ದಾದಾಭಾಯಿಗೆ ಏಕೆ ಅವಕಾಶ ಕೊಡಬೇಕು?

ಗಾಳಿ ವಿರುದ್ಧವಾಗಿ ಬೀಸುತ್ತಿರುವುದನ್ನು ಕಂಡು ದಾದಾಭಾಯಿಯೂ ಅವನ ಸಂಗಾತಿಗಳೂ ಆಗಸ್ಟ್ ೯ ರಲ್ಲಿ ರಾಜೀನಾಮೆ ಸಲ್ಲಿಸಿದರು. ಮಲ್ಹಾರರಾವ್ ದಾದಾಭಾಯಿಯನ್ನು ಬಿಟ್ಟುಕೊಡಲು ನಿರ್ಧರಿಸಿರಲಿಲ್ಲ. ಅವನು ಬಿಟ್ಟು ಹೋದರೆ ತೊಂದರೆಯಾಗಬಹುದೆಂದು ಎಣಿಸಿ ರಾಜೀನಾಮೆಗಳನ್ನು ವಾಪಸು ತೆಗೆದುಕೊಳ್ಳುವಂತೆ ಒತ್ತಾಯಪಡಿಸಿದನು.

ಹೀಗೆ ಇನ್ನೊಮ್ಮೆ ರೆಸಿಡೆಂಟನ ಪ್ರಯತ್ನ ವಿಫಲವಾಯಿತು. ಆಗ ದಾದಾಭಾಯಿ "ಮಹಾರಾಜ್, ರೆಸಿಡೆಂಟನು ನಮಗೆ ತೀರ ವಿರೋಧಿಯಾಗಿದ್ದಾನೆ. ರಾಜ್ಯಾಡಳಿತದ ಸುಧಾರಣೆಗಳನ್ನು ನಾವು ಶ್ರದ್ಧೆಯಿಂದಲೂ ಪ್ರಾಮಾಣಿಕತನದಿಂದಲೂ ನಡಸಿಕೊಂಡು ಹೋದಲ್ಲಿ ಬ್ರಿಟಿಷ್ ಸರಕಾರದಿಂದ ನಮಗೆ ಏನೂ ಅಪಾಯ ತಗಲಲಾರದು" ಎಂದು ಹೇಳಿದನು.

ಈ ಬಾರಿ ಗಾಯಕವಾಡನು ದಾದಾಭಾಯಿ ಮಂತ್ರಿಯಾಗಿ ಇರಬೇಕೆಂದು ನಿರ್ಧರಿಸಿದ್ದಂತೆ ತೋರಿತು. ಕೂಡಲೆ, ದಿವಾನನಿಗೆ ಸಲ್ಲುವ ಮಿಲಿಟರಿ ಗೌರವಗಳನ್ನು ಅವನಿಗೆ ಸಲ್ಲಿಸುವಂತೆ ಅಪ್ಪಣೆ ಮಾಡಿದನು. ೧೮೭೪ ರ ಸೆಪ್ಟೆಂಬರ್ ೨೩ ರಲ್ಲಿ ದಾದಾಭಾಯಿ ವಿಧ್ಯುಕ್ತವಾಗಿ ದಿವಾನನಾದನು. ದಿವಾನನ ಆಯ್ಕೆಯಲ್ಲಿ ಯಾವ ರೀತಿಯಲ್ಲೂ ಕೈಹಾಕ ಕೂಡದೆಂದು ಈ ವೇಳೆಗೆ ರೆಸಿಡೆಂಟನಿಗೆ ಖಚಿತವಾದ ಆಜ್ಞೆ ಬಂದಿತ್ತು. ಆದ್ದರಿಂದ ಅವನು ಹೊಸ ಪರಿಸ್ಥಿತಿಗೆ ಹೊಂದಿಕೊಂಡು ನಡೆಯಬೇಕಾಯಿತು.

## ೧೪. ಮಂತ್ರಿಯ ರಾಜಿನಾಮೆ—ಮಹಾರಾಜನ ಪದಚ್ಯುತಿ

ದಾದಾಭಾಯಿ ವಿಧ್ಯುಕ್ತವಾಗಿ ದಿವಾನನಾದುದರ ನೆನಪಿಗಾಗಿ ಕಂದಾಯದಲ್ಲಿ ಕಾಲುಭಾಗವನ್ನು ರಿಯಾಯತಿಮಾಡಲಾಯಿತು. ಪ್ರಜೆಗಳ ಹಿತದ ದೃಷ್ಟಿಯಿಂದ ಬಹುಪರಿಣಾಮಕಾರಿಯಾದ ಪ್ರಸಿದ್ಧ ಪತ್ರಿಕೆಗಳು ಹೊರಟವು. ನಜರಾನ ಕೊಡುವುದೂ ಅದನ್ನು ತೆಗೆದುಕೊಳ್ಳುವುದೂ ಅಪರಾಧಗಳಾಗಿ ಪರಿಗಣಿತವಾದವು. ಬಲಾತ್ಕಾರದ ಜೀತವನ್ನು ನಿಲ್ಲಿಸಲಾಯಿತು. ಚಿತ್ರಹಿಂಸೆಕೊಡುವ ಪದ್ಧತಿಯನ್ನು ಕಾನೂನಿಗೆ ವಿರುದ್ಧವೆಂದು ಸಾರಲಾಯಿತು. ಮುಟ್ಟುಗೋಲು ಹಾಕಿಕೊಂಡ ಆಸ್ತಿಗಳಿಗೆ ಸಂಬಂಧಪಟ್ಟಂತೆ ಸರ್ಕಾರದ ಮೇಲೆ ಬಂದ ವ್ಯಾಜ್ಯಗಳನ್ನು ದಿವಾನನು ತಾನೇ ವಿಚಾರಿಸಿ ನಿರ್ಣಯಿಸುತ್ತಿದ್ದನು. ಅಸಮಾಧಾನಗೊಂಡ ಸರದಾರರ ವ್ಯಾಜ್ಯಗಳನ್ನೂ ತಾನೇ ವಿಚಾರಿಸಿ, ಅವರಿಗೆ ಕೊಡಬೇಕಾದ ಬಾಕಿಗಳನ್ನು ಇತ್ಯರ್ಥಮಾಡಲು ಪ್ರಯತ್ನಪಟ್ಟನು. ಚೇಷ್ಟೆಕಾರರಿಂದ ಪ್ರೇರಿತರಾಗಿ ಸರದಾರರು ಗಲಭೆಯೆಬ್ಬಿಸಿ, ಸರಕಾರದ ತೀರ್ಮಾನದ ಮೇಲೆ ಮೇಲ್ವಿಚಾರಣೆಗಾಗಿ ರೆಸಿಡೆಂಟನಲ್ಲಿಗೆ ಹೋದರು.

ಈ ವ್ಯಾಜ್ಯಗಳನ್ನು ಇತ್ಯರ್ಥ ಪಡಿಸುವುದರಲ್ಲಿ ಸಹಾಯಕನಾಗುವ ಬದಲು ರೆಸಿಡೆಂಟನು ದಿವಾನನಿಗೆ ಕಿರುಕುಳ ಕೊಡಲಾರಂಭಿಸಿದನು. ರೆಸಿಡೆಂಟನನ್ನು ಹಿಂದಕ್ಕೆ ಕರೆಸಿಕೊಳ್ಳುವುದು ಅಗತ್ಯವೆಂದು ಬರೆಯ

ಬೇಕಾಗಿ ದಾದಾಭಾಯಿ ಮಹಾರಾಜನಿಗೆ ಸಲಹೆಮಾಡಿದನು. ಮಹಾ
ರಾಜ ಅದನ್ನು ಒಪ್ಪಿದನು. ಅದೇ ರೀತಿ ಮೇಲಿನ ಅಧಿಕಾರಿಗಳಿಗೆ ರೆಸಿ
ಡೆಂಟನ ಮೂಲಕ ಪತ್ರ ಕಳಿಸಲಾಯಿತು.

ಪತ್ರದಲ್ಲಿ ನಮೂದಾಗಿರುವುದೆಲ್ಲ ಸುಳ್ಳೆಂದು ವಿವರಿಸಿ ರೆಸಿಡೆಂಟನ
ಪತ್ರವನ್ನು ಮೇಲಕ್ಕೆ ಕಳಿಸಿದನು. ಇಂಡಿಯಾ ಸರಕಾರದ ಮತ್ತು
ಬೊಂಬಾಯಿ ಸರಕಾರದ ಆಜ್ಞೆಗಳನ್ನು ಅವನು ಸರಿಯಾಗಿ ಗ್ರಹಿಸಿಲ್ಲ
ವೆಂದೂ ರೆಸಿಡೆಂಟನ ಕರ್ತವ್ಯಗಳನ್ನು ಅವನಿಗೆ ಇನ್ನು ಮುಂದೆ ವಹಿಸುವುದ
ರಿಂದ ತೃಪ್ತಿಕರವಾದ ಪರಿಣಾಮಗಳಾಗಲಾರವೆಂದೂ ಇಂಡಿಯಾ ಸರಕಾರ
ಅಭಿಪ್ರಾಯಪಟ್ಟಿತು. ಈ ಸಂದರ್ಭದಲ್ಲಿ ಬೊಂಬಾಯಿ ಸರಕಾರವು
ನಿಂದೆಗೆ ಗುರಿಯಾಯಿತು.

ತಾತ್ಕಾಲಿಕವಾಗಿ ಸರ್ ಲೂಯಿ ಪೆಲ್ಲಿಯು ಗವರ್ನರ್ ಜನರಲ್ಲನ ಪ್ರತಿ
ನಿಧಿಯಾಗಿ, ಬರೋಡಾದಲ್ಲಿ ಸ್ಪೆಷಲ್ ಕಮಿಷನರಾಗಿ ನೇಮಕವಾದನು
ಬೊಂಬಾಯಿ ಸರಕಾರಕ್ಕೆ ಬರೋಡಾದ ಮೇಲಿದ್ದ ರಾಜಕೀಯ ಅಧಿಕಾರ
ನಿಂತುಹೋಯಿತು.

ತನ್ನ ಪ್ರಾರ್ಥನೆಯ ಮೇರೆಗೆ, ಜಗಳಗಂಟನೂ ಕಿರುಕುಳದವನೂ
ಆದ ರೆಸಿಡೆಂಟನು ವಜಾ ಆದದ್ದರಿಂದ, ಮಲ್ಹಾರರಾಯನಿಗೆ ಬಹು ಸಂತೋ
ಷವಾಯಿತು. ದಾದಾಭಾಯಿ ಸುದ್ದಿಯನ್ನು ಶಾಂತ ಚಿತ್ತದಿಂದ ಕೇಳಿದನು.
ಇನ್ನೊಬ್ಬರ ಅವನತಿಗೆ ಮೂಲವಾಗುವುದು ಸಂತೋಷಕರವಾದ ವಿಷಯ
ವೇನೂ ಅಲ್ಲ. ಸಾರ್ವಜನಿಕ ಕಾರ್ಯಗಳಲ್ಲಿ ತೊಡಗಿರುವಾಗ ಉಗ್ರ ಪರಿಸ್ಥಿತಿ
ಯನ್ನು ಎದುರಿಸಲು ಉಗ್ರಕಾರ್ಯಕ್ರಮಗಳನ್ನು ಕೈಕೊಳ್ಳಬೇಕಾಗುತ್ತದೆ.
ಆದರೆ ಈ ಕಾರಣದಿಂದ ಅದರ ಹಿಂದೆ ಇರುವ ನೋವು ಉಪಶಮನವಾಗ
ಲಾರದು.

ದಾದಾಭಾಯಿ ಈ ಸಂತೋಷದಲ್ಲಿ ಭಾಗಿಯಾಗದಿರಲು ಬೇರೆ ಕಾರ
ಣಗಳೂ ಇದ್ದವು. ದರಬಾರಿಗಳು ರೆಸಿಡೆಂಟನ ಪತನವನ್ನು ನಿರೀಕ್ಷಿಸಿರಲಿಲ್ಲ;
ಯಾವ ರೆಸಿಡೆಂಟನನ್ನೂ ಸರಕಾರ ಆ ರೀತಿ ಹಿಂದಕ್ಕೆ ಕರೆಸಿರಲಿಲ್ಲ. ಆದ್ದ
ರಿಂದ ದಂಗೆಯೆಬ್ಬಿಸುವುದಕ್ಕೆ ಸಿದ್ಧತೆಗಳನ್ನು ಮಾಡಿಕೊಂಡಿದ್ದರು
ರಾಜ್ಯದ ಹುಟ್ಟುವಳಿ ಕಡಿಮೆಯಾಗುತ್ತಿತ್ತು. ಕಂದಾಯ ರಿಯಾಯಿತಿ

ತೋರಿಸಿದ್ದರಿಂದ ರಾಜ್ಯಾದಾಯದಲ್ಲಿ ಭಾರಿ ಕೊರೆಯಾಗುವ ಸಂಭವ ವಿತ್ತು. ರೆಸಿಡೆಂಟನ ಕಚೇರಿಯವರ ಬೆಂಬಲದಿಂದ ಪುಂಡರು ಬಾಕಿ ದಾರರಿಗೆ ಕಂದಾಯ ಪಾವತಿ ಮಾಡದಂತೆ ಚಿತಾವಣೆಮಾಡುತ್ತಿದ್ದರು. ಆಡಳಿತದ ಸಾಮಾನ್ಯ ಖರ್ಚುಗಳನ್ನು ನಿರ್ವಹಿಸುವುದಕ್ಕೂ ಖಜಾನೆಯಲ್ಲಿ ಹಣವಿರಲಿಲ್ಲ. ರಾಜಭಾಗವನ್ನು ಕಡಿಮೆ ಮಾಡಲು ಮಹಾರಾಜನು ಒಪ್ಪುತ್ತಿರಲಿಲ್ಲ.

ಈ ಕಷ್ಟಗಳು ಸಾಲವೆಂದು ಮಹಾರಾಜನ ಮೇಲೆ ಒಂದು ದೊಡ್ಡ ಅಪವಾದ ಬಂತು. ಪ್ರತಿದಿನ ಬೆಳಗಿನ ಸಂಚಾರ ಅಥವಾ ಸವಾರಿ ಮುಗಿದ ಮೇಲೆ, ಕರ್ನಲ್ ಫೇಯರನು ಒಂದು ಗ್ಲಾಸು ಷರಬತ್ತು ಕುಡಿಯುವ ಅಭ್ಯಾಸ ವಿಟ್ಟಿದ್ದನು. ನವೆಂಬರ್ ೯ನೆಯ ತಾರೀಕಿನ ಬೆಳಗ್ಗೆ, ಒಂದೆರಡು ಗುಟುಕು ಕುಡಿದವನೆ ಅವನು ಷರಬತ್ತನ್ನು ಎಸೆದು ಬಿಟ್ಟನು. ಕೊಂಚ ಕಾಲದಲ್ಲಿಯೆ ಅವನಿಗೆ ಹೊಟ್ಟೆ ತೊಳಸಿ ಬಂತು, ತಲೆ ಸುತ್ತಲಾರಂಭಿಸಿತು, ವಿಚಿತ್ರವಾದ ಅನುಭವಗಳಾದವು. ಗ್ಲಾಸನ್ನು ಪರೀಕ್ಷಿಸಿ ನೋಡಲಾಗಿ ಅದರ ತಳದಲ್ಲಿ ಗಸಿಯಾದ ಪದಾರ್ಥ ಏನೋ ಇದ್ದದ್ದು ಕಂಡು ಬಂತು. ಅದು ಆರ್ಸೆನಿಕ್ ಮತ್ತು ವಜ್ರದ ಧೂಳಿನಿಂದ ಕೂಡಿದ್ದೆಂದು ರೆಸಿಡೆಂಟನ ಕಚೇರಿಯ ವೈದ್ಯನು ನಿರ್ಧರಿಸಿದನು. ಮಹಾರಾಜನ ಮೇಲೆ ಗುಮಾನಿ ಹುಟ್ಟಿತು.

ಸರ್ ಲೂಯಿ ಪೆಲ್ಲಿ ಬಂದ ಮೇಲೆ ಬರೋಡಾದಲ್ಲಿನ ಸ್ಥಿತಿಗತಿಗಳು ಬದಲಾದವು. ರಾಜ್ಯಾಡಳಿತದ ಯಂತ್ರ ಸಲೀಸಾಗಿ ಚಲಿಸಲಾರಂಭಿಸಿತು. ವ್ಯಾಜ್ಯಗಳೆಲ್ಲ ಒಂದೊಂದಾಗಿ ತೀರ್ಮಾನವಾದವು. ಆದರೆ ತೀರ್ಮಾನದಂತೆ ಕೊಡಬೇಕಾದ ಮೊಬಲಗುಗಳನ್ನು ಕೊಡಲು ಸರಕಾರದಲ್ಲಿ ಹಣವಿರಲಿಲ್ಲ. ರಾಜಭಾಗದಿಂದ ಕೊಡಬೇಕಾಗಿ ದಾದಾಭಾಯಿ ಸೂಚಿಸಿದನು. ಸ್ವಂತ ಪ್ರಯೋಜನಕ್ಕಾಗಿ ಮಹಾರಾಜನು ಅನ್ಯಾಯವಾಗಿ ಬಳಸಿಕೊಂಡ ಸಾರ್ವಜನಿಕ ಹಣದ ಒಂದುಭಾಗ ಈಗ ಸಾರ್ವಜನಿಕರಿಗೇ ಸಲ್ಲುವುದು ನ್ಯಾಯವಾದದ್ದೆಂದು ಪ್ರತಿಪಾದಿಸಿದನು. ರಾಜ್ಯದ ಆಡಳಿತಕ್ಕೆ ಅಗತ್ಯವಾದ ಹಣವನ್ನು ಸಾಲ ಎತ್ತುವುದರಿಂದಾಗಲಿ, ಹೊಸ ತೆರಿಗೆಯಿಂದಾಗಲಿ ಪೂರೈಸಿಕೊಳ್ಳಬೇಕೆಂದು ಮಹಾರಾಜನು ತಿಳಿಸಿದನು.

ದಾದಾಭಾಯಿಯ ವಿಷಯದಲ್ಲಿ ಮಹಾರಾಜನ ವರ್ತನೆ ಬದಲಾಯಿತು. ಭಿನ್ನ ದೃಷ್ಟಿಯು ಇವರ ಮಧ್ಯೆ ಸ್ನೇಹಕ್ಕೆ ಯಾವಾಗಲೂ ಅವಕಾಶವಿರಲಿಲ್ಲ. ಈಗ ಇವರಿವರ ಸಂಬಂಧ ಒಂದು ಬಗೆಯ ಔಪಚಾರಿಕಕ್ಕೆ ಇಟ್ಟುಕೊಂಡಿತು. ದಾದಾಭಾಯಿ ದಕ್ಷ, ಪ್ರಾಮಾಣಿಕ, ಮತ್ತು ಬುದ್ಧಿವಂತ—ಎಂಬುದು ಮಹಾರಾಜನಿಗೆ ಗೊತ್ತು. ಈ ಗುಣಗಳಿಂದ ಪ್ರಜೆಗಳಿಗೆ ಪ್ರಯೋಜನ, ನಿಜ. ಆದರೆ ಅವುಗಳು ತನ್ನ ಹಕ್ಕುಗಳಿಗೂ ಹಿತಾಸಕ್ತಿಗಳಿಗೂ ವಿರೋಧವಾಗಿಲ್ಲವೆ? ಹಳೆಯ ದರಬಾರಿಗಳು ಹಳೆಯ ಆಟವನ್ನು ಹೂಡಿದ್ದರು. ಮಹಾರಾಜನಿಗೆ ಕೇಳಿಸುವಂತೆ ಒಬ್ಬನು "ಈಗೇನು, ದಿವಾನ್ ಸಾಹೇಬರದೇ ಸರ್ವಾಧಿಕಾರವಾಗಿದೆ" ಎನ್ನುವನು. ಇನ್ನೊಬ್ಬನು "ಈಗ ಅವರೇ ಗಾಯಕವಾಡರು ಕಣಯ್ಯ" ಎಂದು ಮಾತು ಬಿಡುವನು. ಮಹಾರಾಜನು "ಸ್ವಲ್ಪ ಇರಿ, ಈ ಮನುಷ್ಯನನ್ನು ಹೇಗೆ ಓಡಿಸುತ್ತೇನೆ ನೋಡುವಿರಂತೆ" ಎನ್ನುವಂತೆ ಮಾರ್ಮಿಕವಾಗಿ ನಗುವನು.

ಇಂಥ ಪ್ರಭುವಿನ ಸೇವೆ ಮಾಡುವುದು ಬಹು ಉಗ್ರವಾದ ಪರೀಕ್ಷೆಗೆ ಒಳಗಾದಂತೆ. ಆದರೆ ಕೊನೆಯ ಪ್ರಯತ್ನವನ್ನು ಮಾಡಿ ನೋಡಿ ಬಿಡುವುದೆಂದು ದಾದಾಭಾಯಿ ನಿರ್ಧರಿಸಿದನು. ಇತ್ತೀಚಿನ ದಿನಗಳಲ್ಲಿ ಮಹಾರಾಜನು ಹಳೆಯ ದರಬಾರಿಗಳ ಕೈಯಲ್ಲಿ ತಿರುಗಿ ಸಿಕ್ಕಿಬಿದ್ದಿರುವುದಾಗಿಯೂ, ದಿವಾನನನ್ನು ಗುಮಾಸ್ತನ ರೀತಿಯಲ್ಲಿ ನಡಸಲುನೋಡುತ್ತಿರುವುದಾಗಿಯೂ, ಹಳೆಯ ದರಬಾರಿಗಳ ವಿಷಯದಲ್ಲಿ ಸಾಧ್ಯವಿರುವ ತಾಳ್ಮೆಯನ್ನೆಲ್ಲ ತೋರಿಸಿ ಈಗ ಅವರನ್ನು ದೇಶದಿಂದ ಹೊರಕ್ಕೆ ಕಳಿಸುವುದು ಅಗತ್ಯವೆಂಬ ನಿರ್ಧಾರಕ್ಕೆ ತಾನು ಬಂದಿರುವುದಾಗಿಯೂ,—ದಾದಾಭಾಯಿ ವಾಡಿಯನ ಸಂಗಡ ಮಹಾರಾಜನಿಗೆ ಹೇಳಿಕಳಿಸಿದನು.

ಮಹಾರಾಜನು ದಿವಾನನಲ್ಲಿ ತನಗೆ ಪೂರ್ಣ ನಂಬಿಕೆಯಿರುವುದಾಗಿ ತಿಳಿಸಿ, ದರಬಾರಿಗಳನ್ನು ಕಳಿಸುವುದು ಸಾಧ್ಯವಿಲ್ಲವೆಂದನು. ಒಂದು ದಿನ ದಾಮೋದರ ಎದುರಿಗಿರುವಾಗ ಮಹಾರಾಜನು ವಾಡಿಯನ ಸಂಗಡ "ದಾದಾಭಾಯಿಗೆ ತಿಳಿಸು, ನಾನು ಮಿಕ್ಕ ದರಬಾರಿಗಳನ್ನೆಲ್ಲ ಕಳಿಸಿಬಿಡಬಹುದು, ಆದರೆ ದಾಮೋದರನನ್ನು ಕಳಿಸಲಾರೆ. ಪ್ರಪಂಚದಲ್ಲಿ ಇಬ್ಬರು ವ್ಯಕ್ತಿಗಳನ್ನು ಬಿಟ್ಟಿರಲಾರೆ—ದಾದಾಭಾಯಿ ಮತ್ತು ದಾಮೋದರ" ಎಂದು

ಹೇಳಿದನು. ದಾಮೋದರ ಪಂತನು ಮಹಾರಾಜನ ಪ್ರಿಯತಮ ಕಾರಭಾರಿಯಾಗಿದ್ದನು. ಆ ಸ್ತ್ರೀ ಪೀಡಕನು ಮಹಾರಾಜನ ಕಾಮಾಭಿಲಾಷೆಗಳನ್ನು ತೀರಿಸುವುದರಲ್ಲಿ ಪರಮ ಸಹಾಯಕನಾಗಿದ್ದನು.

ದಾಮೋದರನೊಡನೆ ತನ್ನ ಹೆಸರನ್ನು ಸೇರಿಸಿದ ಗೌರವಕ್ಕಾಗಿ ಹೊಟ್ಟೆ ತುಂಬ ನಕ್ಕು ದಾದಾಭಾಯಿ ವಾಡಿಯನನ್ನು ಕುರಿತು, "ಹೋಮಿ, ಇದೇ ನಮ್ಮ ಕಡೆಯ ಎಚ್ಚರಿಕೆ. ನಾನು ರಾಜಿನಾಮೆಯನ್ನು ಕೊಡುವುದಾಗಿ ಖಂಡಿತವಾಗಿ ನಿರ್ಧರಿಸಿದ್ದೇನೆಂದು ಆತನಿಗೆ ತಿಳಿಸು. ಆದಷ್ಟು ಬೇಗ ಬಿಡುಗಡೆ ಮಾಡಿದರೆ ನಾನು ಉಪಕೃತ. ನೀನೂ ಮತ್ತು ಇತರರೂ, ನಿಮಗೆ ತೋರಿದಂತೆಮಾಡಿ" ಎಂದು ಹೇಳಿದನು.

"ನಾನೂ ಹೊರಟೆ" ಎಂದನು ವಾಡಿಯು.

"ನಾವೂ ಕೂಡ" ಎಂದರು ಬಾಲ ಮಂಗೇಶ್ ಮತ್ತೂ ಸಹಾಬುದ್ದೀನ್.

ಮಹಾರಾಜನಿಗೆ ಈ ವಿಷಯವನ್ನು ತಿಳಿಸಿದಾಗ ಅವನು ಶವ ಸಂಸ್ಕಾರಕ್ಕೆ :ಹೊರಟ ಮನುಷ್ಯನಂತೆ ಮೌನವಾಗಿದ್ದನು. ಅವನ ಉತ್ತರಕ್ಕೆ ಕಾಯದೆ ವಾಡಿಯ ಹೊರಟು ಹೋದನು

ಕೆಲವು ದಿನಗಳನಂತರ, ಒಂದು ದಿನ, ದಾದಾಭಾಯಿ ಗವರ್ನರ್ ಜನರಲ್‌ನ ಪ್ರತಿನಿಧಿಯಾದ ಸರ್ ಲೂಯಿ ಪೆಲ್ಲಿಯನ್ನು ನೋಡಿಕೊಂಡು ಬಂದವನೇ ತನ್ನ ಆಫೀಸಿಗೆ ಹೋದನು. ಅವನ ಮುಖದಲ್ಲಿ ಕಿರಿಕಿರಿ ತುಂಬಿತ್ತು. ಅವನು ಬಲು ಸೋತಿದ್ದನು. ಅಲ್ಲಿಂದ ತನ್ನ ಕೊಟಡಿಗೆ ಹೋದವನು ಎಷ್ಟು ಹೊತ್ತಾದರೂ ಹೊರಗೆ ಬರಲಿಲ್ಲ. ಸಮಾಚಾರವೇನೆಂದು ತಿಳಿಯಲು ವಾಡಿಯ ಕೊಟಡಿಯೊಳಕ್ಕೆ ಹೋದನು. ತಾವುಗಳೆಲ್ಲರೂ ಸಂಸ್ಥಾನವನ್ನು ಬಿಡುವುದು ಖಂಡಿತವೆಂದು ಸರ್ ಲೂಯಿ ಪೆಲ್ಲಿಗೆ ತಿಳಿಸಿದುದಾಗಿ ದಾದಾಭಾಯಿ ಹೇಳಿದನು. ಪೆಲ್ಲಿ ಬಹು ಮುಖ್ಯವಾದ ಒಂದು ಸಮಾಚಾರವನ್ನು ತಿಳಿಸಿದ್ದನು. ಕರ್ನಲ್ ಫೇಯರನ ಪ್ರಾಣಾಪಹಾರದ ವಿಚಾರಣೆಯಲ್ಲಿ ಒಬ್ಬ ಹವಿಲ್ದಾರನೂ ಇತರರೂ ಮಹಾರಾಜನ ಮೇಲೆ ತಪ್ಪುಹೊರಿಸುವಂತೆ ಒಪ್ಪಿಗೆಯ ಹೇಳಿಕೆಗಳನ್ನು ಕೊಟ್ಟಿದ್ದರು.

ಮಹಾರಾಜನ ಮೇಲೆ ದೊಡ್ಡದಾಗಿ ಅಪಾದನೆ ಬಂದಿರುವ ಸಮಯದಲ್ಲಿ

ತಾನು ಬರೋಡವನ್ನು ಬಿಟ್ಟು ಹೊರಡುವುದು ಸರಿಯೆ ಎಂಬ ಚಿಂತೆಗೊಳಗಾಗಿದ್ದನು ದಾದಾಭಾಯಿ. ಸರ್ ಲೂಯಿಯ ಸಂಗಡ ತಾನು ಅಧಿಕಾರ ತ್ಯಜಿಸಿ ಹೊರಡುವುದು ಖಂಡಿತವೆಂದು ತಿಳಿಸಿದ್ದನು. ದಾದಾಭಾಯಿಯೂ ಅವನ ಸಹೋದ್ಯೋಗಿಗಳೂ, ಕಡೆಗೆ, ಇತರ ಅಧಿಕಾರಿಗಳಿಗೆ ಅಧಿಕಾರವಹಿಸಿದರು. ಆ ಇತರ ಅಧಿಕಾರಿಗಳೂ ಬ್ರಿಟಿಷ್ ಇಂಡಿಯ ಸರಕಾರದಿಂದ ಎರವಲಾಗಿ ಬಂದಿದ್ದವರು. ಅವರೂ ರಾಜಿನಾಮೆಗಳನ್ನು ಸಲ್ಲಿಸಿದ್ದರು. ಆದರೆ ಸರ್ ಲೂಯಿಯ ಅಪ್ಪಣೆಯ ಪ್ರಕಾರ ಅವರು ತಮ್ಮ ಸ್ಥಾನಗಳಲ್ಲಿದ್ದರು.

೧೮೭೫ ನೆಯ ಜನವರಿ ೧೧ ರಲ್ಲಿ ದಾದಾಭಾಯಿಯೂ ಅವನ ಸಹೋದ್ಯೋಗಿಗಳೂ ಬರೋಡಾವನ್ನು ಬಿಟ್ಟರು. ಆ ಸಮಯದಲ್ಲಿ ಗಾಯಕವಾಡನು ರೈಲ್ವೆ ಸ್ಟೇಷನ್ನಿಗೆ ಹೋಗಿ, ಅವರನ್ನು ನಿಲ್ಲುವಂತೆ ಒಪ್ಪಿಸಲು ಪ್ರಯತ್ನಿಸಿದನು. ಗಾಡಿ ಹೊರಡುವವರೆಗೂ ನಿಂತಿದ್ದು ಆಮೇಲೆ ಸಾರೋಟನ್ನು ಹತ್ತಿ ಅರಮನೆಗೆ ಹೊರಟನು. ಸಾರೋಟಿನಲ್ಲಿ ಕುಳಿತವನೇ, ತೊಡೆಯನ್ನು ಚಪ್ಪರಿಸುತ್ತ. ಅಲ್ಲಿದ್ದವರೊಡನೆ "ನೋಡಿದಿರಾ, ಹೇಗೆ ಅವನನ್ನು ತೊಲಗಿಸಿದೆ!" ಎಂದು ನಗುತ್ತ ಹೇಳಿದನು. ಅರೆ ಕುರುಡನಾದ ಆ ಮಹಾರಾಜನು ಕವಿಯುತ್ತಿದ್ದ ಮೋಡಗಳನ್ನು ಕಾಣಲಾರದವನಾಗಿದ್ದನು.

ಅದೇ ದಿನ ಪೂನಾದಿಂದ ಬೊಂಬಾಯಿಗೆ ಸೈನ್ಯಗಳು ರವಾನೆಯಾದವು. ದಾದಾಭಾಯಿಯೂ ಅವನ ಸಂಗಡಿಗರೂ ಬೊಂಬಾಯನ್ನು ಸೇರಿದಾಗ ಬರೋಡಾಕ್ಕೆ ಸೈನ್ಯದ ದಳವೊಂದು ರವಾನೆಯಾಗುತ್ತಿದ್ದುದನ್ನು ಕಂಡರು. ಎರಡು ದಿನಗಳನಂತರ ಇನ್ನೊಂದು ದಳ ರವಾನೆಯಾಯಿತು. ಸೈನ್ಯ ಬಂದಿಳಿಯುತ್ತಿರುವುದನ್ನು ಕೇಳಿ ಮಲ್ಹಾರರಾವ್ ಏನೋ ವಿಪತ್ತು ಹತ್ತಿರ ಬರುತ್ತಿದೆಯೆಂದು ತಿಳಿದನು. ದಾದಾಭಾಯಿಯನ್ನು ಬರುವಂತೆ ಪ್ರಾರ್ಥಿಸಿ ಅವನಿಗೆ ತಂತಿ ಕಳಿಸಿದನು.

ಮಹಾರಾಜನ ಸಹಾಯಕ್ಕೆ ಹೋಗುವುದೇ ಹೇಗೆ ಎಂದು ದಾದಾಭಾಯಿ ಚಿಂತಿಸುತ್ತಿದ್ದನು. ವಾಡಿಯ ಅವನನ್ನು ಕಾಣುವುದಕ್ಕಾಗಿ ಹೋಗುತ್ತಿದ್ದಾಗ ಮಾರ್ಗದಲ್ಲಿ, 'ಟೈಂಸ್ ಆಫ್ ಇಂಡಿಯಾ' ಆಫೀಸಿನ ಮುಂದೆ, "ಮಲ್ಹಾರರಾವ್‌ನ ದಸ್ತಗಿರಿ" ಎಂದು ಬರೆದಿದ್ದ ಪ್ರಕಟನ ಪತ್ರಿಕೆಯನ್ನು ನೋಡಿದನು. "ಈಗ ಹೋಗುವುದರಿಂದ ಪ್ರಯೋಜನವೇನು?

ದುಷ್ಕರ್ಮಫಲ ಅವನ ಬೆನ್ನು ಹತ್ತಿದೆ" ಎಂದು ದಾದಾಭಾಯಿಗೆ ಹೇ
ದನು.

ಜನವರಿ ೧೪ ನೆಯ ತಾರೀಕಿನ ದಿನ ಎಂದಿನಂತೆ ಮಹಾರಾಜ
ವೈಸರಾಯರ ಪತ್ರಿನಿಧಿಯನ್ನು ನೋಡಲು ಹೋದಾಗ, ಅವನನ್ನು ಅಧಿಕ
ದಿಂದ ತಪ್ಪಿಸಿರುವಂತೆ ಇಂಡಿಯಾ ಸರಕಾರದಿಂದ ಪ್ರಸಿದ್ಧ ಪತ್ರಿಕೆ ಬಂದಿ
ವುದಾಗಿ ತಿಳಿಸಲಾಯಿತು.

ಆ ಮೇಲೆ ನೇಮಕವಾದ ವಿಚಾರಣಾ ಸಮಿತಿಯ ಮುಂದೆ ಮಹಾ
ಜನ ನಚ್ಚಿನ ಕಾರಭಾರಿಯಾಗಿದ್ದ ದಾಮೋದರ ಪಂತನು ಮಹಾರಾ
ಮೇಲೆ ತಪ್ಪು ಹೊರಿಸುವಂಥ ಹೇಳಿಕೆಯನ್ನುಕೊಟ್ಟನು. ಆ ದ್ರೋಹಿ ಮು
ವೆತ್ತಿ ಮಹಾರಾಜನನ್ನು ನೋಡಲಾರದೆ ತಲೆ ತಗ್ಗಿಸಿ ಮೆಲುದನಿಯ
ಮಾತಾಡುತ್ತಿದ್ದನು. ಅವನ ವಿಚಾರಣೆ ಮುಗಿದ ಮೇಲೆ ಮಹಾರಾಜ
ವಾಡಿಯನ ಕಡೆಗೆ ತಿರುಗಿ "ಈ ಪಾಪಿಯ ಪ್ರೇರಣೆಯಿಂದ ನಿಮ್ಮ
ವಿಚಾರದಲ್ಲಿ ನಾನು ತಪ್ಪು ಮಾಡಿದೆ. ನಿಮ್ಮೆಲ್ಲರನ್ನೂ ದೂರ ಮಾಡಿ
ಆದರೂ ನೀವು ನನ್ನ ಸಹಾಯಕ್ಕೆ ಬಂದಿದ್ದೀರಿ, ಆತ್ಮೀಯನೆಂದು ತಿಳಿದಿ
ಈ ಪಟಿಂಗನಾದರೊ ನನಗೆ ವಿರೋಧವಾಗಿ ಒಳಸಂಚು ನಡಸಿದ್ದಾನೆ
ಎಂದು ದುಃಖದಿಂದ ನುಡಿದನು.

ಮಲ್ಹಾರರಾಯನ ಮೇಲಿನ ಆಪಾದನೆಯ ವಿಷಯದಲ್ಲಿ ಸಮಿತಿ
ವರಲ್ಲಿ ಭಿನ್ನಾಭಿಪ್ರಾಯವಿತ್ತು. ಕರ್ನಲ್ ಫೇಯರನಿಗೆ ವಿಷಹಾಕುವ ಕಾ
ದಲ್ಲಿ ಮಹಾರಾಜನು ಭಾಗಿಯಾಗಿದ್ದನೆಂದು ರುಜುವಾತು ಮಾಡುವು
ಸಾಧ್ಯವಾಗಲಿಲ್ಲ ಆದಾಗ್ಯೂ ಇತರ ಕಾರಣಗಳಿಗಾಗಿ—ಅತಿವರ್ತನೆ ದು
ಡಳಿತಗಳಿಗಾಗಿ—ಅವನನ್ನು ಪದಚ್ಯುತನನ್ನಾಗಿ ಮಾಡಬೇಕೆಂದು ಬ್ರಿಟಿ
ಸರಕಾರ ನಿರ್ಧರಿಸಿತು. ಖಂಡೇರಾಯನ ಪತ್ನಿ ಮಹಾರಾಣಿ ಸಾಹೇ
ಜಮ್ನಾ ಬಾಯಿಗೆ ಉತ್ತರಾಧಿಕಾರಿಯಾಗಿ ಒಬ್ಬನನ್ನು ದತ್ತು ತೆಗೆ
ಕೊಳ್ಳುವ ಅವಕಾಶ ದೊರೆಯಿತು. ಆಕೆ, ಮುಂದೆ ಬರೋಡಾಕ್ಕೆ ಜೀವ
ಯನ್ನು ತಂದು, ಅದರ ಚರಿತ್ರೆಯನ್ನು ಬದಲಾಯಿಸಿ, ಗಾಯಕವ
ಎಂಬ ಹೆಸರನ್ನು ಅವನತಿಯಿಂದ ಕೀರ್ತಿಗೊಯ್ದು ಪ್ರಸಿದ್ಧನಾದ, ಸ
ಸಯ್ಯಾಜಿರಾವ್ ಗಾಯಕವಾಡನನ್ನು ದತ್ತು ತೆಗೆದುಕೊಂಡಳು.

# ೧೫. ಪೌರಸಭೆಯಲ್ಲಿ

ಬರೋಡಾದಲ್ಲಿ ದಾದಾಭಾಯಿ ಹದಿಮೂರು ತಿಂಗಳುಗಳ ಕಾಲ ಇದ್ದನು. ಕೋಲಾಹಲಕರವಾದ ಆ ಹದಿಮೂರು ತಿಂಗಳುಗಳಲ್ಲಿ ಅವನಿಗೆ ಹದಿಮೂರು ವರ್ಷಗಳ ವಯಸ್ಸು ಸಂದಂತೆ ಆಗಿತ್ತು. ಅದರಿಂದ ಅವನು ನಿರುತ್ಸಾಹಗೊಂಡನೆ? ಎಂದಿಗೂ ಇಲ್ಲ. ಸ್ವಕ್ಷೇತ್ರದ ಕಾರ್ಯಗಳಿಂದ ಅಗಲು ವಂತಾದದ್ದು ದುಃಖಕರವಾಗಿರಬೇಕು. ಆದರೆ ಈ ಅಲ್ಪಾವಧಿಯಲ್ಲಿ ಅವನು ಸಾಧಿಸಿದ ಕಾರ್ಯಗಳ ವಿಷಯದಲ್ಲಿ ಹೆಮ್ಮೆ ಪಡಬಹುದಾಗಿತ್ತು. ಸದಾಡಳಿತದ ಮಾರ್ಗದಲ್ಲಿ ಅವನು ಸಂಸ್ಥಾನವನ್ನು ವೇಗವಾಗಿ ನಡಸಿ ಕೊಂಡು ಹೋಗಿದ್ದುದರಿಂದ ಅವನ ನಂತರ ಬಂದವರೂ ಅನಿವಾರ್ಯವಾಗಿ ಆ ಪಥದಲ್ಲಿ ಮುಂದುವರಿಯಬೇಕಾಯಿತು.

ಹವಾ ಬದಲಾವಣೆಗಾಗಿಯೂ ವಿಶ್ರಾಂತಿಗಾಗಿಯೂ ದಾದಾಭಾಯಿ ವೈದ್ಯರ ಸಲಹೆಯ ಪ್ರಕಾರ ಬಲ್ಸಾರಿನ ಬಳಿಯಿರುವ ತೈಥಾಲಿಗೆ ಹೋದನು. ನಾಲ್ಕು ತಿಂಗಳ ಕಾಲ ಅಲ್ಲಿ ಇದ್ದು ಬೊಂಬಾಯಿಗೆ ಹಿಂದಿರುಗಿದನು. ೧೮೭೫ ರ ಜುಲೈ ೨೬ ರಲ್ಲಿ ಮ್ಯುನಿಸಿಪಲ್ ಕಾರ್ಪೊರೇಷನ್ನಿನ ಸದಸ್ಯನಾಗಿ, ೫೦ ವರ್ಷಗಳ ಕೆಳಗೆ ಯಾವ ಸ್ಥಳದಲ್ಲಿ ಹುಟ್ಟಿದ್ದನೋ ಅದೇ ಕ್ಷೇತ್ರದಿಂದ, ಚುನಾಯಿತನಾದನು. ಪೌರಸಭೆಯಲ್ಲಿ ಬಹು ಬೇಗ ಹೆಸರು ಪಡೆದನು. ಸಾರ್ವಜನಿಕ ಹಣಕಾಸಿನ ವಿಚಾರದಲ್ಲಿ ಅವನಿಗಿದ್ದ ತಿಳಿವಳಿಕೆಯೂ, ಗಣಿತ ಶಾಸ್ತ್ರದ ನೈಪುಣ್ಯವೂ, ಅಂಕಿ ಅಂಶಗಳನ್ನು ತಕ್ಕ ರೀತಿಯಲ್ಲಿ ಜೋಡಿಸುವು ದರಲ್ಲಿದ್ದ ಕೌಶಲವೂ, ಪೌರಸಂಸ್ಥೆಯಲ್ಲಿ ವಿಶೇಷವಾಗಿ ಉಪಯೋಗ ವಾದವು. ಮೂರು ತಿಂಗಳೊಳಗೆ ಅವನು ಕಾರ್ಯಕಾರೀ ಸಮಿತಿಯಾದ ಟೌನ್ ಕೌನ್ಸಿಲ್‌ನ ಸದಸ್ಯನಾದನು. ಆ ಸಭೆಯಲ್ಲಿ ಪ್ರತಿಹಾಜರಿಗೂ ರೂ. ೩೦ ಗಳ ಸಂಭಾವನೆ ಸಲ್ಲುತ್ತಿತ್ತು. ಪೌರಸಭೆಯ ಕಾರ್ಯವನ್ನು ದಾದಾಭಾಯಿ ಸಮಾಜ ಸೇವೆಯೆಂದು ತಿಳಿದಿದ್ದುದರಿಂದ ಸಂಭಾವನೆಯನ್ನು ತೆಗೆದುಕೊಳ್ಳು ವುದಿಲ್ಲವಾಗಿ ಕಾರ್ಯದರ್ಶಿಗೆ ತಿಳಿಸಿದನು.

'ವೇಹಾರ್ ನೀರು ಸರಬರಾಯಿ' ನಿರ್ಮಾಣಕ್ಕಾಗಿ ಮುಂಬಯಿ-

ಪೌರಸಂಸ್ಥೆಯು ಸರಕಾರದಿಂದ ಸಾಲ ಪಡೆದಿತ್ತು. ಆ ಸಾಲದ ಕಂತನ್ನೂ ಬಡ್ಡಿಯನ್ನೂ ಲೆಕ್ಕ ಹಾಕುವುದರಲ್ಲಿ ಅಕೌಂಟೆಂಟ್ ಜನರಲನು ಅನುಸರಿಸಿದ ಮಾರ್ಗದಿಂದ ಪೌರಸಂಸ್ಥೆ ಸರಕಾರಕ್ಕೆ ೫೦ ಲಕ್ಷ ರೂಪಾಯಿಗಳಷ್ಟು ಹೆಚ್ಚಾಗಿ ಹಣವನ್ನು ಕೊಡಬೇಕಾಗುತ್ತಿತ್ತು. ಈ ವಿಷಯವನ್ನು ಕಂಡು ಹಿಡಿದು ದಾದಾಭಾಯಿ ದೀರ್ಘ ವರದಿಯೊಂದನ್ನು ತಯಾರಿಸಿದನು. ಅಕೌಂಟೆಂಟ್ ಜನರಲ್ ತಾನು ಹಿಡಿದಿರುವ ಮಾರ್ಗ ಮ್ಯುನಿಸಿಪಲ್ ಕಾನೂನಿಗೆ ವಿರೋಧವಾಗಿದೆಯೆಂದು ಒಪ್ಪಲಿಲ್ಲ. ಆಗ ದಾದಾಭಾಯಿ ತನ್ನ ರೀತಿಯನ್ನೂ ವಾದವನ್ನೂ ಸಮರ್ಥಿಸಲು ಹೆಚ್ಚು ವರದಿಗಳನ್ನು ತಯಾರಿಸಬೇಕಾಯಿತು. ಅಲ್ಲಿ ಪರಿಹಾರ ದೊರೆಯದಿರಲು ಇಂಡಿಯದ ಸ್ಟೇಟ್ ಸೆಕ್ರೆಟರಿಗೆ ನಿವೇದಿಸಬೇಕಾಯಿತು. ಆದರೆ ಈ ವಾದಗ್ರಸ್ತ ವಿಷಯ ತೀರ್ಮಾನವಾಗುವುದರೊಳಗೇ, ದಾದಾಭಾಯಿ ತನ್ನ ವರ್ತಕ ಸಂಘದ ವ್ಯವಹಾರಗಳನ್ನು ನೋಡಿಕೊಳ್ಳಲು ಇಂಗ್ಲೆಂಡಿಗೆ ಹೋಗಬೇಕಾಗಿ ಬಂದದ್ದರಿಂದ, ೧೮೭೬ ರ ಆಗಸ್ಟಿನಲ್ಲಿ ಪೌರಸಂಸ್ಥೆಯ ಸದಸ್ಯತ್ವಕ್ಕೆ ರಾಜಿನಾಮೆ ಕೊಟ್ಟನು.

ವೇಹಾರ್ ಸಾಲದ ಸಂಬಂಧವಾಗಿ ದಾದಾಭಾಯಿ ಸಂಗ್ರಹಿಸಿದ ವಸ್ತುವಿಷಯಗಳನ್ನು ನೋಡಿ ಅವನ ಸಹೋದ್ಯೋಗಿಗಳು ಆಶ್ಚರ್ಯಪಟ್ಟಿದ್ದರು. ಆದರೆ ಅದಕ್ಕಿಂತಲೂ ಜಟಿಲವಾದ, ಶಾಸ್ತ್ರತಂತ್ರೀಯವಾದ, ವಿಷಯವೊಂದನ್ನು ಕುರಿತು ಅವನು ಸಮಗ್ರವಾದ ವರದಿಯನ್ನು ತಯಾರಿಸಿದ್ದನು. ನೀರು ಸರಬರಾಯಿ ಇಲಾಖೆಯವರು ವಿಪರೀತ ಖರ್ಚಿನ ಅಂದಾಜಿನಲ್ಲಿ ಮತ್ತೊಂದು ಯಂತ್ರಾಲಯದ ನಿರ್ಮಾಣವನ್ನು ಸೂಚಿಸಿದ್ದರು. ನಗರಕ್ಕೆ ದಿನವೂ ಎಷ್ಟು ನೀರು ಸರಬರಾಜಾಗುತ್ತಿದೆ ಎಂಬ ಲೆಕ್ಕವನ್ನು ತನಿಖೆ ಮಾಡಿದಲ್ಲಿ, ಅಧಿಕವಾಗಿ ಬೇಕಾದ ನೀರಿನ ಪ್ರಮಾಣವನ್ನು ಗೊತ್ತು ಹಿಡಿಯಬಹುದಾಗಿತ್ತು. ಆದ್ದರಿಂದ ದಾದಾಭಾಯಿ ನೀರಿನ ಇಲಾಖೆಯವರನ್ನು ಅನೇಕ ವಿವರಗಳನ್ನು ಕೇಳಿದನು ಅವನು ಕೇಳಿದ ವಿವರಗಳನ್ನೆಲ್ಲ ಕೊಡಲು ತಕ್ಕ ಸಿಬ್ಬಂದಿಯಿಲ್ಲವೆಂಬ ಉತ್ತರ ಬಂತು. ವಿಷಯವನ್ನು ಅಲ್ಲಿಗೇ ಬಿಡದೆ ದಾದಾಭಾಯಿ ಸ್ವತಂತ್ರನಾಗಿ ವಿಷಯವನ್ನು ಪರೀಕ್ಷಿಸಲು ಪ್ರಯತ್ನಪಟ್ಟನು. ತಾನೇ ಲೆಕ್ಕಗಳನ್ನು ಹಾಕಿ, ಇಲಾಖೆ

ಯವರು ನೀರನ್ನು ಸರಬರಾಯಿ ಮಾಡುತ್ತಿದ್ದ ರೀತಿ ದೋಷಯುತವಾಗಿ ದೆಯೆಂಬ ನಿರ್ಧಾರಕ್ಕೆ ಬಂದನು; ನಗರದ ಪ್ರತಿಯೊಬ್ಬ ಪ್ರಜೆಗೆ ದಿನಕ್ಕೆ ೧೪ ಗ್ಯಾಲನ್ನುಗಳಂತೆ ನೀರನ್ನು ಸರಬರಾಯಿ ಮಾಡಬಹುದೆಂದು ತೋರಿಸಿ ಕೊಟ್ಟನು. ಆ ವರದಿಯನ್ನು ಇಲಾಖೆಯವರ ವಿಮರ್ಶೆಗೆ ಕಳಿಸಬೇಕೆಂದು ತೀರ್ಮಾನವಾಯಿತು. ಆ ಸಂಬಂಧವಾಗಿ ಮ್ಯುನಿಸಿಪಲ್ ಕಮಿಷನರ ವರದಿ ಸಿದ್ಧವಾಗುವ ವೇಳೆಗೆ ದಾದಾಭಾಯಿ ಸದಸ್ಯತನವನ್ನು ಬಿಟ್ಟಿದ್ದನು. ಅವನ ರಾಜಿನಾಮೆ ಪತ್ರ ಟೌನ್ ಕೌನ್ಸಿಲಿನ ಮತ್ತು ಕಾರ್ಪೊರೇಷನ್ನಿನ ಮುಂದೆ ಬಂದಾಗ, ಅವನಿಗೆ ವಿಶೇಷ ವಂದನೆಗಳನ್ನು ಸಲ್ಲಿಸುವ ನಿರ್ಣಯ ಗಳಾದವು. ಅದು ಅಪೂರ್ವವಾದ ಗೌರವವಾಗಿತ್ತು.

# ೧೬. ಇಂಡಿಯಾ ದೇಶದ ಪರಿಸ್ಥಿತಿ

ದಾದಾಭಾಯಿ ೧೮೭೬ ರಲ್ಲಿ ಪೌರ ಸಂಸ್ಥೆಯ ಸದಸ್ಯನಾಗಿ ಎಸಗಿದ ಕಾರ್ಯ ಸ್ಮರಣೀಯವಾಗಿದೆ. ಅದೇ ವರ್ಷ ಅವನು ಹೆಚ್ಚು ಸ್ಮರಣೀಯವಾದ ಕಾರ್ಯವೊಂದನ್ನು ನಡಸಿದನು. ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನ ಬೊಂಬಾಯಿ ಶಾಖೆಯ ಆಶ್ರಯದಲ್ಲಿ ಸೇರಿದ ತುಂಬಿದ ಸಭೆಯಲ್ಲಿ, ಇಂಡಿಯಾ ದೇಶದ ಬಡತನವನ್ನು ಕುರಿತು ಲೇಖನವನ್ನೋದಿದನು. ಎರಡು ವರ್ಷ ಗಳ ನಂತರ, ಅದು ಲಘು ಪುಸ್ತಕ ರೂಪದಲ್ಲಿ, ಲಂಡನ್ನಿನಲ್ಲಿ, ಪ್ರಕಟ ವಾಯಿತು. ಅಂಕಿ ಅಂಶಗಳನ್ನು ಆಧರಿಸಿ ಬರೆದಿದ್ದರೂ, ತಕ್ಕ ಸಾಮುಗ್ರಿ. ಮತ್ತು ಸಿಬ್ಬಂದಿಯ ಅಭಾವದಿಂದ, ಲೇಖನದಲ್ಲಿ ಕಾಣಿಸಿದ ಫಲಿತಾಂಶ ಗಳು ಸ್ಥೂಲ ರೀತಿಯವೆಂದು ವ್ಯಕ್ತಪಡಿಸಿದನು.

ಬಹು ಪರಿಷ್ಕಾರವಾದ ಲೆಕ್ಕಗಳನ್ನು ಮಾಡಿದ ನಂತರ, ದಾದಾಭಾಯಿ ಇಂಡಿಯದ ಅತ್ಯುತ್ತಮ ಪ್ರಾಂತವೊಂದರ ಉತ್ಪನ್ನ ತಲೆಯೊಂದರ ವರ್ಷಕ್ಕೆ ೨೦ ರೂ. ಮಾತ್ರ ಎಂದು ದೃಢಪಡಿಸಿದನು. ದೇಶದ ಇಡೀ ಜನ ಸಂಖ್ಯೆಯ ತಲೆಯೊಂದರ ವಾರ್ಷಿಕ ಉತ್ಪನ್ನ ಇಷ್ಟೇ ಎಂದು ಹಿಂದೆ ಮಾಡಿದ ಉದಾರವಾದ ಅಂದಾಜನ್ನೇ ಈಗಲೂ ಲೆಕ್ಕದಿಂದ ಸಮರ್ಥಿಸಿ ದನು.

ದೇಶದ ಆಮದು ರಫ್ತಿಗೆ ಸಂಬಂಧಪಟ್ಟ ಅಂಕಿಗಳನ್ನು ಆ ಮೇಲೆ ವಿಮರ್ಶಿಸಿದನು. ೧೮೩೫ ರಿಂದ ೧೮೭೨ ರವರೆಗೆ ಇಂಡಿಯಾ £ ೯೪೩,೦೦೦,೦೦೦ ಬೆಲೆಯ ಸಾಮಾನುಗಳನ್ನು ಆಮದುಮಾಡಿತು; £ ೧,೪೩೦,೦೦೦,೦೦೦ ಬೆಲೆಯ ಸಾಮಾನುಗಳನ್ನು ರಫ್ತುಮಾಡಿತು; ಇದರಿಂದ ಉಳಿತಾಯವಾದದ್ದು ಸುಮಾರು £ ೫೦೦,೦೦೦,೦೦೦ ಮಾತ್ರ. ಈ ಪರಿಸ್ಥಿತಿಯನ್ನು ಬ್ರಿಟಿಷರಿಗೆ ಮನದಟ್ಟು ಮಾಡಿಕೊಡಲು, ಪೋಪನಿಗೆ ಅಧೀನವಾಗಿದ್ದ ಇಂಗ್ಲೆಂಡಿನ ಚಿತ್ರವನ್ನು ಅವರ ನೆನಪಿಗೆ ತಂದನು.

ದೇಶದಲ್ಲಿ ದೊಡ್ಡಪ್ರಮಾಣದಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸುವುದು ಆವಶ್ಯಕವೆಂದು ಹೇಳಿದನು. ಕೈಗಾರಿಕೆಗಳ ಸ್ಥಾಪನೆಗೆ ಬಂಡವಾಳ ಅಗತ್ಯವಾಗಿ ಬೇಕು. ಇಂಡಿಯಾದಲ್ಲಿ ಅದಕ್ಕೆ ಕೊರತೆ. ಕಾರಣ : ದೇಶದ ಐಶ್ವರ್ಯವೆಲ್ಲ ಇಂಗ್ಲೆಂಡಿಗೆ ಹರಿದುಹೋಗುತ್ತಿದೆ. ಆದ್ದರಿಂದ ಈ ದೇಶದ ವಾಣಿಜ್ಯ ಕೈಗಾರಿಕೆಗಳ ಅಭಿವೃದ್ಧಿಗಾಗಿ ಇಂಗ್ಲೆಂಡಿನಿಂದ ಸುಲಭ ದರದಲ್ಲಿ ಬಂಡವಾಳವನ್ನು ಪಡೆಯಲು ನಮಗೆ ಹಕ್ಕಿದೆ.

ಲೇಖನ ಅಪೂರ್ಣವಾಗಿದ್ದರೂ ಅದು ಆ ವಿಷಯದ ಮೇಲೆ ಹೆಚ್ಚು ಬೆಳಕು ಬೀರುವ ಪ್ರಬಂಧವಾಗಿತ್ತು. ಅದರಲ್ಲಿನ ಪರಿಶೀಲನೆಯ ರೀತಿ ಸ್ಥೂಲವಾಗಿತ್ತು; ಅಂಕಿ ಅಂಶಗಳನ್ನು ಒರೆಹಚ್ಚಿ ತೂಗಿದ ರೀತಿಯೆಲ್ಲ ಅಪನವೇ ಆಗಿತ್ತು; ಕಾರ್ಯಕಾರಣಗಳನ್ನು ಹೊಂದಿಸಿದ ರೀತಿಯೂ, ತೀರ್ಮಾನಕ್ಕೆ ಬರಲು ಅವಲಂಬಿಸಿದ ತತ್ತ್ವಗಳೂ ಚರ್ಚಾಸ್ಪದವಾಗಿದ್ದವು. ಆದರೂ ರಾಷ್ಟ್ರೀಯ ವರಮಾನದ ಅವನ ಅಂದಾಜು, ಆಗಿನ ಸ್ಥಿತಿಯಲ್ಲಿ, ಎಷ್ಟುಮಟ್ಟಿಗೆ ಸಾಧ್ಯವಿತ್ತೊ ಅಷ್ಟು ಕರಾರುವಾಕ್ಕಾಗಿ, ಇದ್ದವು. ತಾರ್ಕಣೆಯಾಗಿ, ೧೮೮೨ ರಲ್ಲಿ ಎವೆಲಿನ್ ಬೇರಿಂಗ್ (ಲಾರ್ಡ್ ಕ್ರೋಮರ್) ಮತ್ತು ಸರ್ ಡೇವಿಡ್ ಬಾರ್ಬರ್ ಇವರು ಲೆಕ್ಕಮಾಡಿದ ಪ್ರಕಾರ ತಲೆಯೊಂದಕ್ಕೆ ೨೭ ರೂ. ಗಳ ವರಮಾನವಾಗುತ್ತದೆಂದು ಅಂದಾಜುಮಾಡಿದ್ದನ್ನು ಉದಾಹರಿಸಬಹುದು. ಕರ್ಜನ್ನಿನ ಅಂದಾಜಿನ ಪ್ರಕಾರ ೧೯೦೧ ರಲ್ಲಿ—ಈ ನಡುವಣ ಕಾಲದಲ್ಲಿ ವ್ಯವಸಾಯ ಮತ್ತು ಕೈಗಾರಿಕೆಗಳಿಂದ ಉತ್ಪನ್ನ ಹೆಚ್ಚಿದ್ದರೂ—ವರಮಾನ ೩೦ ರೂ. ಗಳು ಮಾತ್ರವಾಗಿತ್ತು.

ಈಸ್ಟ್ ಇಂಡಿಯಾ ಅಸೋಸಿಯೇಷನ್ ಆರಂಭವಾದಂದಿನಿಂದ ದಾದಾಭಾಯಿಯ ವ್ಯಾಪಾರ ಹಿಂದಕ್ಕೆ ಬಿದ್ದಿತ್ತು. ೧೮೭೬ ರ ಅಂತ್ಯ ಭಾಗದ ವೇಳೆಗೆ ಅವನು ವ್ಯಾಪಾರದಲ್ಲಿ ತೀವ್ರಾಸಕ್ತಿಯನ್ನು ವಹಿಸಬೇಕಾಯಿತು. ಯಾಕೆಂದರೆ ಈ ಕಾಲದಲ್ಲಿ ಅನೇಕ ಆರ್ಥಿಕವಾದ ತೊಂದರೆಗಳು ತಲೆದೋರಿದ್ದವು.

ಕೆಲಸಗಳೂ ತೊಂದರೆಗಳೂ ಹೆಚ್ಚುತ್ತಿದ್ದರೂ ಇಂಡಿಯಾದ ಆರ್ಥಿಕ ಸ್ಥಿತಿಯ ಸಂಶೋಧನೆಯಲ್ಲಿ ಅವನಿಗಿದ್ದ ಆಸಕ್ತಿ ಕಡಿಮೆಯಾಗಲಿಲ್ಲ. ಈಸ್ಟ್ ಇಂಡಿಯಾ ಕಂಪೆನಿಯ ಕಾಲದಿಂದ ಆಂಗ್ಲೇಯರಿಗೆ ಪಾವತಿಯಾಗುತ್ತಿದ್ದ ಸಂಬಳದ ವಿವರಗಳನ್ನು ಸಂಗ್ರಹಿಸುವುದರಲ್ಲಿ ತೊಡಗಿದನು. ಆ ಉದ್ದೇಶದಿಂದ ಅನೇಕ ಪುಸ್ತಕಗಳಿಗಾಗಿ ಇಂಗ್ಲೆಂಡಿನ ಪುಸ್ತಕ ವ್ಯಾಪಾರಿಗಳಿಗೆ ಪತ್ರ ಬರೆದನು. ಅವನ ಹಾಗೆ ಸರ್ಕಾರದ ವರದಿ ಪುಸ್ತಕಗಳನ್ನು ಕೊಳ್ಳುವವರೇ ಇರಲಿಲ್ಲ. ತನಗೆ ನೇರವಾಗಿ ದೊರೆಯದ ಪುಸ್ತಕಗಳಿಗಾಗಿ ದಾದಿ ಕಾಮಾನಿಗೆ ಬರೆದನು. ದಾದಿ ಕಾಮಾ ಇಂಗ್ಲೆಂಡಿನಲ್ಲಿ ದಾದಾಭಾಯಿಯ ವ್ಯಾಪಾರ ವ್ಯವಹಾರಗಳನ್ನು ನೋಡಿಕೊಂಡಿದ್ದನು. ಕಾಮಾ ಅವನಿಗಾಗಿ ಇಂಗ್ಲೆಂಡಿನಲ್ಲಿ ಸರಕಾರದ ವರದಿಗಳನ್ನು ಗಾಡಿಗಟ್ಟಲೆಯಾಗಿ ಕೊಳ್ಳುತ್ತಿದ್ದನು.

ಇದೇ ರೀತಿ ದಾದಾಭಾಯಿ ಇಂಡಿಯಾದಲ್ಲೂ ಪುಸ್ತಕಗಳನ್ನೂ ವರದಿಗಳನ್ನೂ ಹುಡುಕುತ್ತಿದ್ದನು. ಉದಾಹರಣೆಗೆ ಮದ್ರಾಸ್ ಯೂನಿವರ್ಸಿಟಿ ಕ್ಯಾಲೆಂಡರಿನಲ್ಲಿ ವಿಶ್ವವಿದ್ಯಾನಿಲಯ ಸ್ಥಾಪಿತವಾದಂದಿನಿಂದ ಆ ವರೆಗಿನ ಅಪದವೀಧರರ ಪೂರ್ಣ ಪಟ್ಟಿ ದೊರೆಯುತ್ತಿರಲಿಲ್ಲ. ದಾದಾಭಾಯಿ ಅದಕ್ಕಾಗಿ ರಿಜಿಸ್ಟ್ರಾರರಿಗೇ ಕಾಗದ ಬರೆದನು.

ಸಮಾಜ ಸ್ವಾಮ್ಯವಾದಿಯಾದ ಎಚ್. ಎಂ. ಹೈಂಡ್‌ಮನ್ ಎಂಬಾತನು ಭಾರತದ ಆರ್ಥಿಕ ವಿಚಾರಗಳನ್ನು ಆಸಕ್ತಿಯಿಂದ ವ್ಯಾಸಂಗಮಾಡುತ್ತಿದ್ದನು; ಇಂಡಿಯಾದಲ್ಲಿನ ಬ್ರಿಟಿಷರ ಆಡಳಿತದ ಉಗ್ರ ವಿಮರ್ಶಕನಾಗಿದ್ದನು. ದಾದಾಭಾಯಿ ಬ್ರಿಟಿಷ್‌ಜನರಿಗೆ ಭಾರತದ ಬಡತನದ ವಿಚಾರವನ್ನು ತಿಳಿಸುವುದಕ್ಕೆ ಆರಂಭಿಸಿದಂದಿನಿಂದ ಹೈಂಡ್‌ಮನ್ನನೊಡನೆ ವಿಚಾರ ವಿನಿಮಯಕ್ಕೆ ಮೊದಲಾಯಿತು. ಅವರಿಬ್ಬರ ಪರಿಚಯ ಮೊದಲಾದ ಬಗೆಯನ್ನು

ಹೈಂಡ್‌ಮನ್ ತನ್ನ ಜೀವನ ಸ್ಮೃತಿಯಲ್ಲಿ ವಿವರಿಸಿದ್ದಾನೆ.

ನಾನು ಲೇಖನವನ್ನು ಮುಗಿಸಿ 'ನೈಂಟೀನ್ತ್ ಸೆಂಚುರಿಗೆ' ಕಳಿಸುವುದರಲ್ಲಿದ್ದೆ. ಅದರಲ್ಲಿ ಅಂಕಿ ಅಂಶಗಳ ಭಾಗವನ್ನು ಸ್ಪಷ್ಟವಾಗಿಯೂ ಸಮಂಜಸವಾಗಿಯೂ ನಮೂದಿಸಿಲ್ಲವೆಂದುಕೊಳ್ಳುತ್ತ, ಕಿಂಗ್ಸ್ ಪುಸ್ತಕದ ಅಂಗಡಿಗೆ ಹೋದೆ........ಅಂಗಡಿಯಿಂದ ಹೊರಡುತ್ತಿರುವಾಗ ರಟ್ಟು ಹರಿದು ಹೋದ ಒಂದು ಲಘುಪುಸ್ತಕವನ್ನು ಕಂಡೆ. ಬಿಳಿಯ ಕಾಗದದ ಮೇಲೆ ದಪ್ಪ ಅಕ್ಷರಗಳಲ್ಲಿ 'The Poverty of India' ('ಇಂಡಿಯಾ ದೇಶದ ಬಡತನ') ಎಂದು ಅಚ್ಚಾಗಿರುವುದು ನನ್ನ ಕಣ್ಣಿಗೆ ಹೊಡೆಯಿತು. ಪುಸ್ತಕದ ರಟ್ಟು ಹಾಗೇ ಇದ್ದಿದ್ದರೆ ಅದು ನನ್ನ ಕಣ್ಣಿಗೆ ಬೀಳುತ್ತಿರಲಿಲ್ಲ. 'ಅದು ಏನೋ?' ಎಂದು ಕೇಳಿದೆ. 'ಅಂಕಿಗಳ ಕಂತೆ' ಎಂಬ ಉತ್ತರ ಬಂತು. ಕೂಡಲೇ ನಾನದನ್ನು ತೆಗೆದುಕೊಂಡು ನೋಡಿದೆ. ಅದರಲ್ಲಿ ದಾದಾಭಾಯಿ ನನ್ನ ಲೇಖನವನ್ನು ಪೂರ್ಣಗೊಳಿಸಲು ಬೇಕಾಗಿದ್ದ ಇಂಡಿಯಾ ಸಂಬಂಧವಾದ ಅಂಕಿ ಅಂಶಗಳನ್ನೆಲ್ಲ ಕೊಟ್ಟಿದ್ದನು.

ಇಂಡಿಯಾ ಸಂಬಂಧವಾದ ಅಂಕಿ ಅಂಶಗಳು, ವರದಿಗಳು, ಸಾಹಿತ್ಯ— ಇವುಗಳಿಗಾಗಿ ಹೈಂಡ್‌ಮನ್ ದಾದಾಭಾಯಿಯನ್ನು ಸದಾ ಕೋರುತ್ತಿದ್ದನು. ಇಂಡಿಯಾದಲ್ಲಿ ಆಡಳಿತಗಾರರು ದುರಂತದೆಡೆಗೆ ಧಾವಿಸುತ್ತಿದಾರೆಂದು ಇಬ್ಬರಿಗೂ ಮನವರಿಕೆಯಾಗಿತ್ತು. ಪ್ರಚಾರ ನಡಸುವುದು ಅಗತ್ಯವೆಂದು ಇಬ್ಬರೂ ಅಭಿಪ್ರಾಯಪಟ್ಟರು. ಇಬ್ಬರೂ ಇಂಡಿಯಾದ ಆಡಳಿತವನ್ನು ಕುರಿತು, ಆಗಾಗ್ಗೆ ಪತ್ರಿಕೆಗಳಿಗೆ ಬೋಧಕವಾದ ಲೇಖನಗಳನ್ನು ಬರೆಯುತ್ತಿದ್ದರು, ಲಘುಪುಸ್ತಕಗಳನ್ನು ಸಾವಿರಗಟ್ಟಲೆಯಾಗಿ ಹಂಚುತ್ತಿದ್ದರು. ಇಂಡಿಯಾದಲ್ಲೂ ಇಂಗ್ಲೆಂಡಿನಲ್ಲೂ ನಿರಂತರವಾದ ಚಳವಳಿಯನ್ನೆಬ್ಬಿಸಬೇಕೆಂದು ಇಬ್ಬರೂ ಆಲೋಚಿಸಿದರು. ಹೈಂಡ್‌ಮನ್ ಯೂರೋಪಿನಲ್ಲಿ ಕೂಡ ವಿಚಾರ ವಿಮರ್ಶೆಯನ್ನು ಹರಡಿದನು.

ಇಂಡಿಯಾದ ಸ್ಟೇಟ್ ಸೆಕ್ರೆಟರಿ ಲಾರ್ಡ್ ಹಾರ್ಟಿಂಗ್‌ಟನ್ನನೊಡನೆ ಈ ಕಾಲದಲ್ಲಿ, ದಾದಾಭಾಯಿ ನಡಸಿದ ಪತ್ರವ್ಯವಹಾರ ಗಣ್ಯವಾಗಿದೆ. ಬ್ರಿಟಿಷರು ಇಂಡಿಯಾದಲ್ಲಿ ಶಿಕ್ಷಣವನ್ನೂ ಪಾಶ್ಚಾತ್ಯನಾಗರಿಕತೆಯನ್ನೂ ಹರಡಿರುವುದಾಗಿ ಕೊಚ್ಚಿಕೊಳ್ಳುತ್ತಾರೆ; ನ್ಯಾಯವೇ; ಆದರೆ ಇಂಡಿಯಾದಲ್ಲಿ 'ಆ ಬಗೆಯದೇನೂ ನಡೆದಿಲ್ಲವೆಂಬಂತೆ' ವರ್ತಿಸುತ್ತಾರೆ.

ನಮ್ಮನ್ನು ಬಿ.ಎ., ಎಂ.ಎ., ಎಂ.ಡಿ. ಗಳನ್ನಾಗಿ ಮಾಡುತ್ತಾರೆ. ಆದರೂ ದೇಶಬಾಂಧವರಿಗೆ ಶಿಕ್ಷಣವೀಯಲು ನಾವಿನ್ನೂ ಅರ್ಹರಲ್ಲವೆಂದು ತಿಳಿಯುತ್ತಾರೆ.

ಹಿಂದಿನ ದಂಡಯಾತ್ರಿಗಳಲ್ಲಿ ಒಳನುಗ್ಗುತ್ತಿದ್ದ ಶತ್ರುಗಳು ದೇಶವನ್ನು ಸುಲಿಗೆ ಮಾಡಿಕೊಂಡು ಹೊರಟುಹೋಗುತ್ತಿದ್ದರು, ಇಲ್ಲವೆ ಆಡಳಿತಗಾರರಾಗಿ ದೇಶದಲ್ಲಿ ನಿಲ್ಲುತ್ತಿದ್ದರು. ಸೂರೆಮಾಡಿಕೊಂಡು ಹೊರಟು ಹೋದಾಗ ಅವರು ನಮ್ಮನ್ನು ಬಹುವಾಗಿ ಘಾಸಿಪಡಿಸುತ್ತಿದ್ದರು, ನಿಜ ; ಆದರೆ ಇಂಡಿಯಾ ತನ್ನ ಕರ್ಮಕೌಶಲದಿಂದ ಗಾಯಗಳಿಂದ ಗುಣಹೊಂದಿ ಪುನರುಜ್ಜೀವನಗೊಳ್ಳುತ್ತಿತ್ತು. ಶತ್ರುಗಳು ಆಳುವವರಾಗಿ ನಿಂತರೆ ದೇಶದಲ್ಲಿಯೇ ನೆಲಸುತ್ತಿದ್ದರು. ಅವರ ಆಳ್ವಿಕೆ ಹೇಗೇ ಇರಲಿ, ದೇಶದ ಭೌತಿಕ ನೈತಿಕ ಐಶ್ವರ್ಯಗಳು ನಷ್ಟವಾಗುತ್ತಿರಲಿಲ್ಲ. ಇಂಗ್ಲಿಷರ ವಿಚಾರವಾದರೆ ವಿಚಿತ್ರವಾಗಿದೆ. ಸಾರ್ವಜನಿಕ ಶಾಂತಿಯ ಹೊರೆಯ ರೂಪದಲ್ಲಿ ಮೊದಲ ಯುದ್ಧಗಳ ಗಾಯವನ್ನು ಉಳಿಸಿದಾರೆ; ಜೀವಾಧಾರವಾದದ್ದನ್ನೆಲ್ಲ ಅಪಹರಿಸಿಕೊಂಡು ಹೋಗುತ್ತ, ಗಾಯ ಮಾಗದಂತೆಯೂ ದೊಡ್ಡದಾಗುವಂತೆಯೂ ಮಾಡಿದಾರೆ. ಪೂರ್ವದ ರಾಜರು ಅಲ್ಲಲ್ಲಿ ಕೊಚ್ಚುವ ಕಟುಕರಂತಿದ್ದರು; ಇಂಗ್ಲಿಷರಾದರೊ ಶಾಸ್ತ್ರೀಯವಾಗಿ ತಯಾರಾದ ಚೂರಿಯನ್ನು ಹೃದಯಕ್ಕೇ ನೇರವಾಗಿ ಹಾಕುತ್ತಾರೆ; ಆದರೂ ಗಾಯ ಕಾಣಿಸುವುದಿಲ್ಲ ; ನಾಗರಿಕತೆ, ಪ್ರಗತಿ ಮೊದಲಾದ ದೊಡ್ಡ ದೊಡ್ಡ ಮಾತುಗಳ ಪ್ಲಾಸ್ತ್ರಿಯಿಂದ ಗಾಯವನ್ನು ಮುಚ್ಚುತ್ತಾರೆ !

ಬ್ರಿಟಿಷರ ನೀತಿ ಹಿಂದಿನವರದ್ದಕ್ಕಿಂತ ಉತ್ತಮವಾಗಿರಬಹುದು. ದೇಶಕ್ಕೆ ಅನ್ಯಾಯವೆಸಗಲು ಅದೊಂದು ನೆಪವಾಗಬಾರದು. "ಬ್ರಿಟಿಷರು ತಮ್ಮ ಹಿರಿದಾದ ತಿಳಿವಳಿಕೆಗೂ ನಾಗರಿಕತೆಗೂ ತಕ್ಕ ಪ್ರಮಾಣದಲ್ಲಿ ಹಿರಿಯ ರೀತಿಯಲ್ಲಿ ವರ್ತಿಸದಿದ್ದರೆ, ಅವರ ಆಳ್ವಿಕೆಯಲ್ಲಿ ಇಂಡಿಯಾ ಅಭಿವೃದ್ಧಿ ಹೊಂದಿ ಪ್ರಗತಿಯನ್ನು ಐದದಿದ್ದರೆ, ಈ ದೇಶದಲ್ಲಿ ಅವರು ನಿಲ್ಲಲು ಯಾವ ಔಚಿತ್ಯವೂ ಇರಲಾರದು" ಎಂದು ದಾದಾಭಾಯಿ ನುಡಿದನು.

"ಇಂಡಿಯಾ ದೇಶದ ಹೃದಯವಿದ್ರಾವಕವಾದ ಹೀನ ಸ್ಥಿತಿಯನ್ನು ಕುರಿತು ಪದೇಪದೇ ಮಾತಾಡುವುದು ನನಗೇನೂ ಸಂತೋಷಕರವಲ್ಲ. ಇಂಡಿಯಕ್ಕೆ ಒಳ್ಳೆಯದನ್ನೇ ಹಾರೈಸುತ್ತಿದ್ದರೂ, ಇಂಗ್ಲೆಂಡು ವಾಸ್ತವವಾಗಿ, ಇತರ ಎಲ್ಲ ವಿದೇಶೀ ಆಕ್ರಮಣಕಾರರಿಗಿಂತ ಹೆಚ್ಚಾಗಿ ಅನರ್ಥಕಾರಿಯೂ ವಿನಾಶಕಾರಿಯೂ ಆಗಿದೆ. ಆಂಗ್ಲಸಭ್ಯರೆದುರಿನಲ್ಲಿ ಈ ಮಾತುಗಳನ್ನು ಹೇಳುತ್ತಿದೇನೆ. ಅವರು ನನ್ನ ಪ್ರಾಮಾಣಿಕವಾದ ಈ ಮಾತುಗಳನ್ನು ತಮಗೆ ಸಹಜವಾದ ನ್ಯಾಯ ಪಕ್ಷಪಾತ ಬುದ್ಧಿಯಿಂದಲೂ ಔದಾರ್ಯದಿಂದಲೂ ಸ್ವೀಕರಿಸುವರೆಂಬ ನಂಬಿಕೆ ನನಗಿದೆ."

ಪರಿಹಾರದ ಆಸೆಗಳೆಲ್ಲ ನಿರಾಶೆಯಲ್ಲಿ ಪರ್ಯವಸಾನವಾಗುತ್ತಿದ್ದವು.

ಈ ವಿಷಯವನ್ನು ಕುರಿತು ದಾದಾಭಾಯಿ ಅನೇಕ ಸಭೆಗಳಲ್ಲಿ ಭಾಷಣಮಾಡಿದನು. ಸಮಿತಿಗಳ ಮುಂದೆಯೂ ನಿಯೋಗ ಮಂಡಲಿಗಳ ಮುಂದೆಯೂ ಕಾಮನ್ಸ್ ಸಭೆಯ ಮುಂದೆಯೂ ಅವನು ಭಾರತದ ಬಡತನದ ಪರಿಹಾರಕ್ಕಾಗಿ, ಇಪ್ಪತ್ತೈದು ವರ್ಷಗಳ ಕಾಲ, ನಿರಂತರವಾಗಿ, ಶಕ್ತಿಯುತವಾಗಿ ವಾದಿಸಿದನು. ಆದರೆ ಪ್ರಯೋಜನವೇನೂ ಕಂಡು ಬರಲಿಲ್ಲ. ಬದಲಾಗಿ, ಅಧಿಕಾರಿಗಳು ರಾಜಭಕ್ತಿಯುತರಾದ ದಾದಾಭಾಯಿಯಂಥವರ ವಿಮರ್ಶೆಯ ವಿಷಯದಲ್ಲಿ ಅಸಹಿಷ್ಣುತೆಯನ್ನು ತೋರಲಾರಂಭಿಸಿದ್ದರು. ತನ್ನ ದೇಶದ ದಾರಿದ್ರ್ಯಸ್ಥಿತಿಯನ್ನೂ ರಾಜಕೀಯ ದಾಸ್ಯದಿಂದುಂಟಾಗುವ ದುಷ್ಪರಿಣಾಮಗಳನ್ನೂ ಪ್ರಪಂಚದ ಗಮನಕ್ಕೆ ತರುವ ಉದ್ದೇಶದಿಂದ ದಾದಾಭಾಯಿ ತನ್ನ ಲೇಖನಗಳನ್ನೂ, ಲಘು ಪುಸ್ತಕಗಳನ್ನೂ, ರಾಜ್ಯದ ಅಧಿಕಾರಿಗಳೊಡನೆ ನಡಸಿದ ಪತ್ರ ವ್ಯವಹಾರವನ್ನೂ, ಸಮಿತಿಗಳ, ನಿಯೋಗ ಮಂಡಲಿಗಳ ಮುಂದೆ ನುಡಿದ ಸಾಕ್ಷ್ಯವನ್ನು, ಭಾಷಣೇತ್ಯಾದಿಗಳನ್ನೂ ಒಟ್ಟುಗೂಡಿಸಿ ಪ್ರಕಟಿಸಿದನು.

ಈ ಪ್ರಕಟನೆ ಸುಮಾರು ೭೦೦ ಪುಟಗಳುಳ್ಳ ದೊಡ್ಡ ಗ್ರಂಥವಾಯಿತು. ಅದರ ಹೆಸರು ಇಂಡಿಯದಲ್ಲಿ "ದಾರಿದ್ರ್ಯ ಮತ್ತು ಬ್ರಿಟಿಷರಿಗೆ ಅಯೋಗ್ಯವಾದ ಆಧಿಪತ್ಯ" (Poverty and Un-British Rule in India). ಸುಮಾರು ಮೂವತ್ತು ವರ್ಷಕಾಲದ ಭಾಷಣ ಬರಹಗಳು ಅದರಲ್ಲಿ ಅಡಕವಾಗಿದ್ದವು. ಪದೇ ಪದೇ ಉಂಟಾದ ನಿರಾಶೆಯಿಂದ ಅವನ ಮನಸ್ಸು ನಿಷ್ಠುರವಾಗಿತ್ತು. ಬ್ರಿಟಿಷ್ ಆಳ್ವಿಕೆಯ ಉದಾತ್ತ ತತ್ತ್ವಗಳನ್ನು ಕ್ರಮೇಣ ಅವನತ ಸ್ಥಿತಿಗೆ ತರುತ್ತಿದ್ದುದಲ್ಲದೆ, ಬ್ರಿಟಿಷ್ ಶೀಲಕ್ಕೆ ಬೇಕೆಂತಲೇ ಕಳಂಕ ಹತ್ತಿಸುತ್ತಿದ್ದಂತೆ ಅವನಿಗೆ ತೋರಿತು.

"ಇಂಗ್ಲೆಂಡಿನ ಮತ್ತು ಭಾರತದ ಸರಕಾರಗಳೆರಡೂ ಕಿವಿಯಲ್ಲಿ ಉಸುರಿದ ವಚನಗಳನ್ನು ಎದೆಯಲ್ಲಿ ಮುರಿಯಲು ತಮಗೆ ಸಾಧ್ಯವಿದ್ದ ಪ್ರತಿಯೊಂದು ಸಾಧನವನ್ನೂ" ಉಪಯೋಗಿಸಿವೆ ಎಂದು ಲಾರ್ಡ್ ಲಿಟ್ಟನ್ ಹೇಳಿದ ಮಾತುಗಳ ಸತ್ಯಾಂಶವನ್ನು ತೋರಿಸಲು ಅವನು ಪ್ರಯತ್ನಿಸಿದ್ದನು.

ಗ್ರಂಥದಲ್ಲಿ ಎರಡು ಬಗೆಯ ವಿಷಯಗಳಿದ್ದುವು, ಒಂದು ಆರ್ಥಿಕ, ಮತ್ತೊಂದು ರಾಜಕೀಯ. ಅಥವಾ ಆರ್ಥಿಕ ದ್ವಾರದಿಂದ ರಾಜಕೀಯ

ವನ್ನು ಪ್ರವೇಶಿಸಿದ್ದನೆಂದು ಹೇಳಬಹುದು. ಆರ್ಥಿಕ ವಿಭಾಗದಲ್ಲಿ—ಉತ್ಪನ್ನ ಮತ್ತು ಹಂಚಿಕೆ, ತೆರಿಗೆ, ರೈಲ್ವೆಗಳು, ವಿದೇಶೀವ್ಯಾಪಾರ, ಜೆಲೆಗಳು, ಕೂಲಿ, ಹಣದಚಲಾವಣೆ ಮತ್ತು ವಿನಿಮಯ, ಸಾರ್ವಜನಿಕಋಣ ಮತ್ತು ವರಮಾನ, ಮತ್ತು ಐಶ್ವರ್ಯ ಪರದೇಶಕ್ಕೆ ಹರಿದು ಹೋಗುವುದು— ಈ ವಿಷಯಗಳ ನಿರೂಪಣೆಯಿತ್ತು. ರಾಜಕೀಯ ವಿಭಾಗದಲ್ಲಿ—ಇಂಡಿಯಾದಲ್ಲಿ ಬ್ರಿಟಿಷರ ನೀತಿಯ ಗುರಿ, ಸಿವಿಲ್ ಮತ್ತು ಮಿಲಿಟರಿ ಉನ್ನತಾಧಿಕಾರಸ್ಥಾನಗಳಿಗೆ ಭಾರತೀಯರನ್ನು ಸೇರಿಸಿಕೊಳ್ಳುವುದು, ಇಂಡಿಯಾದ ಸ್ಟೇಟ್ ಸೆಕ್ರೆಟರಿಗೂ ಬ್ರಿಟಿಷ್ ಪಾರ್ಲಿಮೆಂಟಿಗೂ ಇಂಡಿಯದೊಡನೆ ಇರುವ ಸಂಬಂಧ, ಇಂಡಿಯದ ಶಾಸನ ಸಭೆಗಳಲ್ಲಿ ಭಾರತೀಯರ ಪ್ರಾತಿನಿಧ್ಯದ ಪ್ರಶ್ನೆ. ದೇಶೀಯ ಸಂಸ್ಥಾನಗಳು, ರಷ್ಯನರು ದಾಳಿ ನಡಸುವ ಸಂಭವ—ಇಂಥ ವಿಷಯಗಳ ವಿವರಣೆಯಿತ್ತು. ಈ ವಿವಾದಾಂಶಗಳಲ್ಲಿ ಬ್ರಿಟಿಷರನ್ನು ಕುರಿತು ಅನೇಕ ಅಸಂತೋಷಕರವಾದ ಮಾತುಗಳನ್ನುಹೇಳುವುದು ಅನಿವಾರ್ಯವಾಗಿತ್ತು. ಒಟ್ಟಿನಲ್ಲಿ, ಒಂದು ಕಡೆ, ರಾಜ್ಯವಾಳುವವರ ನೀತಿ 'ಬ್ರಿಟಿಷರಿಗೆ ಅಯೋಗ್ಯವಾದದ್ದಾಗಿಯೂ ಆತ್ಮಘಾತಕವಾಗಿಯೂ ಲೇಖಕನಿಗೆ ತೋರಿದರೆ, ಇನ್ನೊಂದೆಡೆ, ನೈಜವಾದ ಬ್ರಿಟಿಷ್ ಆಡಳಿತ ಪದ್ಧತಿ ಜಾರಿಗೆ ಬಂದರೆ, ಅದರಿಂದ ಇಂಡಿಯಾಕ್ಕೆ ಶುಭವೂ ಇಂಗ್ಲೆಂಡಿಗೆ ಕೀರ್ತಿಯೂ, ಲಭಿಸುವುವೆಂಬ ನಂಬಿಕೆ ಲೇಖಕನಿಗೆ ಇತ್ತೆಂಬುದು ಸ್ಪಷ್ಟವಾಗಿ ತೋರುತ್ತಿತ್ತು.

## ೧೭. ನವಯುಗದ ಆರಂಭ

೧೮೮೧ ನೆಯ ಇಸವಿ ಮುಗಿಯುವ ವೇಳೆಗೆ ಲಂಡನ್ನಿನಲ್ಲಿದ್ದ ದಾದಾಭಾಯಿಯ ವ್ಯಾಪಾರ ಸಂಸ್ಥೆ ಮುಚ್ಚಿತು. ಆದರಿಂದ ಅವನು ವ್ಯಾಪಾರವನ್ನು ಸಂಪೂರ್ಣವಾಗಿ ಬಿಡಲಿಲ್ಲ. ಅದೇ ವ್ಯಾಪಾರವನ್ನು ಬೊಂಬಾಯಿಯಲ್ಲಿ, ಕಾಮಾ ಸಂಸ್ಥೆಯ ಮೂಲಕ, ನಡಸಲು ಏರ್ಪಾಡಾಯಿತು. ಆದ್ದರಿಂದ ಮಾತೃಭೂಮಿಗೆ ಹಿಂದಿರುಗಿದನು. ಹಿಂದಿಗಿಂತ ಈಗ ರಾಜಕೀಯ ವಾತಾವರಣ ಉತ್ತಮವಾಗಿತ್ತು. ಲಾರ್ಡ್ ಲಿಟ್ಟನ್ನನ ಸ್ಥಾನದಲ್ಲಿ ಲಾರ್ಡ್ ರಿಪನ್ ವೈಸ್‌ರಾಯ್ ಆಗಿ ಬಂದನು. ಅವನ ಆಗಮನ

ದಿಂದ ದೇಶದ ಆಡಳಿತದಲ್ಲಿಯೂ ಜನರ ಮನೋಭಾವದಲ್ಲಿಯೂ ಮೇಲಾಯಿತು.

೧೮೮೨ರಲ್ಲಿ ಶಿಕ್ಷಣ ನಿಯೋಗ ಮಂಡಲಿಯೊಂದು ನೇಮಕವಾಯಿತು. ದಾದಾಭಾಯಿ ಮಂಡಲಿಗೆ ತನ್ನ ಅಭಿಪ್ರಾಯಗಳ ಹೇಳಿಕೆಯನ್ನು ಕೊಟ್ಟನು. ಆದರಲ್ಲಿ, ಇಂಡಿಯಾದ ದುಃಖಕರವಾದ ಕಥೆಯನ್ನು ವಿವರಿಸುವ ಅಂಕಿ ಅಂಶಗಳನ್ನು ಸಂಗ್ರಹಿಸಿಕೊಟ್ಟನು. 'ಇಂಡಿಯಾದ ಆರ್ಥಿಕಸ್ಥಿತಿ ಶೋಚನೀಯವಾಗಿದೆ; ಆದರೆ ಶಿಕ್ಷಣಸ್ಥಿತಿ ಅದಕ್ಕೂ ಕೇಡಾಗಿದೆ.' ಇಂಡಿಯಾದ ಶೈಕ್ಷಣಿಕ ದುಃಸ್ಥಿತಿಗೆ ಕಾರಣವೇನು? ಅದರ ಆರ್ಥಿಕ ನೈತಿಕ ದಾರಿದ್ರ್ಯಗಳೇ ಎಲ್ಲ ಕೊರತೆಗಳಿಗೂ ಮೂಲಕಾರಣ.

ಅದಕ್ಕೆ ಪರಿಹಾರೋಪಾಯವಾಗಿ ಲಾರ್ಡ್ ರಿಪನ್ನಿನ ಸರಕಾರದ ಎರಡು ನಿರ್ಣಯಗಳನ್ನು ಸ್ವಾಗತಿಸಿದನು. ಒಂದು, ದೇಶದ ಉತ್ಪನ್ನವನ್ನು ಜನರ ಅಭಿಪ್ರಾಯವನ್ನನುಸರಿಸಿ ಖರ್ಚುಮಾಡುವ ತತ್ತ್ವಕ್ಕೆ ಒಯ್ಯುವ ಮಾರ್ಗ; ಎರಡು, ಜನರ ದುಡಿಮೆಯ ಫಲ ಅವರಿಗೇ ಉಳಿಯುವ ಗುರಿಗೆ ಒಯ್ಯುವ ಮಾರ್ಗ. ಮೊದಲನೆಯ ತತ್ತ್ವದಂತೆ ಜನರಿಗೆ ಸ್ವಾಡಳಿತವನ್ನು ಕಲಿಸಿ, ಅವರೇ ಆಡಳಿತವನ್ನು ನಡಸಿಕೊಳ್ಳುವಂತೆ ಬಿಡುವುದು; ಎರಡನೆಯ ತತ್ತ್ವವನ್ನು ಅನುಷ್ಠಾನಕ್ಕೆ ತರಬೇಕಾದರೆ ಸಾಮಗ್ರಿಗಳನ್ನೆಲ್ಲ ಸ್ಥಳೀಯ ತಯಾರಿಕೆಗಾರರಿಂದ ಕೊಳ್ಳಬೇಕು. ವೈಸರಾಯ್ ಒಂದು ಹೆಜ್ಜೆ ಮುಂದೆ ಹೋಗಿ ಪಾರ್ಲಿಮೆಂಟಿನಲ್ಲಾಗಲಿ, ಇಂಡಿಯಾದಲ್ಲಾಗಲಿ, ಒಂದು ಕಾನೂನು ಜಾರಿಗೆ ತರಲಿ, ಎಂದು ದಾದಾಭಾಯಿ ನುಡಿದನು: ಅಚರವಸ್ತುಗಳನ್ನು ಇಂಡಿಯಾದಲ್ಲೇ ಕೊಳ್ಳಬೇಕೆಂದು ಹೇಳುವಂತೆ, ಚರವಸ್ತುಗಳನ್ನೂ ಎಂದರೆ, ನೌಕರರನ್ನೆಲ್ಲ.—ಮೇಲ್ವಿಚಾರಣೆ ಮಾರ್ಗದರ್ಶನಗಳಿಗೆ ಬೇಕಾದ ಕೆಲವರನ್ನು ಮಾತ್ರ ಉಳಿದು,—ದೇಶದ ವಿದ್ಯಾಸಂಸ್ಥೆಗಳಿಂದಲೇ ತೆಗೆದುಕೊಳ್ಳಲಿ.

೧೮೮೩ ರಲ್ಲಿ ದಾದಾಭಾಯಿ The Voice of India (ಭಾರತ ವಾಣಿ) ಎಂಬ ಮಾಸಪತ್ರಿಕೆಯನ್ನು ಹೊರಡಿಸಿದನು. ದಾದಾಭಾಯಿಯೇ ಭಾರತದ ವಾಣಿಯಾಗಿದ್ದನು. ಆದರೆ ತನ್ನವಾಣಿಯ ಜೊತೆಯಲ್ಲಿ ಇತರರದೂ ಸೇರುವುದು ಅಗತ್ಯವೆಂದು ತಿಳಿದಿದ್ದನು. ಬ್ರಿಟಿಷ್

ಜನರಿಗೆ ಭಾರತೀಯರ ಮನೋಭಾವಗಳನ್ನೂ ಆಶಯಗಳನ್ನೂ ಖಚಿತ ವಾಗಿ ತಿಳಿಸುವುದೇ ಪತ್ರಿಕೆಯ ಉದ್ದೇಶವಾಗಿತ್ತು. ಸ್ವಂತ ಅಭಿಪ್ರಾಯ ವನ್ನು ವ್ಯಕ್ತಪಡಿಸುವುದು ಪತ್ರಿಕೆಯ ಉದ್ದೇಶವಲ್ಲ. ಆದರೆ ಭಾರತದ ನಾನಾ ಪತ್ರಿಕೆಗಳಲ್ಲಿ ದಿನದಿನದ ಮುಖ್ಯವಿಷಯಗಳನ್ನು ಕುರಿತು ವ್ಯಕ್ತವಾದ ಅಮೂಲ್ಯ ಅಭಿಪ್ರಾಯಗಳನ್ನು ಸಂಗ್ರಹಿಸಿಕೊಟ್ಟು ಪ್ರಜೆಗಳ ಆಕಾಂಕ್ಷೆ ಯನ್ನು ಆಡಳಿತಗಾರರಿಗೆ ವಿವರಿಸುವುದೇ ಉದ್ದೇಶವಾಗಿತ್ತು.

ಕೆಲವು ವರ್ಷಕಾಲ ದಾದಾಭಾಯಿಯೇ ಹಣಹಾಕಿ ಪತ್ರಿಕೆಯನ್ನು ನಡಸಿದನು; ಅವನು ಇಂಡಿಯದಿಂದ ಹೊರಗೆ ಹೋದಾಗ, ಬಿ. ಎಂ. ಮಲಬಾರಿ ಅದರ ಆಡಳಿತವನ್ನು ನೋಡಿಕೊಂಡು ನಡಸುತ್ತಿದ್ದನು. ೧೮೮೦ರ ಜನವರಿ ೧ ರಿಂದ ಅದು, ಆರ್ಥಿಕಕಾರಣಗಳಿಗಾಗಿ ಮಲಬಾರಿಯ ಪ್ರಸಿದ್ಧ ವಾರ ಪತ್ರಿಕೆಯಾದ "ಇಂಡಿಯನ್ ಸ್ಪೆಕ್ಟೇಟರಿ"ನಲ್ಲಿ ಲೀನವಾಯಿತು.

ಇಂಡಿಯದ ವೈಸರಾಯರುಗಳಲ್ಲೆಲ್ಲ ಲಾರ್ಡ್‌ರಿಪನ್ ಅತ್ಯಂತ ಜನಪ್ರಿಯನಾಗಿದ್ದನು. ಭಾರತದ ಜನರಲ್ಲಿ ಅವನಿಗೆ ಬಹುವಾದ ವಿಶ್ವಾಸ ವಿತ್ತು; ಅವರ ಸ್ವಾತಂತ್ರ್ಯದ ಪಾಯವನ್ನು ವಿಸ್ತರಿಸಬೇಕೆಂಬ ಇಚ್ಛೆಯಿತ್ತು; ಅವನ ಪ್ರಾಮಾಣಿಕತನ ಸ್ಪಷ್ಟವಾಗಿತ್ತು. ಈ ಕಾರಣಗಳಿಂದ ಅವನನ್ನು "ನ್ಯಾಯಶೀಲ" ನೆಂದು ಕರೆದರು. ೧೮೮೪ ರ ಫೆಬ್ರುವರಿ ೧೭ರಲ್ಲಿ ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನ ಬೊಂಬಾಯಿ ಶಾಖೆಯ ಆಶ್ರಯದಲ್ಲಿ ಸಾರ್ವಜನಿಕ ಸಭೆ ನಡೆದು, ರಿಪನ್ನಿನ ಅಧಿಕಾರಾವಧಿಯನ್ನು ವಿಸ್ತರಿಸಿ ಕೊಡು ವಂತೆ ರಾಣಿಯನ್ನು ವಿಜ್ಞಾಪಿಸಿಕೊಳ್ಳಲಾಯಿತು. ಹಾಗೆ ಮಾಡುವುದರಿಂದ ಸರಕಾರದ ನಾನಾ ಇಲಾಖೆಗಳಲ್ಲಿ ಅವನು ಆರಂಭಿಸಿದ ಪರಿಷ್ಕಾರ ಕಾರ್ಯ ಗಳನ್ನು ಪೂರೈಸಬೆಂಬುದೇ ಉದ್ದೇಶವಾಗಿತ್ತು. ಭಾರತವನ್ನು ಸ್ನೇಹಿತನಂತೆ ಆಳುವುದು ರಿಪನ್ನಿನ ಗುರಿಯಾಗಿತ್ತು. ದಾದಾಭಾಯಿ ಈ ಸಭೆಯ ಚಾಲಕ ನಾಗಿದ್ದನು.

ಇದಾದಮೇಲೆ, ಇಲ್ಬರ್ಟ್ ಮಸೂದೆಗೆ ಬೆಂಬಲ ನೀಡಲು, ಬೊಂಬಾ ಯಲ್ಲಿ (೧೮೮೪ರ ಏಪ್ರಿಲ್ ೨೮) ಮತ್ತೊಂದು ಸಭೆನಡೆಯಿತು. ೧೮೮೨ರಲ್ಲಿ ಜಾರಿಯಲ್ಲಿದ್ದ ಕ್ರಿಮಿನಲ್ ಕಾನೂನಿನ ಪ್ರಕಾರ ಭಾರತೀಯ ಮ್ಯಾಜಿಸ್ಟ್ರೇಟ್ ಯಾವನೂ, ಅವನು ಎಷ್ಟೇ ಉನ್ನತ ಪದವಿಯಲ್ಲಿರಲಿ, ಯೂರೋಪಿಯನ್

ಬ್ರಿಟಿಷ್ ಪ್ರಜೆಯಮೇಲಿನ ಆಪಾದನೆಯನ್ನು ವಿಚಾರ ಮಾಡು ವಂತಿರಲಿಲ್ಲ; ಆದರೆ ಅದೇ ಮ್ಯಾಜಿಸ್ಟ್ರೇಟನ ಅಧೀನನಾದ ಪರಂಗಿ ಅಧಿಕಾರಿಗೆ ಆ ಅಧಿಕಾರವಿತ್ತು. ಈ ಅಸಮತೆಯನ್ನು ರದ್ದುಪಡಿಸಿ, ಎಲ್ಲ ವರ್ಗದ ಜನ ರನ್ನೂ ನ್ಯಾಯದ ದೃಷ್ಟಿಯಲ್ಲಿ ಸಮಾನವಾಗಿ ಕಾಣುವುದೇ ಮಸೂದೆಯ ಉದ್ದೇಶವಾಗಿತ್ತು. ಈ ಮಸೂದೆಯನ್ನು ತಂದದ್ದರಿಂದ, ಇಂಡಿಯಾದೇಶದ ಲ್ಲಿದ್ದ ಪರಂಗಿ ಜನರು ಉದ್ರೇಕಗೊಂಡು, ಹಿಂದೆ ಎಂದೂ ಕಾಣದಂಥ ವರ್ಣ ವಿದ್ವೇಷವನ್ನು ವ್ಯಕ್ತಪಡಿಸಿ ಉಗ್ರಚಳವಳಿಯನ್ನು ಹೂಡಿದರು. ರಾಣಿಯ ಪ್ರಸಿದ್ಧಪತ್ರಿಕೆಯಲ್ಲಿ, ಇಂಡಿಯದಲ್ಲಿ, ಆಳುವವರ ಜಾತಿ ಎಂಬುದು ಇರತಕ್ಕ ದ್ದಲ್ಲವೆಂದು ಗೊತ್ತುಪಡಿಸಲಾಗಿತ್ತು; ಆದರೆ ವಾಸ್ತವವಾಗಿ, ಆಳುವ ಜನಾಂ ಗದ ಜನರು ಉದ್ಯೋಗ ವ್ಯಾಪಾರ ಕೈಗಾರಿಕೆಗಳ ವಿಷಯದಲ್ಲಿ ಮತ್ತು ನ್ಯಾಯಪರಿಪಾಲನೆಯಲ್ಲಿ ಸಹ ವಿಶೇಷ ರಿಯಾಯಿತಿಗಳನ್ನು ಪಡೆಯುವುದು ತಮ್ಮ ದೈವಿಕವಾದ ಹಕ್ಕೆಂದು ತಿಳಿದಿದ್ದರು. ಇಂಡಿಯದಲ್ಲಿದ್ದ ಪರಂಗಿಯ ವರು ಮಸೂದೆಯಿಂದ ತಮ್ಮ ಆ ಹಕ್ಕಿಗೆ ಭಂಗ ಬರುವುದನ್ನು ಕಂಡು ವೈಸ ರಾಯನ್ನು ಬೈದರು, ಹಳಿದರು, ಕಲ್ಕತ್ತೆಯಲ್ಲಿ ಪ್ರತಿಭಟನಾ ಸಭೆಯನ್ನು ನಡಸಿದರು. ಅಬ್ಬರಗಾರರ ಗುಂಪೊಂದು, 'ಸರಕಾರೀ ಭವನದ ರಕ್ಷಕರನ್ನು ಮುರಿದು, ವೈಸರಾಯನನ್ನು ಚಂದಪಾಲ್ ಘಾಟಿನಲ್ಲಿ ಜಹಜಿನಲ್ಲಿ ಹಾಕಿ ಇಂಗ್ಲೆಂಡಿಗೆ ಗಡೀಪಾರು ಮಾಡುವುದಾಗಿ,' ಪ್ರತಿಜ್ಞೆ ಮಾಡಿದ್ದಿತಂತೆ. ಬೊಂಬಾಯಿಯ ಸಭೆಯನ್ನು ಇದಕ್ಕೆ ವಿರುದ್ಧವಾಗಿ ವ್ಯವಸ್ಥೆ ಮಾಡ ಲಾಗಿತ್ತು. ಈ ಸಭೆಯ ಮುಖ್ಯ ಚಾಲಕನೂ ದಾದಾಭಾಯಿಯೇ.

ರಿಪನ್ನಿನ ದೇಶೀಯ ನೀತಿಯನ್ನು ಸಮರ್ಥಿಸುವುದಕ್ಕಾಗಿ ಲಂಡನ್ನಿ ನಲ್ಲಿಯೂ ಒಂದು ಸಾರ್ವಜನಿಕ ಸಭೆ ನಡೆಯಿತು (ಆಗಸ್ಟ್ ೧). ಜಾನ್ ಬ್ರೈಟ್ ಅಧ್ಯಕ್ಷತೆ ವಹಿಸಿದ್ದನು. ಅವನು ದೇಶಬಾಂಧವರನ್ನು ಕರಿತು ಕೆಚ್ಚಿನಿಂದ, "ಇಂಗ್ಲಿಷರ ಆಸೆ ದುರಾಸೆಗಳಿಗೆ ಕ್ಷೇತ್ರವಾಗಿರಲೆಂದು ಇಂಡಿಯಾ ನಮ್ಮ ರಕ್ಷಣೆಗೆ ಒಳಗಾಗಿಲ್ಲ", ಎಂದು ಹೇಳಿದನು.

ಒಂದು ವರ್ಷದ ಮೇಲೆ ಲಾರ್ಡ್ ರಿಪನ್ ಅಧಿಕಾರದಿಂದ ನಿವೃತ್ತ ನಾದನು. ೩೦ ವರ್ಷಗಳಿಂದ ದಾದಾಭಾಯಿ ವಿರೋಧಿಸಿದ್ದ ಅಸಮತೆ ಗಳಲ್ಲಿ ಕೆಲವನ್ನು ನಿವಾರಿಸಲು—ತನ್ನ ಮಂತ್ರಾಲೋಚನ ಸಭೆಯಲ್ಲೂ

ಹೊರಗೂ ಅದಕ್ಕೆ ವಿರೋಧವಿದ್ದಾಗ್ಯೂ—ರಿಪನ್ ಶ್ರದ್ಧಾಪೂರ್ವಕವಾಗಿ ಪ್ರಯತ್ನಪಟ್ಟಿದ್ದನು. ಕೇವಲ ಹೇಳಿಕೆಗಳಲ್ಲಿದ್ದ ಎಷ್ಟೋ ವಿಷಯಗಳನ್ನು ಅವನು ಕಾರ್ಯರೂಪಕ್ಕೆ ತಂದಿದ್ದನು. ಇದರಿಂದ ಭಾರತೀಯರಿಗೆ ಬ್ರಿಟಿಷರ ನ್ಯಾಯಪರಿಪಾಲನ ಬುದ್ಧಿಯಲ್ಲಿ ತಿರುಗಿ ನಂಬಿಕೆ ಹುಟ್ಟಿತು. ಜನ ಸಾಮಾನ್ಯರಲ್ಲಿ ವಿದ್ಯೆಯನ್ನು ಹರಡುವುದಕ್ಕೂ ಅವರ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸುವುದಕ್ಕೂ ಪ್ರಯತ್ನಪಟ್ಟನು; ಇಂಡಿಯಾ ದೇಶದ ಹೊರಗೆ ತಗಲಿದ ವೆಚ್ಚಗಳನ್ನು ಇಂಡಿಯಾದ ಮೇಲೆ ಹೊರಿಸುವುದನ್ನು ತಪ್ಪಿಸಲು ಶ್ರಮಪಟ್ಟನು; ಬ್ರಿಟಿಷ್ ಸಹ ಪ್ರಜೆಗಳಿಗೆ ಸಮಾನವಾದ ಸ್ಥಾನದಲ್ಲಿ ಭಾರತೀಯರನ್ನೂ ಇರಿಸಿ, ಅವರ ಬೌದ್ಧಿಕ ಪ್ರಗತಿಯನ್ನು ಸಾಧಿಸಿ, ಅವರನ್ನು ಸ್ಥಳೀಯ ಸ್ವಾಡಳಿತ ಮಾರ್ಗದಲ್ಲಿ ತಯಾರುಮಾಡಲು ಯತ್ನಿಸಿದನು. ಬೊಂಬಾಯಿಯ ಪೌರಸಭಾ ಭವನದಲ್ಲಿ, ೧೮೮೪ ರ ನವೆಂಬರ್ ೨೯ ರಲ್ಲಿ ನಡೆದ ಸಭೆಯಲ್ಲಿ ದಾದಾಭಾಯಿ ಲಾರ್ಡ್ ರಿಪನ್ನನ್ನು ಅಭಿನಂದಿಸುವ ನಿರ್ಣಯದ ಮೇಲೆ ಮಾತನಾಡುತ್ತ, "ದೇಶದ ಆರ್ಥಿಕ ಮತ್ತು ಶೈಕ್ಷಣಿಕಸ್ಥಿತಿ ಬಹು ದರಿದ್ರಾವಸ್ಥೆಯಲ್ಲಿದೆಯೆಂದು ಧೈರ್ಯವಾಗಿ, ಮುಚ್ಚುಮರೆಯಿಲ್ಲವೆ ಒಪ್ಪಿಕೊಂಡಿರುವುದು ರಿಪನ್ ಸರಕಾರದ ಮೊದಲನೆಯ ಮಹಾಕಾರ್ಯವೆಂದು ತಿಳಿದಿದ್ದೇನೆ. ಇಂಡಿಯದ ಶಕ್ತಿಸಾಮರ್ಥ್ಯಗಳನ್ನೂ, ಸಾಮಗ್ರಿಗಳನ್ನೂ, ಸಿಬ್ಬಂದಿಯನ್ನೂ, ಎಲ್ಲ ವಿಧದಲ್ಲಿಯೂ, ಎಲ್ಲ ಇಲಾಖೆಗಳಲ್ಲೂ ವೃದ್ಧಿಗೊಳಿಸಬೇಕೆಂದೂ, ಸರ್ವಸಮಾನವಾಗಿ ನ್ಯಾಯ ದೊರಕಬೇಕೆಂದೂ ನಿರ್ಣಯಿಸಿ, ರಿಪನ್ ದಾರಿದ್ರ್ಯದ ಪರಿಹಾರ ಮಾರ್ಗವನ್ನು ಏರ್ಪಡಿಸಿದನು," ಎಂದು ನುಡಿದನು.

ದಾದಾಭಾಯಿ ಆರ್ಯಜ್ಞಾನವರ್ಧಕ ಸಭೆಯವರು ಡಿಸೆಂಬರ್ ೨೨ರಲ್ಲಿ ಏರ್ಪಡಿಸಿದ ಸಭೆಯ ಅಧ್ಯಕ್ಷತೆಯನ್ನುವಹಿಸಿ ಭಾಷಣಮಾಡಿದನು. ರಿಪನ್ನಿಗೆ ಸ್ಮಾರಕವೇರ್ಪಡಿಸಲು ನಿಧಿಯನ್ನು ಶೇಖರಿಸುವುದಕ್ಕಾಗಿ ಶ್ರಮಿಸಿದನು.

ದಾದಾಭಾಯಿಯ ಮತ್ತೆ ಕೆಲವು ಸಾರ್ವಜನಿಕ ಚಟುವಟಿಕೆಗಳನ್ನು ಸಂಕ್ಷೇಪವಾಗಿ ಸೂಚಿಸಬಹುದು. ೧೮೮೩ ರಲ್ಲಿ ನಡೆದ ಸಾರ್ವಜನಿಕ ಪೌರ ಚುನಾವಣೆಗಳಲ್ಲಿ ಕಾರ್ಪೊರೇಷನ್ ಸದಸ್ಯನಾಗಿ ಚುನಾಯಿತನಾಗಿ, ೧೮೮೬ ರಲ್ಲಿ ಇಂಗ್ಲೆಂಡಿಗೆ ಹೋಗುವವರೆಗೂ ಪುರಸಭೆಗೆ ಗಣ್ಯವಾದ

ಸೇವೆಯನ್ನು ಸಲ್ಲಿಸಿದನು.

ಇಲ್ಬರ್ಟ್ ಮಸೂದೆಗೆ ವಿರೋಧವಾಗಿ ನಡಸಿದ ಚಳವಳಿಯ ಪರಿಣಾಮವಾಗಿ ಬೊಂಬಾಯಿ ಪ್ರಾಂತ ಸಂಘ (Bombay Presidency Association) ಸ್ಥಾಪಿತವಾಯಿತು. ೧೮೫೨ರಲ್ಲಿ ಹುಟ್ಟಿದ ಬೊಂಬಾಯಿ ಸಂಘ (Bombay Association) ಈಗ ಕೆಲಸಮಾಡುತ್ತಿರಲಿಲ್ಲ. ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನ ಬೊಂಬಾಯಿ ಶಾಖೆ ಸಹ ಈಗ ಮೊದಲಿನಂತೆ ಚಟುವಟಿಕೆಯಾಗಿರಲಿಲ್ಲ. ಲಾರ್ಡ್ ರಿಪನ್ನಿನ ದಯಾಪರವಾದ ಆಳ್ವಿಕೆಯಲ್ಲಿ ಜನ ಎಚ್ಚತ್ತಿದ್ದರು. ಅವರ ಅಭಿಪ್ರಾಯಗಳಿಗೆ ಹಿಂದೆಂದೂ ಇಲ್ಲದ ತೂಕವೂ ಶಕ್ತಿಯೂ ಉಂಟಾಗಿದ್ದವು. ಸಮಾಜದ ಮುಂದಾಳುಗಳು ರಾಜಕೀಯ ಸಂಘವೊಂದನ್ನು ಏರ್ಪಡಿಸಬೇಕೆಂದು ನಿರ್ಧರಿಸಿ ೧೮೮೫ ರ ಜನವರಿ ೩೧ ರಲ್ಲಿ ಬೊಂಬಾಯಿ ನಿವಾಸಿಗಳ ಸಭೆಯನ್ನು ಕರೆದರು. ಆಗ ಬೊಂಬಾಯಿ ಪ್ರೆಸಿಡೆನ್ಸಿ ಅಸೋಸಿಯೇಷನ್ ಸ್ಥಾಪಿತವಾಯಿತು. ದಾದಾಭಾಯಿ ಸಂಸ್ಥೆಯ ಒಬ್ಬ ಉಪಾಧ್ಯಕ್ಷನಾಗಿ ಚುನಾಯಿತನಾದನು. ಆ ಸಂದರ್ಭದಲ್ಲಿ ಫಿರೋಜ್‌ಷಾ ಮೆಹತಾ, "ತರುಣರಲ್ಲಿ ದಾದಾಭಾಯಿಯಂಥ ವ್ಯಕ್ತಿಗಳು ಹುಟ್ಟುವ ದಿನವನ್ನು ನಾನು ಎದುರು ನೋಡುತ್ತಿದೇನೆ" ಎಂದು ನುಡಿದನು.

೧೮೮೫ ರ ಆಗಸ್ಟಿನಲ್ಲಿ ಬೊಂಬಾಯಿ ಗವರ್ನರಾದ ಲಾರ್ಡ್ ರೀ, ಬೊಂಬಾಯಿನ ಶಾಸನ ಸಭೆಯ ಸದಸ್ಯನಾಗುವಂತೆ ದಾದಾಭಾಯಿಯನ್ನು ಆಹ್ವಾನಿಸಿದನು; ದಾದಾಭಾಯಿ ಒಪ್ಪಿದನು. ಇನ್ನೆರಡು ಮುಖ್ಯವಾದ ಸಂಸ್ಥೆಗಳ ಸ್ಥಾಪನೆಯಲ್ಲಿ ದಾದಾಭಾಯಿಯ ಹೆಸರು ಕೇಳಿ ಬರುತ್ತದೆ: ಒಂದು ಬೊಂಬಾಯಿನ ತೆರಿಗೆದಾರರ ಸಂಘ; ಮತ್ತೊಂದು ಭಾರತ ರಾಷ್ಟ್ರ ಮಹಾಸಭೆ (Indian National Congress.)

ರಾಷ್ಟ್ರ ಮಹಾಸಭೆಯ ಸ್ಥಾಪನೆಯಲ್ಲಿ ಅವನೊಂದು ಚೈತನ್ಯ ಶಕ್ತಿಯಾಗಿದ್ದನು. ಮಹಾಸಭೆಯ ಸ್ಥಾಪಕರಲ್ಲಿ ಅತ್ಯಂತ ಗಣ್ಯನಾದ ವ್ಯಕ್ತಿ ಎ. ಓ. ಹ್ಯೂಮ್ ಎಂಬಾತನು. ಈತನು ಇಂಡಿಯನ್ ಸಿವಿಲ್ ಸರ್ವಿಸ್ಸಿನಿಂದ ನಿವೃತ್ತನಾಗಿದ್ದನು. ಭಾರತ ಸ್ವಾತಂತ್ರ್ಯದ ಹೋರಾಟಗಳಿಗೆ ಈತನ ಉತ್ಸಾಹಪೂರ್ಣವಾದ ಬೆಂಬಲವಿತ್ತು. ೧೮೮೪ರ ಡಿಸೆಂಬರಿನಲ್ಲಿ

ಬೊಂಬಾಯಲ್ಲಿ ನಡೆದ ಕಾಂಗ್ರೆಸಿನ ಮೊದಲ ಅಧಿವೇಶನದಲ್ಲಿ ದಾದಾಭಾಯಿ ಉತ್ಸಾಹದಿಂದ ಕೆಲಸಮಾಡಿದನು. ಅಧಿವೇಶನದಲ್ಲಿ ಅಂಗೀಕೃತವಾದ ಬಹುಪಾಲು ನಿರ್ಣಯಗಳಲ್ಲಿ, ಅದರಲ್ಲೂ ಮೊದಲನೆಯ ನಿರ್ಣಯದಲ್ಲಿ, ಇಂಡಿಯಾದ ಆಡಳಿತದ ಕಾರ್ಯರೀತಿಯ ಪರಿಶೀಲನೆಗಾಗಿ ಸೂಚಿತವಾದ ಸಮಿತಿಯ ನೇಮಕವನ್ನು ಅನುಮೋದಿಸುವ ನಿರ್ಣಯದಲ್ಲಿ, ಅವನ ಕೈ ವಾಡವನ್ನು ನೋಡಬಹುದಾಗಿತ್ತು. ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಗಳನ್ನು ಇಂಗ್ಲೆಂಡಿನಲ್ಲಿಯೂ ಇಂಡಿಯದಲ್ಲೂ ಏಕಕಾಲದಲ್ಲಿ ನಡಸ ಬೇಕೆಂದು ಪ್ರಾರ್ಥಿಸುವ ನಿರ್ಣಯವನ್ನು ಸೂಚಿಸಿದವನು ಅವನು.

## ೧೮. ಚುನಾವಣಾ ಕ್ಷೇತ್ರದ ಅನ್ವೇಷಣೆ

೧೮೮೬ರ ಮಾರ್ಚಿ ೧೩ರ ಸಂಚಿಕೆಯಲ್ಲಿ ಮದ್ರಾಸಿನ 'ಹಿಂದು' ಪತ್ರಿಕೆ (ಆಗ ಅದು ವಾರಕ್ಕೆ ಮೂರಾವೃತ್ತಿ ಹೊರಡುತ್ತಿತ್ತು) ದಾದಾಭಾಯಿ ಪಾರ್ಲಿಮೆಂಟಿನ ಸದಸ್ಯನಾಗುವ ಇಚ್ಛೆಯಿಂದ ಇಂಗ್ಲೆಂಡಿಗೆ ಹೊರಡುತ್ತಾ ನೆಂದು ಪ್ರಕಟಿಸಿತು. ಅರ್ಥಶಾಸ್ತ್ರದಲ್ಲಿ ಪ್ರವೀಣನಾದ ಅವನಿಗೆ ಸಮಾನ ರಾದವರು ಇಂಡಿಯಾದಲ್ಲಿ ಇಲ್ಲವೆಂದು ಪತ್ರಿಕೆ ಅಭಿಪ್ರಾಯಪಟ್ಟಿತ್ತು. ಕಲ್ಕತ್ತೆಯ ಪತ್ರಿಕೆಗಳೂ ಅವನ ವಿಷಯದಲ್ಲಿ ಅದೇಬಗೆಯ ಉತ್ಸಾಹವನ್ನು ಸೂಚಿಸಿದ್ದವು.

ದಾದಾಭಾಯಿ ಕೆಲವು ದಿವಸಗಳಿಂದ ಇಂಗ್ಲೆಂಡಿನಲ್ಲಿರುವ ಮಿತ್ರ ರೊಡನೆ ಪತ್ರವ್ಯವಹಾರ ನಡಸುತ್ತ ತನ್ನನ್ನು ಉಮೇದುವಾರನನ್ನಾಗಿ ಯಾವ ಕ್ಷೇತ್ರವಾದರೂ ಅಂಗೀಕರಿಸಬಹುವೇ ಎಂದು ವಿಚಾರ ಮಾಡುತ್ತಿದ್ದನು. ಕ್ಷೇತ್ರವೊಂದು ದೊರೆಯಬಹುದೆಂಬ ವಿಚಾರದಲ್ಲಿ ಅವನಿಗೆ ಭರವಸೆಯೇನೂ ಇರಲಿಲ್ಲ. ಆದರೆ ಪಾರ್ಲಿಮೆಂಟಿಗೆ ಸದಸ್ಯನಾಗಲು ಸಾಧ್ಯವಾಗದಿದ್ದರೂ, ಇಂಗ್ಲೆಂಡಿನಲ್ಲಿ ಇಂಡಿಯಾ ಪರವಾಗಿ ಮಾಡಬೇಕಾದ ಕೆಲಸವಿದೆಯೆಂದು ನಂಬಿದ್ದನು.

ಮುಂದಿನ ಮೂರು ತಿಂಗಳ ದಿನಚರಿಯಿಂದ, ಅವನು ತನ್ನಕೆಲಸದಲ್ಲಿ ಸಹಾಯವಾಗಬಹುದಾಗಿದ್ದ ಅನೇಕ ಜನರ ಪರಿಚಯ ಮಾಡಿಕೊಳ್ಳುತ್ತಿದ್ದ

ನೆಂಬುದು ವ್ಯಕ್ತವಾಗುತ್ತದೆ.

ಏಪ್ರಿಲ್ ೧೫. ಡಾ| ಆರ್. ಕಾಂಗ್ರೀವ್‌ನನ್ನು ನೋಡಿದೆ. ಇಂಗ್ಲೆಂಡ್ ಇಂಡಿಯಾಗಳ ಸಂಬಂಧ ಕಡಿಯಬೇಕೆಂದು ಅವನು ಅಭಿಪ್ರಾಯ ಪಡುತ್ತಾನೆ; ಇಂಗ್ಲೆಂಡಿನಿಂದ ಅದಕ್ಕೆ ಕೆಡುಕು; ಇಂಗ್ಲಿಷ್ ಶೀಲಕ್ಕೇ ಕೆಡುಕಾಗುತ್ತಿದೆ. ವಸಾಹತುಗಳ ಸಂಬಂಧ ಒಂದು ದೋಷ.

ಏಪ್ರಿಲ್ ೧೬. ವಿಲ್ಲಿಯನ್ನು ನೋಡಲು ನ್ಯಾಷನಲ್ ಲಿಬರಲ್ ಅಸೋಸಿಯೇಷನ್ನಿಗೆ ವುಡ್‌ನ ಜೊತೆಯಲ್ಲಿ ಹೋದೆ. ಆತನು ಅಭ್ಯರ್ಥಿಗಳ ಪಟ್ಟಿಯಲ್ಲಿ ನನ್ನ ಹೆಸರನ್ನು ಸೇರಿಸುವುದಾಗಿ ಹೇಳಿ, ನನ್ನ ವಿಚಾರವಾಗಿ ಚಿಕ್ಕದಾಗಿ ಬರೆದುಕೊಡಬೇಕೆಂದು ಕೇಳಿದನು.

ಏಪ್ರಿಲ್ ೧೭ರಲ್ಲಿ ಮಾರ್ಟಿನ್ ವುಡ್ಡನ ಜೊತೆಯಲ್ಲಿ ಬ್ರೈಟ್ ಮಹಾಶಯನನ್ನು ನೋಡಲು ಹೋಗಿದ್ದನು.

ಏಪ್ರಿಲ್ ೧೯. ಡಿಗ್ಬಿಯನ್ನು ಕಂಡೆ....*ನಾನು ಬಂದದ್ದು ಒಳ್ಳೆಯದಾಯಿತೆಂದು ಅವನು ಪದೇ ಪದೇ ಹೇಳಿದನು. ನಾನು ಬಂದ ಉದ್ದೇಶದ ಫಲ ಏನಾದರಾಗಲಿ, ಇಂಡಿಯಾ ಸಂಬಂಧವಾಗಿ ಹೆಚ್ಚು ಉತ್ಸಾಹದಿಂದ ಕೆಲಸಮಾಡಲು ತನಗೆ ಅನುಕೂಲವಾಯಿತೆಂದು ಅಭಿಪ್ರಾಯಪಟ್ಟನು.

ಏಪ್ರಿಲ್ ೨೦. ಹೈಂಡ್‌ಮನ್‌ನನ್ನು ನೋಡಲು ಹೋದೆ. ನಾನು ಸೂಚಿಸುತ್ತಿದ್ದ ಸುಧಾರಣೆಗಳಿಂದ ಇಂಗ್ಲಿಷ್ ಜನಾಂಗಕ್ಕೆ, ಅದರಲ್ಲಿಯೂ ಕೂಲಿಗಾರರಿಗೆ, ಅನುಕೂಲವಾಗುತ್ತದೆಯೆಂದು ಸಾಮಾನ್ಯ ಇಂಗ್ಲಿಷ್ ಜನರಿಗೆ, ಅದರಲ್ಲಿಯೂ ಕೂಲಿಗಾರರಿಗೆ, ನಂಬಿಕೆ ಹುಟ್ಟಿಸಬೇಕೆಂಬುದು ಅವನ ಅಭಿಮತ. ಇಂಡಿಯಾ ಅಭಿವೃದ್ಧಿ ಹೊಂದಿ ಸಂಪದ್ಯುಕ್ತವಾದರೆ, ಇಂಗ್ಲೆಂಡಿನ ಸಾಮಾನುಗಳನ್ನು ಹೆಚ್ಚಾಗಿ ಕೊಳ್ಳುತ್ತದೆ. ಅದರಿಂದ ಕೂಲಿಗಾರನಿಗೆ ಹೆಚ್ಚು ಕೆಲಸ ದೊರೆಯುತ್ತದೆ. ಹೈಂಡ್‌ಮನ್ನನ ಪತ್ನಿ ಸಂಭಾಷಣೆಯಲ್ಲಿ ಉತ್ಸಾಹದಿಂದ ಭಾಗವಹಿಸಿದಳು.

---

* ವಿಲಿಯಂ ಡಿಗ್ಬಿ: ಮುಂದೆ ಇಂಡಿಯಾಕ್ಕೆ ಸಂಬಂಧ ಪಟ್ಟ ವಿಷಯಗಳಲ್ಲಿ ದಾದಾಭಾಯಿಯೊಡನೆ ಬಹುವಾಗಿ ಸಹಕರಿಸಿದನು. **Prosperous British India** ಎಂಬ ಗ್ರಂಥವನ್ನು ಬರೆದನು.

ಏಪ್ರಿಲ್ ೨೭. ಸ್ಲಾಗ್‌ನಿಂದ ಪತ್ರ....ಅವನಿಗೆ ರಾಜ್ಯದ ಎಲ್ಲ ಕ್ಷೇತ್ರಗಳ ಪರಿಚಯವೂ ಇದೆ; ಅವುಗಳ ಸ್ಥಿತಿಗತಿಗಳೂ ಗೊತ್ತು. ಪರಿಚಯ ಪತ್ರವನ್ನು ಕೊಡುವುದಾಗಿ ಹೇಳುತ್ತಾನೆ. ಈಗ ಇಲ್ಲಿ, ಇಂಡಿಯಾ ವಿಷಯದಲ್ಲಿ, ಬಹುವಾದ ಸಹಾನುಭೂತಿಯಿದೆ. ಕಾಮನ್ಸ್ ಸಭೆಯಲ್ಲಿ ಹಲವರು ಉತ್ತಮ ಪ್ರತಿನಿಧಿಗಳಿದ್ದರೆ ಅವರಿಂದಾಗುವಷ್ಟು ಒಳ್ಳೆಯದು ಇಂಗ್ಲಿಷ್ ಸುಧಾರಕರು ವರ್ಷಗಟ್ಟಲೆ ಮಾತಾಡುವುದರಿಂದ ಆಗಲಾರದು.

ಏಪ್ರಿಲ್ ೨೯. ಡಿಗ್ಬಿಯನ್ನು ಕಂಡಿದ್ದೆ. ಇಂಗ್ಲಿಷ್ ಹ್ಯಾಟನ್ನು ಧರಿಸುವಂತೆ ಸಲಹೆಮಾಡಿ, ಇಂಗ್ಲಿಷರವರಂತೆಯೆ ಕಾಣುವುದು ಉತ್ತಮ ಎಂದು ಹೇಳಿದನು. ಐರಿಷ್ ಮಸೂದೆಯನ್ನು ಕುರಿತ ಲಿಬರಲ್ ಅಸೋಸಿಯೇಷನ್ ಸಮ್ಮೇಳನಕ್ಕೆ ಒಂದು ಟಿಕೆಟ್ ತಂದುಕೊಡಬೇಕೆಂದಿರುವುದಾಗಿ ತಿಳಿಸಿದನು. ಯಾವುದಾದರೂ ಸ್ಥಳದಲ್ಲಿ ಐರಿಷ್ ಪ್ರಶ್ನೆಯನ್ನು ಕುರಿತು ನಾನು ಮಾತಾಡುವುದು ಉತ್ತಮವೇ ಎಂದು ಕೇಳಿದೆ. ಹಾಗೆ ಮಾಡುವುದು ಒಳ್ಳೆಯದು ಎಂದು ಹೇಳಿದನು.

ಮೇ ೩. ಹೈಂಡ್‌ಮನ್ನನ್ನು ಕಂಡಿದ್ದೆ. ಇಂಡಿಯಾ ದೇಶದ ದಿವಾಳಿತನವನ್ನು ಕುರಿತ ತನ್ನ ಲೇಖನಗಳ ಪುನರ್ಮುದ್ರಣದ ಪ್ರತಿಯನ್ನು ನನಗೆ ಅರ್ಪಿಸುವುದಾಗಿ ಹೇಳಿದ ... ಹಾಗೆ ಮಾಡುವುದರಿಂದ ನನ್ನ ಹೆಸರು ಜನಗಳ ಗಮನಕ್ಕೆ ಬರುವುದೆಂದು ತಿಳಿಸಿದ. ಅವನು ನನ್ನಲ್ಲಿ ತೋರುತ್ತಿದ್ದ ಗೌರವವನ್ನು ಮೆಚ್ಚಿಕೊಂಡೆ, ಆದರೆ ಅವನ ಸಲಹೆಗೆ ಒಪ್ಪುವುದು ವಿವೇಕವಲ್ಲ ಎಂದುಕೊಂಡೆ. ಪತ್ರಿಕೆಗಳವರೂ ಮೇಲ್ತರಗತಿಯ ಜನರೂ ಅವನ ವಿಷಯದಲ್ಲಿ ವಿಶ್ವಾಸವಿಲ್ಲದವರಾಗಿದ್ದರು.

ಮೇ ೪. ಆರ್. ಟಿ. ರೈಡನನ್ನು ಕಂಡಿದ್ದೆ. ಇಂಡಿಯಾದ ಆವಶ್ಯಕತೆಗಳನ್ನು ಕುರಿತು ಬರ್ಮಿಂಘ್ಯಾಂನಂಥ ಅಥವಾ ಲೀಡ್ಸನಂಥ ಪ್ರಭಾವಶಾಲಿಯಾದ ಲಿಬರಲ್ ಕೇಂದ್ರದಲ್ಲಿ ಭಾಷಣಮಾಡುವುದು ಒಳ್ಳೆಯದು ಎಂದೂ ಸೂಚಿಸಿದನು. ಆ ಬಗೆಯ ಭಾಷಣದಿಂದ ನನ್ನ ಹೆಸರು ಪ್ರಚಾರವಾಗುತ್ತದೆ; ಬೇರೆ ಲಿಬರಲ್ ಕೇಂದ್ರಗಳೂ ನನ್ನನ್ನು ಆಹ್ವಾನಿಸಬಹುದು. ಆಗ ಸ್ವಾಭಾವಿಕವಾಗಿ, ಕ್ರಮೇಣ ಕ್ಷೇತ್ರವೊಂದು ದೊರೆಯುತ್ತದೆ. ನಾನು ಒಪ್ಪಿದರೆ, ಕೂಡಲೆ ಬರ್ಮಿಂಘ್ಯಾಂಗೆ ಬರೆಯುವುದಾಗಿ ತಿಳಿಸಿದನು. ನಾನು

ತಕ್ಷಣವೇ ಒಪ್ಪಿದೆ.

ಮುಂದಿನ ನಾಲ್ಕು ವಾರಗಳ ದಿನಚರಿಯಲ್ಲಿ, ಅನೇಕ ಮಂದಿ ಸ್ನೇಹಿತರನ್ನೂ ರಾಜನೀತಿಜ್ಞರನ್ನೂ ಭೇಟಿಮಾಡಿದ, ನಾನಾ ಸ್ಥಳಗಳಲ್ಲಿ ನಡೆದ ಔತಣಕೂಟಗಳ, ಟೀ ಸಮಾರಂಭಗಳ, ಸಮ್ಮೇಳನಗಳ, ವಿವರ ಗಳಿವೆ. ಸಭೆ ಸಮಾರಂಭ ಸಮ್ಮೇಳನಗಳಲ್ಲೆಲ್ಲ ಮಾತನಾಡುವ ಕರೆ ಬರು ತ್ತಿತ್ತು. ದಾದಾಭಾಯಿ ಕ್ರಮೇಣ ವ್ಯಾಪಿಸುತ್ತಿದ್ದನು.

ಹೋಲ್ಬರ್ನ್ ಕ್ಷೇತ್ರದಲ್ಲಿ ಸ್ಥಾನ ದೊರೆಯುವ ಸಂಭವ ತೋರಿತು. ಜೂನ್ ೧೪ ರಲ್ಲಿ ದಾದಾಭಾಯಿ ಅಲ್ಲಿನ ಲಿಬರಲ್ ಸಂಘದ ಕಾರ್ಯಕಾರೀ ಸಮಿತಿಯವರನ್ನು ಭೇಟಿಮಾಡಿದ. 'ಕೊಂಚ ಮಾತುಕಥೆಯಾದ ಮೇಲೆ, ನಾನು ಬೇರೆ ಕೊಟಡಿಯಲ್ಲಿ ಕೆಲವು ನಿಮಿಷ ಕುಳಿತೆ. ನನ್ನನ್ನು ತಮ್ಮ ಉಮೇದುವಾರನನ್ನಾಗಿ ಒಮ್ಮತದಿಂದ ಅಂಗೀಕರಿಸಿರುವುದಾಗಿ ನಿರ್ಣಯ ಮಾಡಿದರು.'

ಅದೇ ದಿನ ಸಂಜೆ ಕಾರ್ಯದರ್ಶಿಯಿಂದ ಹೋಲ್ಬರ್ನ್ ಲಿಬರಲ್ ಅಸೋಸಿಯೇಷನ್ನಿನ ಸದಸ್ಯರುಗಳಿಗೆ ಒಂದು ಪತ್ರ ಬಂತು. ಅದರಲ್ಲಿ ಮಾನ್ಯ ದಾದಾಭಾಯಿನವರೋಜಿಯನ್ನು ತಮಗೆ ಪರಿಚಯ ಮಾಡಿಸಿದ್ದ ಕ್ಕಾಗಿ ಕಾರ್ಯಕಾರೀಸಮಿತಿಯನ್ನು ಅಭಿನಂದಿಸಿದ್ದನು. ದಾದಾಭಾಯಿ ಇಂಗ್ಲೆಂಡಿನಲ್ಲಿ ದೀರ್ಘಕಾಲದಿಂದ ವಾಸವಾಗಿರುವುದಲ್ಲದೆ, ಭಾರತದ ಮತ್ತು ಇಂಗ್ಲೆಂಡಿನ ರಾಜಕೀಯ ಜೀವನದಲ್ಲಿ ಯಾವಾಗಲೂ ಆಸಕ್ತಿ ವಹಿಸುತ್ತಿರುವುದರಿಂದ, ಯಾವ ಕ್ಷೇತ್ರವನ್ನಾದರೂ ಪ್ರತಿನಿಧಿಸಲು ಸಮರ್ಥ ನಾಗಿದ್ದಾನೆ. ಇಂಡಿಯಾ ದೇಶದ ವಿಶೇಷ ಹಿತಗಳನ್ನು ಸಮರ್ಥಿಸುವು ದಕ್ಕೂ ಶಕ್ತನಾಗಿದ್ದಾನೆ, ಎಂದು ತಿಳಿಸಿದ್ದನು.

## ೧೯. ಹೋಲ್ಬರ್ನ್

ಹೋಲ್ಬರ್ನ್ ಕ್ಷೇತ್ರವನ್ನು ಆರಿಸಿಕೊಳ್ಳಲಿಲ್ಲ. ಆದರೆ ಅದನ್ನು ಬಿಟ್ಟರೆ ಬೇರೆ ಅವಕಾಶವಿರಲಿಲ್ಲ. ಅಲ್ಲಿನ ಮತದಾರರು ಪ್ರಮುಖವಾಗಿ ಕನ್ಸರ್ವೆಟಿವ್ ಪಕ್ಷದವರು. ಐರಿಷ್‌ಮಸೂದೆಯ ತತ್ತ್ವಗಳಿಗೆ ವಿರೋಧವಾಗಿದ್ದವರು.

ಆದ್ದರಿಂದ ಆ ಕ್ಷೇತ್ರದಿಂದ ಲಿಬರಲ್ ಉಮೇದುವಾರನಾಗಿ ನಿಲ್ಲತಕ್ಕವನಿಗೆ, ಅದರಲ್ಲೂ ಹೋಮ್‌ರೂಲ್ ಅವಶ್ಯವೆಂದು ಒತ್ತಿ ಹೇಳತಕ್ಕವನಿಗೆ, ಜಯದ ಸಂಭವ ಕೊಂಚವೂ ಇರಲಿಲ್ಲ. ದಾದಾಭಾಯಿಗೆ ಬೆಂಬಲಕೊಡುವುದು ಅವನ ಆಪ್ತಸ್ನೇಹಿತರಿಗೆ ಸಹ ಕಷ್ಟವಾಗಿತ್ತು. ಉದಾಹರಣೆಗೆ, ಜಾರ್ಜ್ ಬರ್ಡ್‌ವುಡ್–ದಾದಾಭಾಯಿ ಇಂಗ್ಲಿಷ್ ರಾಜಕೀಯದಲ್ಲಿ ಅಷ್ಟು ಆಳವಾಗಿ ಬೇರೆಯದೆ ಹೆಚ್ಚು ಸ್ಪರ್ಧೆಯಿಲ್ಲದ ಕ್ಷೇತ್ರದಿಂದ ಅಭ್ಯರ್ಥಿಯಾಗಿ ನಿಲ್ಲ ಬೇಕಾಗಿತ್ತೆಂದು ತಿಳಿಸಿದನು: "ನಿನಗೆ ಜಯವಾಗಲು ಏನುಬೇಕಾದರೂ ಮಾಡಬಲ್ಲೆ, ಆದರೆ ಗ್ಲಾಡ್‌ಸ್ಟನ್ನಿನ ಪಕ್ಷವನ್ನು ಹೆಚ್ಚಿಸುವ ಯಾವ ಕೆಲಸ ವನ್ನೂ ಮಾಡಲಾರೆ."

ದಾದಾಭಾಯಿಯ ಸ್ನೇಹಿತರಿಗೆ ತಿಳಿದಿದ್ದಂತೆ ಅವನಿಗೂ ತಿಳಿದಿತ್ತು, ಜಯದ ಸಂಭವ ಅಲ್ಪವೆಂದು; ಸೋಲಾದರೂ ಚಿಂತೆಯಿಲ್ಲ, ಕೊಂಚ ಫಲವಿದೆಯೆಂದು. ಆ ಅಲ್ಪವನ್ನೂ ಆರಾಧಿಸುವುದು ಅಗತ್ಯವಾಗಿತ್ತು,

ಹೋಲ್ಬರ್ನ್ ಕ್ಷೇತ್ರದ ರಾಜಕೀಯ ಬಣ್ಣ ಹೇಗೇ ಇರಲಿ. ದಾದಾಭಾಯಿ ಧೈರ್ಯವಾಗಿ, ಐರಿಷ್ ಸ್ವಯಮಾಡಳಿತ ನೀತಿಯ ತತ್ತ್ವವನ್ನು ತನ್ನ ಮತದಾರರ ಮುಂದೆ ಇಟ್ಟನು. ಬ್ರಿಟಿಷ್ ಸಾಮ್ರಾಜ್ಯದಲ್ಲಿಯೆ ಇದ್ದುಕೊಂಡು ತಮ್ಮ ರಾಜಕೀಯ ವ್ಯವಹಾರಗಳನ್ನೆಲ್ಲ ತಾವೇ ನಡಸ ಬೇಕೆಂಬುದು ಐರಿಷ್ ಜನರ ಆಶಯವಾಗಿದೆ. ನ್ಯಾಯವಾದ ಈ ಆಶಯ ವನ್ನು ತೃಪ್ತಿಪಡಿಸಲು ಉದಾರ ಹೃದಯನಾದ ಗ್ಲಾಡ್‌ಸ್ಟನ್ ಬಹುಧೈರ್ಯ ದಿಂದ ಶ್ರಮಿಸುತ್ತಿದಾನೆ. ಬಹುಮುಖ್ಯವಾದ ಈ ಪ್ರಶ್ನೆಯಲ್ಲಿ ಗ್ಲಾಡ್ ಸ್ಟನ್ನನ ಮತವೇ ನನ್ನ ಮತ, ಎಂದು ದಾದಾಭಾಯಿ ವ್ಯಕ್ತಪಡಿಸಿದನು.

ಜೂನ್ ೨೪ರಲ್ಲಿ ಹೋಲ್ಬರ್ನ್ ಪಟ್ಟಣದ ಪೌರಸಭಾ ಭವನದಲ್ಲಿ ದೊಡ್ಡ ಸಭೆ ಸೇರಿತ್ತು. ಅಂಡರ್ ಸೆಕ್ರೆಟರಿಯಾದ ಜೇಮ್ಸ್ ಬ್ರೈಸ್ ಆ ಸಂದರ್ಭದಲ್ಲಿ ದಾದಾಭಾಯಿಯನ್ನು ಹೊಗಳಿದನು. ತನ್ನ ಅಭಿಪ್ರಾಯ ಗಳನ್ನು ಚಲಾಯಿಸಲು ಅವನಿಗೆ ತಕ್ಕ ಶೀಲವಿದೆ, ಅವುಗಳನ್ನು ವ್ಯಕ್ತಗೊಳಿ ಸಲು ಸಾಮರ್ಥ್ಯವಿದೆ, ಎಂದು ಹೇಳಿದನು. ಎರಡು ನಿಮಿಷಗಳಕಾಲ ಮಾತಾಡುವುದರೊಳಗೇ ದಾದಾಭಾಯಿ ತನ್ನ ನೇರವಾದ ಮಾತುಗಳಿಂದಲೂ ಸರಳವಾದ ವಾಗ್ಧುರಿಯಿಂದಲೂ ಸಭಿಕರನ್ನು ವಶಪಡಿಸಿಕೊಂಡನು.

ಆ ಸಮಯದಲ್ಲಿ ಹಾಜರಿದ್ದ ಸಭಿಕನೊಬ್ಬನು ದಾದಾಭಾಯಿಯನ್ನು ಈ ರೀತಿ ವರ್ಣಿಸಿದ್ದಾನೆ—

ದಾದಾಭಾಯಿ ತನ್ನ ಹೆಸರನ್ನು ಬ್ರೌನ್ ಅಥವಾ ಜೋನ್ಸ್ ಎಂದು ಬದಲಾಯಿಸಿದರೆ ಅವನು ಪಾರಸಿ ಎಂಬುದು ಯಾರಿಗೂ ತಿಳಿಯುವುದಿಲ್ಲ. ಬ್ರಿಟಿಷ್ ಮತದಾರರಿಗೆ ನವರೋಜಿ ಒಂದು ಸಮಸ್ಯೆಯಾಗಿದಾನೆ.... ಸುಸಂಸ್ಕೃತನಾದ ಇಂಗ್ಲಿಷ್ ಸಭ್ಯನ ಚರ್ಯೆಯನ್ನೂ ನಡತೆಯನ್ನೂ ಅವನಲ್ಲಿ ಕಾಣಬಹುದು ಅವನ ಮುಖ, ದೀರ್ಘಕಾಲ ಉಷ್ಣವಲಯದ ಬಿಸಿಲಿಗೆ ಒಡ್ಡಿ, ಬಿಳಿಯ ಬಣ್ಣದಲ್ಲಿ ಒಂದೆರಡು ಛಾಯೆ ಕಡಿಮೆಯಿರಬಹುದು, ಆದರೂ ಆಸ್ಟ್ರೇಲಿಯನ್ನನ ಮುಖಕ್ಕಿಂತ ಕಪ್ಪಾಗಿಲ್ಲ. ಮುಖಲಕ್ಷಣದಿಂದ ಬುದ್ಧಿಯ ಗುಣಗಳನ್ನು ತಿಳಿಯಬಹುದಾದರೆ, ಅವನು ವಿವೇಚನೆಯುಳ್ಳವನು, ವಿಷಯವನ್ನು ಒಳಹೊಕ್ಕು ನೋಡುವ ಶಕ್ತಿಯುಳ್ಳವನು, ಬಹುದಯೆಯಿಂದ ಕೂಡಿದವನು.... ಅವನ ವಿಪುಲವಾದ ಗಡ್ಡಮೀಸೆಗಳು ಬಹುಮಟ್ಟಿಗೆ ಬೆಳ್ಳಿಯಾಗಿವೆ.... ಅವನ ನಿಲುವಂಗಿ ಕೈ ಚೀಲದಂತೆ ಬಿಗಿಯಾಗಿ ಕೂರುತ್ತದೆ. ಅವನಿಗಿಂತ ಆಕರ್ಷಕವಾದ ವೇದಿಕೆಯ ವ್ಯಕ್ತಿ ದೊರೆಯುವುದು ದುರ್ಲಭ. ನಮ್ಮ ಭಾಷೆಯ ಮೇಲೆ ಅವನಿಗಿರುವ ಪ್ರಭುತ್ವ,—ಮಾತಿನ ಓಟದಲ್ಲಿಯೂ ಔಚಿತ್ಯದಲ್ಲಿಯೂ,—ಆಶ್ಚರ್ಯಕರವಾಗಿದೆ.

ಚುನಾವಣೆಯ ದಿನದವರೆಗೂ ಸಭೆಗಳು ಉತ್ಸಾಹದಿಂದ ಜರುಗುತ್ತಿದ್ದವು. ಆದರೆ ನಿರೀಕ್ಷಿಸಿದಂತೆ ದಾದಾಭಾಯಿಗೆ ಸೋಲಾಯಿತು. ಅವನ ಕನ್ಸರ್ವೆಟಿವ್ ವಿರೋಧಿಗೆ ಸ್ಥಿತಿಗತಿಗಳು ಅನುಕೂಲವಾಗಿದ್ದವು. ಅವನಲ್ಲಿ ಐಶ್ವರ್ಯವಿತ್ತು, ಪ್ರಭಾವವಿತ್ತು, ಚುನಾವಣಾ ಕ್ಷೇತ್ರ ಟೋರಿ ಪರವಾಗಿತ್ತು. ಇಂಗ್ಲಿಷ್ ಜನರು ಬಹುಮಟ್ಟಿಗೆ ಗ್ಲಾಡ್‌ಸ್ಟನ್ನಿನ ಹೋಂ ರೂಲ್ ನೀತಿಗೆ ವಿರೋಧವಾಗಿದ್ದರು, ಸಾಲದ್ದಕ್ಕೆ ಲಿಬರಲ್ ಪಕ್ಷದಲ್ಲಿ ಒಡಕು ಹುಟ್ಟಿತ್ತು. ವಸ್ತುಸ್ಥಿತಿ ಹೀಗಿದ್ದರೂ ದಾದಾಭಾಯಿಗೆ ೧,೯೫೦ ವೋಟುಗಳೂ ಅವನ ವಿರೋಧಿಗೆ ೩,೬೫೧ ವೋಟುಗಳೂ ದೊರೆತವು. ಮುಂದಿನ ಚುನಾವಣೆಯಲ್ಲಿ ಜಯಲಭಿಸಬಹುದೆಂಬ ಆಸೆಗೆ ಅವಕಾಶವಿತ್ತು.

ಸೋಲಿನ ಸುದ್ದಿ ತಿಳಿಯುತ್ತಿದ್ದಂತೆಯೇ ಮುಂದಿನ ಹೋರಾಟಕ್ಕೆ ಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದನು. ಜುಲೈ ೭ ರಲ್ಲಿ, ಲಾರ್ಡ್ ರಿಪನ್‌ಗೆ ಬರೆದ ಕಾಗದದಲ್ಲಿ ಹೀಗೆ ತಿಳಿಸಿದನು : ನನಗೆ ಜಯ ಲಭಿಸುವ ಸಂಭವ ತಕ್ಕಮಟ್ಟಿಗೆ ಇತ್ತು, ಆದರೆ ನಾವು ನಿರೀಕ್ಷಿಸಿದ್ದಕ್ಕಿಂತ ಆಳ

ವಾಗಿತ್ತು ಲಿಬರಲ್ ಪಕ್ಷದಲ್ಲಿ ಬಿರುಕು. ಒಂಭತ್ತು ದಿನಗಳ ಅಲ್ಪಾವ ಕಾಶದಲ್ಲಿ ನಾನು ಮಾಡಿರುವ ಕೆಲಸವನ್ನು ಗಮನಿಸಿ, ನೀವೂ ನಿಮ್ಮ ಪಕ್ಷದ ವರೂ, ನನಗೆ ಸದಸ್ಯತನ ದೊರೆಯುವಂತೆ ಸಹಾಯಮಾಡುವಿರೆಂದು ನಂಬಿದ್ದೇನೆ.

ದಾದಾಭಾಯಿ ಹೀಗೆ ಮುಂದಿನ ಚುನಾವಣೆಗೆ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿರುವಾಗ, ಇಂಡಿಯದಲ್ಲಿನ ಅವನ ಸ್ನೇಹಿತರು, ಅವನು ಸ್ವದೇಶದಲ್ಲಿ ಹೆಚ್ಚು ಪ್ರಯೋಜನಕರವಾದ ಸೇವೆಯನ್ನು ಎಸಗಬಹುದೆಂದು ಭಾವಿಸಿದರು. ಆಗಸ್ಟ್ ೩೧ ರಲ್ಲಿ ಮಲಬಾರಿ ಬರೆದ ಪತ್ರ :

ಶಾಸನ ಸಭೆಯಲ್ಲ ಪ್ರಭಾವಶಾಲಿಯಾದ ಮನುಷ್ಯ ಬೇಕಾಗಿದಾನೆ. ಈಚೆಗೆ ಅಲ್ಲಿ ನಡೆಯುತ್ತಿರುವ ಚರ್ಚೆಗಳ ರೀತಿಯೇ ನನಗೆ ರುಚಿಸುತ್ತಿಲ್ಲ. ನೀನು ಇಲ್ಲಿರುವುದು ಅಗತ್ಯವಾಗಿದೆ. ನಿನ್ನನ್ನು ಇಲ್ಲಿಗೆ ಕರೆಯುವುದು ನಿನಗೆ ತೊಂದರೆ ಮಾಡಿದಂತೆಯೆ ಎಂದು ಬಲ್ಲೆ. ಪಾರ್ಲಿಮೆಂಟಿನ ಹೊರಗಿದ್ದು ಕೊಂಡೇ ನೀನು ಎಲ್ಲರಿಗಿಂತ ಹೆಚ್ಚಾದ ಕಾರ್ಯವನ್ನು ನಿರ್ವಹಿಸ ಬಲ್ಲೆ.... ಆದರೆ ನೀನು ಇಲ್ಲಿ ಇಲ್ಲದಿರುವುದರಿಂದ, ನಿನ್ನ ಧ್ಯೇಯ ಸಾಧನೆಗಾಗಿ ನಾವು ಏನೂ ಸಹಾಯಮಾಡಲಾರದವರಾಗಿದ್ದೇವೆ. ನೀನಿಲ್ಲದೆ ಇಲ್ಲಿ ಯಾವ ಸಂಸ್ಥೆಯೂ ಇಲ್ಲ. ಎಲ್ಲವನ್ನೂ ಪರಿಶೀಲಿಸಿದರೆ, ನವೆಂಬರ್ ಅಥವಾ ಡಿಸೆಂಬರ್ ವೇಳೆಗೆ ನೀನು ಹಿಂದಿ ರುಗುವುದು ಉತ್ತಮ. ಹಾಗೆ ಮಾಡಿದರೆ, ಬಂಗಾಳದಲ್ಲಿ ನಡೆಯುವ ರಾಷ್ಟ್ರ ಮಹಾಸಭೆಯ ಅಧ್ಯಕ್ಷತೆಯನ್ನು ವಹಿಸಬಹುದು, ನೀನು ಹಾಗೆ ವಹಿಸಲೇ ಬೇಕು. ಇಲ್ಲಿಗೆ ಹೊರಟು ಬಂದು ಸಂಸ್ಥೆಗಳಿಗೆ ಜೀವ ತುಂಬು, ಸಾಮಗ್ರಿಗ ಳನ್ನು ಸಂಗ್ರಹಿಸು, ಬೇಕಾದರೆ ತಿರುಗಿ ಹೊರಡು.

೧೮೮೬ ರ ಕೊನೆಯ ಭಾಗದಲ್ಲಿ, ಭಾರತರಾಷ್ಟ್ರ ಮಹಾಸಭೆಯ ಎರಡನೆಯ ಅಧಿವೇಶನಕ್ಕೆ ಬರುವಂತೆ, ಇಂಡಿಯಾದಿಂದ ಕರೆ ಬಂತು. ಕ್ರಿಸ್‌ಮಸ್ ರಜಾದಲ್ಲಿ ದಾದಾಭಾಯಿ ಕಲ್ಕತ್ತೆಗೆ ಹೋದನು. ಮಹಾ ಸಭೆಯ ಅಧಿವೇಶನದ ಅಧ್ಯಕ್ಷನಾಗಿ ಚುನಾಯಿತನಾದನು. ಅವನ ಅಧ್ಯಕ್ಷ ಭಾಷಣ ಮಿತವಾದಕ್ಕೂ ಸಂಯಮಕ್ಕೂ ಮಾದರಿಯಾಗಿತ್ತು. ಆ ಭಾಷಣ ದಲ್ಲಿ ಅವನು ಸ್ವಾಭಾವಿಕವಾಗಿಯೆ, ಪಾರ್ಲಿಮೆಂಟಿನಲ್ಲಿ ಇಂಡಿಯಾದ ಪ್ರತಿನಿಧಿ ಇರಬೇಕಾದ ವಿಷಯವನ್ನು ಎತ್ತಿದನು :

ಯಾವುದಾದರೂ ಪ್ರಶ್ನೆ ಎದ್ದಾಗ ಭಾರತೀಯ ದೃಷ್ಟಿ ಏನೆಂಬುದನ್ನು ವಿವರಿಸಲು ಪಾರ್ಲಿಮೆಂಟಿನಲ್ಲಿ ಪ್ರಾಮಾಣಿಕವಾದ ಭಾರತವಾಣಿ ಯಾವುದೂ

ಇಲ್ಲ. ಪಾರ್ಲಿಮೆಂಟಿನಲ್ಲಿರುವ ಇಂಗ್ಲಿಷ್ ಸದಸ್ಯರೇ ಈ ವಿಷಯವನ್ನು ನನಗೆ ಒತ್ತಿ ಹೇಳಿದ್ದಾರೆ. ಪಾರ್ಲಿಮೆಂಟಿನಲ್ಲಿ ಒಬ್ಬನಾದರೂ ಅಪ್ಪಟ ಭಾರತೀಯ ಪ್ರತಿನಿಧಿ ಇಲ್ಲದಿರುವುದು ತಮಗೆ ದೊಡ್ಡ ದೋಷವಾಗಿ ತೋರಿದೆಯೆಂದು ತಿಳಿಸಿದ್ದಾರೆ.

ಈ ಅಧಿವೇಶನದಲ್ಲಿ, ದಾದಾಭಾಯಿಯ ಮಾರ್ಗದರ್ಶನದಲ್ಲಿ, ಶಾಸನ ಸಭೆಯ ಸುಧಾರಣೆಗೆ ಯೋಜನೆಯೊಂದನ್ನು ತಯಾರಿಸಿದರು. ಮುಂದಿನ ಅಧಿವೇಶನಗಳಲ್ಲಿ, ಶಾಸನ ಸಭೆಗಳಲ್ಲಿ ಚುನಾಯಿತ ಪ್ರತಿನಿಧಿಗಳಿಗೆ ಸ್ಥಾನ ವಿರಬೇಕೆಂಬ ಗೊತ್ತುವಳಿ, ಪ್ರತಿವರ್ಷವೂ ಆಗುತ್ತಿತ್ತು. ೧೮೮೯ ರಲ್ಲಿ ಬೊಂಬಾಯಲ್ಲಿ ನಡೆದ ಅಧಿವೇಶನಕ್ಕೆ ಬಂದಿದ್ದ ಚಾರ್ಲ್ಸ್ ಬ್ರಾಡ್‌ಲಾಫ್ ಭಾರತದ ರಾಜಕೀಯ ಸುಧಾರಣೆಗಾಗಿ ಕಾಮನ್ಸ್ ಸಭೆಯಲ್ಲಿ ಒಂದು ಮಸೂದೆಯನ್ನು ತಂದನು. ಸ್ಟೇಟ್ ಸೆಕ್ರೆಟರಿಯಾದ ಲಾರ್ಡ್‌ಕ್ರಾಸ್ ಮರು ವರುಷ ತಾನೇ ಒಂದು ಮಸೂದೆಯನ್ನು ಸೂಚಿಸುವುದಾಗಿ ತಿಳಿಸಿದ್ದರಿಂದ ಬ್ರಾಡ್‌ಲಾಫ್ ತನ್ನ ಮಸೂದೆಯನ್ನು ಹಿಂದಕ್ಕೆ ತೆಗೆದುಕೊಂಡನು. ಲಾರ್ಡ್ ಕ್ರಾಸನ ಮಸೂದೆ ಸಭೆಯ ಮುಂದೆ ಬರುವ ವೇಳೆಗೆ ಬ್ರಾಡ್ ಲಾಫ್ ಬದುಕಿರಲಿಲ್ಲ. ಕ್ರಾಸನ ಮಸೂದೆ ಹೆಚ್ಚು ಸತ್ತ್ವವಿಲ್ಲದ್ದಾಗಿತ್ತು. ಅದು ೧೮೯೨ರ ಕಾನೂನೆಂದು ಮಂಜೂರು ಪಡೆಯಿತು. ಅದರ ಪ್ರಕಾರ, ಸ್ಥಳೀಯ ಸಂಸ್ಥೆಗಳಿಗೂ ಇತರ ಚುನಾಯಕ ಸಂಸ್ಥೆಗಳಿಗೂ ಕೊಟ್ಟ ಚುನಾವಣೆಯ ಹಕ್ಕು ಸರಕಾರದ ಮಂಜೂರಾತಿಗೆ ಒಳಪಟ್ಟಿತ್ತು. ಕಾಂಗ್ರೆಸ್ಸು ಈ ಕಾನೂನಿನ ದೋಷಗಳನ್ನು ಉಪ್ಪಾಟಿಸುವುದರಲ್ಲಿ ನಿರತವಾಯಿತು.

ಕಾಂಗ್ರೆಸಿನ ಈ ಅಧಿವೇಶನಕ್ಕೆ ಇಂಡಿಯಾಕ್ಕೆ ಬಂದ ಕಾಲದಲ್ಲಿಯೆ, ದಾದಾಭಾಯಿ ಪಬ್ಲಿಕ್ ಸರ್ವಿಸ್ ಕಮಿಷನ್ನಿನ ಮುಂದೆ ಸಾಕ್ಷ್ಯವಿತ್ತನು. ಈ ಬಗೆಯ ವಿಚಾರಣೆಗಾಗಿ ಅವನು ಅನೇಕ ವರ್ಷಗಳಿಂದ ತಗಾದೆ ಮಾಡಿದ್ದನು. ಸಾಕ್ಷ್ಯ ಕೊಡುವುದಕ್ಕೆ ಸ್ವಲ್ಪ ದಿನಗಳ ಮುಂಚೆ ತಾನೆ ಅವನು ಆ ವಿಷಯವನ್ನು ಕುರಿತು ಲೇಖನವೊಂದನ್ನು ಇಂಗ್ಲೆಂಡಿನಲ್ಲಿ ಪ್ರಕಟಿಸಿದ್ದನು.

ತನ್ನ ಸಾಕ್ಷ್ಯದಲ್ಲಿ ದಾದಾಭಾಯಿ, ಇಂಗ್ಲೆಂಡ್ ಇಂಡಿಯಾಗಳಲ್ಲಿ ಏಕ ಕಾಲದಲ್ಲಿ ಪರೀಕ್ಷೆಗಳನ್ನು ನಡಸತಕ್ಕ ಆವಶ್ಯಕತೆಯನ್ನೂ, ಯೋಗ್ಯತಾ ಪರೀಕ್ಷೆಯ ಪ್ರಮಾಣ, ಸಂಬಳ, ಭತ್ಯ, ರಜಾ, ವಿರಾಮವೇತನ ಈ ಅಂಶ ಗಳು ಎಲ್ಲ ಅಭ್ಯರ್ಥಿಗಳಿಗೂ ಒಂದೇ ಸಮವಾಗಿರಬೇಕೆಂಬುದನ್ನೂ ಒತ್ತಿ

ಹೇಳಿದನು. ಮೊದಲನೆಯ ಪರೀಕ್ಷೆಗೆ ಮುಂಚೆ ಅಭ್ಯರ್ಥಿಯು ಇಂಗ್ಲೆಂಡಿನಲ್ಲಿ ತಾತ್ಕಾಲಿಕವಾಗಿ ವಾಸವಾಗಿರಬೇಕೆಂಬ ನಿಯಮ ಭಾರತೀಯರಿಗೆ ಒಂದು ದೊಡ್ಡ ಅಡಚಣೆಯಾಗಿದೆ ಎಂದನು.

ಸಾಕ್ಷಿಗಳು ಒಬ್ಬರಾದ ಮೇಠೊಬ್ಬರು ದಾದಾಭಾಯಿಯ ನಿಲವನ್ನು ಸಮರ್ಥಿಸಿದರು. ಆದರೆ ಮುಸ್ಲಿಮರು ಮಾತ್ರ ಒಗ್ಗಟ್ಟಾಗಿ ಅದನ್ನು ವಿರೋಧಿಸಿದರು. ಇಂಡಿಯಾದಲ್ಲಿ ಪರೀಕ್ಷೆ ನಡೆದರೆ ಹಿಂದುಗಳು ಹೆಚ್ಚಾಗಿ ಸಿವಿಲ್ ಸರ್ವಿಸನ್ನು ಸೇರಲು ಅವಕಾಶವಾಗುತ್ತದೆಯೆಂದೂ, ಮುಸ್ಲಿಮರ ಹಿತಾಸಕ್ತಿಗಳಿಗೆ ಧಕ್ಕೆಬರುತ್ತದೆಯೆಂದೂ ಅವರು ಹೆದರಿದರು. ದಾದಾಭಾಯಿ ಲಂಡನ್ನಿಗೆ ಹಿಂದಿರುಗಿದಮೇಲೆ, ತನ್ನ ಸ್ನೇಹಿತ ಕಾಜಿ ಷಾಬುದ್ದೀನ್ ವಿರೋಧ ಪಂಗಡಕ್ಕೆ ಸೇರಿರುವುದನ್ನು ತಿಳಿದು ಬಹುವ್ಯಥೆಪಟ್ಟನು. ಬಹು ಸಂಕಟದಿಂದ, ೧೮೮೭ರ ಜುಲೈ ೧೫ ರಲ್ಲಿ, ಕಾಜಿಗೆ ಪತ್ರ ಬರೆದನು :

ನಿನ್ನ ವರ್ತನೆಯಿಂದ ನಮ್ಮ ಶ್ರಮವೆಲ್ಲ ನಿಷ್ಪ್ರಯೋಜಕವಾಗಿದೆ. ಅಷ್ಟೆ ಅಲ್ಲ, ನಮ್ಮ ಆಂಗ್ಲ ಸ್ನೇಹಿತರ ಕೈಯೂ ಕಟ್ಟಿದಂತಾಗಿದೆ. ಇದಕ್ಕಾಗಿ ನಾನು ಬಹುವಾಗಿ ಮರುಗುತ್ತೇನೆ. ಅದರಲ್ಲಿಯೂ ನೀನು ಸ್ವಾರ್ಥಕಾರಣಗಳಿಂದ ಈ ರೀತಿ ನಡೆದಿರುವುದು ನನಗೆ ಬಹು ದುಃಖವನ್ನು ಉಂಟು ಮಾಡಿದೆ. ಮುಸ್ಲಿಮರು ಹಿಂದುಳಿದಿರುವುದರಿಂದ ಹಿಂದುಗಳೂ ಅಖಂಡ ಇಂಡಿಯಾವೂ ಮುಂದೆ ಹೋಗದಂತೆ ತಡೆಹಾಕಬಹುದೆ? ನಮ್ಮ ಭವಿಷ್ಯದ ಮೇಲೆ ಎಂಥ ಕೇಡನ್ನು ಎಸೆದಿರುವೆ? ನಮ್ಮ ಪ್ರಗತಿಯನ್ನು ಹೇಗೆ ಬಹು ಕಾಲದವರೆಗೆ ತಡೆದು ನಿಲ್ಲಿಸಿದ್ದೀಯೆ?

## ೨೦. ಫಿನ್ಸ್‌ಬರಿ–ಸದಸ್ಯ

ಇಂಗ್ಲೆಂಡಿಗೆ ಹಿಂದಿರುಗಿದವನೇ ದಾದಾಭಾಯಿ ಸ್ಥಳಶೋಧನೆಗೆ ಆರಂಭಿಸಿದನು. ಅವನಿಗೆ ಸೂಚಿಸಿದ ಕ್ಷೇತ್ರಗಳಲ್ಲೆಲ್ಲ ಸೆಂಟ್ರಲ್ ಫಿನ್ಸ್‌ಬರಿ ಆಶಾದಾಯಕವಾಗಿ ತೋರಿತು. ೧೮೮೭ ರ ಮಾರ್ಚ್ ೨೧ ರಲ್ಲಿ ಮಲಬಾರಿಗೆ ಬರೆದ ಕಾಗದದಲ್ಲಿ ಅವನು 'ಈ ವಾರವೆಲ್ಲ ಸೆಂಟ್ರಲ್ ಫಿನ್ಸ್‌ಬರಿ ಕ್ಷೇತ್ರದ ಕಾರ್ಯಕಾರೀಸಮಿತಿಯನ್ನು ಒಪ್ಪಿಸುವ ಕೆಲಸವೇ ತಕ್ಕಮಟ್ಟಿಗಾಯಿತು' ಎಂದು ತಿಳಿಸಿದನು. ಒಂದು ವಾರದ ನಂತರ, ಸ್ಥಿತಿ ಆಶಾದಾಯಕವಾಗಿದೆಯೆಂದು ತಿಳಿಸಿದನು. ಅವನಿಗೆ ಅನುಕೂಲವಾಗಿ ಸ್ಥಿತಿಗಳು ಚಲಿಸುತ್ತಿದ್ದ

ವೆನ್ನುವುದು ಕೆಂಬ್ರಿಜ್ಜಿನಲ್ಲಿ ವಿದ್ಯಾರ್ಥಿನಿಯಾಗಿದ್ದ ಫ್ರಾಮ್‌ಜಾದಿನ ಷಾಕೆ ದಾದಾಭಾಯಿಗೆ ಬರೆದ ಪತ್ರದಿಂದ ತಿಳಿದುಬರುತ್ತದೆ :

ನಿಮ್ಮ ಪ್ರೀತಿಯ ತಂದೆ ಈಗತಾನೆ ರಾಜಕೀಯದ ಪೂರ್ವ ಪರೀಕ್ಷೆಯಲ್ಲಿ ಜಯಹೊಂದಿರುತ್ತಾರೆ. ೬೨ ವರ್ಷದ ವೃದ್ಧ ಇಂಥ ಪ್ರಾಮುವಹಿಸುತ್ತಿರುವುದನ್ನು ಯೋಚಿಸು! ಇನ್ನು ಎರಡು ವಾರಗಳಲ್ಲಿ ಹೆಚ್ಚಿನ ಸುದ್ದಿಯನ್ನು ತಿಳಿಸುತ್ತೇನೆ.

೧೮೮೮ ರ ಮಾರ್ಚಿಯಲ್ಲಿ, ಸೆಂಟ್ರಲ್ ಫಿನ್ಸ್‌ಬರಿ ಕ್ಷೇತ್ರದಿಂದ ಉಮೇದುವಾರನಾಗಿದ್ದ ಹೊವಾರ್ಡ್ ಸ್ಪೆನ್ಸಿ ಎಂಬವನು ರಾಜಿನಾಮೆ ನಲ್ಲಿಸಿದನು. ಆ ಕ್ಷೇತ್ರದ ಲಿಬರಲ್ ಮತ್ತು ರ್‍ಯಾಡಿಕಲ್ ಸಂಘದ ಜನರಲ್ ಕೌನ್ಸಿಲ್ ಖಾಲಿಯಾದ ಸ್ಥಳವನ್ನು ತುಂಬಲು ನಾಲ್ಕು ಹೆಸರು ಗಳನ್ನು ಸೂಚಿಸುವಂತೆ ಕಾರ್ಯಕಾರೀಸಮಿತಿಯನ್ನು ಕೇಳಿತು. ಕಡೆಯ ಬ್ಯಾಲಟಿನಲ್ಲಿ ಉಳಿದ ೧೩ ಮಂದಿ ಉಮೇದುವಾರರಲ್ಲಿ ಆರಿಸಿ ಬಂದ ನಾಲ್ವರಲ್ಲಿ ದಾದಾಭಾಯಿ ಮೊದಲನೆಯವನಾಗಿದ್ದನು. ಮಾರನೆಯ ದಿನ ಸಂಘದ ಕಾರ್ಯದರ್ಶಿ ದಾದಾಭಾಯಿಗೆ ಈ ರೀತಿ ಬರೆದನು : "ನಿನ್ನನ್ನು ಅಭಿನಂದಿಸುತ್ತೇನೆ. ನಿನ್ನೆ ರಾತ್ರಿಯ ವೋಟಿಂಗ್ ಈ ರೀತಿ ಇತ್ತು. ಮಿ॥ ನವರೋಜಿ ೪೯, ಮಿ॥ ಈವ್ ೪೫, ಮಿ॥ ಫೋರ್ಡ್ ೨೬. ಮತ್ತು ಮಿ॥ ಡಾಡ್ಸ್ ೭." ದಾದಾಭಾಯಿಯ ಜೀವನದಲ್ಲಿ ಅದು ಬಹು ಹೆಮ್ಮೆಯ ಸಮಯವಾಗಿತ್ತು. ಆದರೆ ಮರುದಿವಸ ಅವನು ಕಾರ್ಯದರ್ಶಿಯನ್ನು ನೋಡಿದಾಗ, ಆತನು ಮತ್ತೊಂದು ಸಭೆಯನ್ನು ನೇರಿಸಬೇಕೆಂಬ ಕೋರಿಕೆ ಪತ್ರ ಬರುತ್ತದೆಯೆಂದು ತಿಳಿಸಿದನು.

ಸೆಪ್ಟೆಂಬರ್ ೩ನೆಯ ತಾರೀಕು ಸಂಘದ ಸ್ಥಳೀಯ ಅಧಿಕಾರಿಗಳು ತಿರುಗಿ ಸಭೆಸೇರಿಸಿದರು. ದಾದಾಭಾಯಿ ಆ ಸಭೆಗೆ ಹೋಗಲು ನಿರಾಕರಿಸಿ ದನು. ಆಗಸ್ಟ್ ೧೫ರಲ್ಲಿ ನಿರ್ಣಾಯಕವಾಗಿ ತೀರ್ಮಾನವಾದ ವೋಟಿಗೆ ವಿರುದ್ಧವಾಗಿ ನಡೆಯಲು ಕೌನ್ಸಿಲಿಗೆ ಹಕ್ಕಿಲ್ಲವೆಂದು ವಾದಿಸಿದನು. ಅವ ನಿಗೂ ಕೌನ್ಸಿಲಿಗೂ ಮಧ್ಯೆ ಉಂಟಾಗಿದ್ದ ಭಿನ್ನಾಭಿಪ್ರಾಯವನ್ನು ಪಂಚಾ ಯಿತಿಯಿಂದ ತೀರ್ಮಾನಿಸಬಹುದೆಂದು ಕೆಲವರು ಸೂಚಿಸಿದರು. ಅದಕ್ಕೆ ಅವನು ಒಪ್ಪಲಿಲ್ಲ. ತನ್ನ ಸ್ಥಿತಿ ಬಲಯುತವಾಗಿರಲಿ ದುರ್ಬಲವಾಗಿ ರಲಿ, ವಿರೋಧಿಗಳು ವಿರೋಧಿಸಲಿ, ಕೈ ಬಿಡುವ ಸ್ನೇಹಿತರು ಕೈ ಬಿಡಲಿ

ಎಲ್ಲ ಅಡ್ಡಿ ಆತಂಕಗಳನ್ನೂ ಮೇಲ್ಹಾಯ್ದು ಚುನಾವಣೆಗೆ ನಿಲ್ಲುವುದಾಗಿ ತಿಳಿಸಿದನು. ಮತದಾರರ ಮನೆಮನೆಗೂ ಹೋಗಿ ಅವರನ್ನು ಭೇಟಿ ಮಾಡಿದನು, ಮೊಹಲ್ಲಾ ಸಭೆಗಳಿಗೆ ಹೋದನು, ಅನೇಕ ಭಾಷಣಗಳನ್ನು ಮಾಡಿದನು, ರಾಜಕೀಯ ಮತ್ತು ಸಾಮಾಜಿಕ ಸಭೆಗಳಲ್ಲಿ ಅಧ್ಯಕ್ಷತೆ ವಹಿಸಿದನು ಇಲ್ಲವೆ ಭಾಷಣ ಮಾಡಿದನು, ಸಹಾಯಾರ್ಥ ಪ್ರದರ್ಶನಗಳಿಗೂ ಗಾನಗೋಷ್ಠಿಗಳಿಗೂ ಹೋದನು, ಹೀಗೆ ಸಾಧ್ಯವಿರುವ ರೀತಿಯಲ್ಲೆಲ್ಲ ಸದಾ ಚುನಾಯಕ ಜನರ ಕಣ್ಣಿಗೆ ಕಾಣಿಸಿಕೊಳ್ಳುತ್ತಿದ್ದನು. ಪ್ರತಿ ಮೊಹಲ್ಲಾ ಸಭೆಯಲ್ಲೂ ಸಭಿಕರು ಚುನಾವಣೆಯಲ್ಲಿ ಅವನಿಗೇ ವೋಟು ಮಾಡುವುದಾಗಿ ಗೊತ್ತುವಳಿಗಳನ್ನು ಮಾಡಿದರು.

ಬ್ರಿಟಿಷ್ ರಾಜಕೀಯದಲ್ಲಿ ದಾದಾಭಾಯಿ ಅನಾಮಧೇಯ ವ್ಯಕ್ತಿಯಾಗಿದ್ದನು. ಆದರೆ ಇದ್ದಕಿದ್ದಂತೆ ಹೆಸರುವಾಸಿಯಾಗುವ ಸಂದರ್ಭವೊದಗಿತು. ಇಂಗ್ಲೆಂಡಿನ ಮುಖ್ಯ ಮಂತ್ರಿಯಾದ ಲಾರ್ಡ್ ಸ್ಯಾಲಿಸ್‌ಬರಿಯು ನವೆಂಬರ್ ೩೦ ರಲ್ಲಿ, ಎಡ್ಡಿಂಬರೋದಲ್ಲಿ ಮಾಡಿದ ಭಾಷಣದಲ್ಲಿ ದಾದಾಭಾಯಿಯನ್ನು ಕುರಿತು ಅವಿವೇಕವಾದ ಮಾತುಗಳನ್ನಾಡಿದನು :

> ಮಾನವಕುಲ ಎಷ್ಟೇ ಪ್ರಗತಿಪಥದಲ್ಲಿ ನಡೆಯಲಿ, ನಾವು ಪೂರ್ವಾಗ್ರಹಗಳನ್ನು ಜಯಿಸುವುದರಲ್ಲಿ ಎಷ್ಟೇ ಮುಂದುವರಿದಿರಲಿ, ಬ್ರಿಟಿಷ್ ಕ್ಷೇತ್ರವು ಕಪ್ಪು ಮನುಷ್ಯನನ್ನು ಚುನಾಯಿಸುವಷ್ಟು ದೂರ ನಮ್ಮ ದೃಷ್ಟಿಹೋಗಿದೆಯೆಂದು ಹೇಳಲಾರೆ.
>
> ನಾನು ಸ್ಥೂಲವಾಗಿ ಮಾತನಾಡುತ್ತಿದೇನೆ. ಭಾಷೆಯನ್ನು ಬಳಕೆಯ ಅರ್ಥದಲ್ಲಿ ಉಪಯೋಗಿಸುತ್ತಿದೇನೆ ; ಯಾಕೆಂದರೆ ಬಣ್ಣ ಖಚಿತವಾಗಿ ಕಪ್ಪಲ್ಲ ; ಆದರೆ ಅವನು ಬೇರೆಕುಲದ ಮನುಷ್ಯ ಎನ್ನುವುದು ಖಚಿತ.

ಕಪ್ಪುಮನುಷ್ಯ—ಆ ಎರಡು ಮಾತುಗಳು—ದಾದಾಭಾಯಿಯನ್ನು ಮೇಲಕ್ಕೆ ಎತ್ತಿದವು. ಇದುವರೆಗೆ ಹೆಚ್ಚು ಪ್ರಚಾರವಿಲ್ಲದೆ, ಉಚ್ಚರಿಸಲು ಕಷ್ಟವಾಗಿದ್ದ ಅವನ ಹೆಸರು ೨೪ ಗಂಟೆಗಳಲ್ಲಿ, ಬ್ರಿಟನ್ನಿನಲ್ಲಿ ಪ್ರತಿಯೊಬ್ಬರ ನಾಲಗೆಯಮೇಲೂ ಇತ್ತು. ದಾದಾಭಾಯಿ ಆ ಮಾತುಗಳಿಂದ ಉದ್ರೇಕಗೊಳ್ಳಲಿಲ್ಲ. ಇಂಡಿಯಾದಲ್ಲಿ ಮಾತ್ರ ಕುಲವನ್ನು ಕುರಿತ ಧೂರ್ತಪ್ರಸಂಗ ಜನರ ಮನಸ್ಸನ್ನು ಬಹು ಬೇಸರಪಡಿಸಿತು. ಲಿಬರಲ್ ವರ್ತುಲಗಳಲ್ಲೂ ಅಸಮಾಧಾನವುಂಟುಮಾಡಿತು. ಸಾಮಾನ್ಯ ಉಮೇದುವಾರನೊಬ್ಬನು

ಆಡಿದ ಮಾತುಗಳಲ್ಲ ಅವು. ಇಂಗ್ಲೆಂಡಿನ ಮುಖ್ಯ ಮಂತ್ರಿಯಾದವನು ಆಡಿದವುಗಳು. ಚುನಾವಣಾ ಚಳವಳಿಯ ಉದ್ರೇಕಪೂರ್ಣಪರಿಸ್ಥಿತಿಯಲ್ಲಿ ಕೂಡ, ತನ್ನ ವಿನಯ ವಿಶ್ವಾಸಯುತವಾದ ನಡತೆಯಿಂದ, ಇಂಗ್ಲೆಂಡಿಗೂ ಬ್ರಿಟಿಷ್ ರಾಜರಲ್ಲಿ ನಿಷ್ಠೆಯುಳ್ಳ ಇತರ ದೇಶಗಳಿಗೂ ಇರುವ ರಾಜಭಕ್ತಿ ಯುತವಾದ ಕಟ್ಟುಗಳನ್ನು ಬಲಪಡಿಸುವುದು ಮುಖ್ಯಮಂತ್ರಿಯಾದ ಅವನ ಕರ್ತವ್ಯವಾಗಿತ್ತು. ಆದ್ದರಿಂದ ಅವನ ಸ್ನೇಹಿತರು ಕೂಡ ಅವನ ಮಾತು ಗಳಿಂದ ದಿಗಿಲು ಪಟ್ಟರು. ದಾದಾಭಾಯಿಯ ಚರ್ಮ ಸ್ಯಾಲಿಸ್‌ಬರಿಯದ ಕ್ಕಿಂತ ಕಪ್ಪಾಗಿರಲಾರದು ಎಂದು ಹೇಳುವವರು ಹೇಳಿದರು. ಜಾನ್ ಮಾರ್ಲೆ, 'ಸ್ಯಾಲಿಸ್‌ಬರಿ ಅವನಿರುವ ಸ್ಥಾನದಲ್ಲಿ ಇರುವುದು ಲಂಡನ್ನಿನ ತಪ್ಪು' ಎಂದು ನುಡಿದನು.

ದೇಶದ ನಾನಾ ಕಡೆಗಳಿಂದ ದಾದಾಭಾಯಿಗೆ ಅಸಂಖ್ಯ ಪತ್ರಗಳು ಬಂದವು. ಇಂಗ್ಲಿಷ್ ಜನರು, ಪರಿಚಿತರು ಅಪರಿಚಿತರು, ಮುಖ್ಯಮಂತ್ರಿಯು ಉಪಯೋಗಿಸಿದ ಮಾತುಗಳಿಗೆ ತಮ್ಮ ಬೇಸರವನ್ನು ವ್ಯಕ್ತಪಡಿಸಿ, ದಾದಾಭಾಯಿ ಪಾರ್ಲಿಮೆಂಟಿಗೆ ಚುನಾಯಿತನಾಗಬೇಕೆಂದು ತಮ್ಮ ಇಚ್ಛೆ ಯೆಂದು ತಿಳಿಸಿ ಪತ್ರಬರೆದರು. ಮುಂದಿನ ಕೆಲವು ವಾರಗಳಲ್ಲಿ ಅವನಿಗೆ ಟೀ ಸಮಾರಂಭಗಳಿಗೂ ಔತಣಕೂಟಗಳಿಗೂ ಲೆಕ್ಕವಿಲ್ಲದಷ್ಟು ಕರೆಗಳು ಬಂದವು. ೧೮೮೯ ರ ಜನವರಿ ೨೧ ರಲ್ಲಿ ನ್ಯಾಷನಲ್ ಲಿಬರಲ್ ಕ್ಲಬ್ಬಿ ನವರು ಭೋಜನಸಮಾರಂಭವನ್ನು ಏರ್ಪಡಿಸಿದರು. ಲಾರ್ಡ್ ರಿಪನ್ ಆ ಸಂಜೆಯ ಅತಿಥಿಯ ಆರೋಗ್ಯಭಾಗ್ಯವನ್ನು ಬಯಸಿದನು. ಫ್ರೆಡರಿಕ್ ಹ್ಯಾರಿಸನ್ "ಸಾಮ್ರಾಜ್ಯದ ಏಕತೆ" ಯನ್ನೂ ಡಬ್ಲ್ಯು. ಡಬ್ಲ್ಯು. ಹಂಟರ್ "ಇಂಡಿಯದಲ್ಲಿನ ನಮ್ಮ ಸಹ ಪ್ರಜೆಗಳ" ನ್ನೂ ಸೂಚಿಸಿ ಮಾತಾಡಿದರು. ಹೀಗೆ ಅನಿರೀಕ್ಷಿತ ದಿಕ್ಕುಗಳಿಂದ ದಾದಾಭಾಯಿಗೆ ಬೆಂಬಲ ದೊರೆಯಿತು.

ಪಕ್ಷದ ಅಧಿಕಾರಿಗಳ ಯೋಚನೆಯೆಲ್ಲ ಈಗ ಚುನಾವಣೆಯನ್ನು ಗೆಲ್ಲುವುದರ ಕಡೆಗಿತ್ತು. ಆದಕ್ಕೆ ಪಕ್ಷದಲ್ಲಿನ ಒಡಕನ್ನು ಸರಿಪಡಿಸುವುದು ಅಗತ್ಯವಾಗಿತ್ತು. ಪ್ರತಿಸ್ಪರ್ಧಿಗಳಾದ ಉಮೇದುವಾರರು ಪಂಚಾಯಿತಿಗೆ ಒಪ್ಪಿಕೊಂಡರೆ ಒಡಕನ್ನು ಮುಚ್ಚಬಹುದಾಗಿತ್ತು. ಪಂಚಾಯಿತಿಗೆ ಒಪ್ಪಿ ಕೊಳ್ಳುವುದು ಹೇಡಿತನವೆಂದೂ ಆತ್ಮ ಘಾತಕವೆಂದೂ ದಾದಾಭಾಯಿ ಬಗೆ

ದನು. ಈ ಸಂದರ್ಭದಲ್ಲಿ ಲಿಬರಲ್ ಪಕ್ಷದ ಕಾರ್ಯ ಸೂತ್ರಗಳು ಲಾರ್ಡ್ ರಿಪನ್ನನ ಕೈಗೆ ಬಂದವು. ಅವನು ಫೋರ್ಡನನ್ನು ಸ್ಪರ್ಧೆಯಿಂದ ಆಚೆ ನಿಲ್ಲುವಂತೆ ಒಪ್ಪಿಸಲು ಯತ್ನಿಸುತ್ತಿದ್ದನು. ಪಕ್ಷದವರು ದಾದಾಭಾಯಿ ಪಂಚಾಯಿತಿಗೆ ಒಪ್ಪುವಂತೆ ಯತ್ನಿಸಬೇಕೆಂದು ಅವನನ್ನು ಒತ್ತಾಯಪಡಿಸಿದರು. ದಾದಾಭಾಯಿಗೆ ಬೇರೆ ಕ್ಷೇತ್ರವನ್ನು ಗೊತ್ತುಪಡಿಸಿದರೆ ಎಲ್ಲ ಸರಿ ಹೋಗಬಹುದೆಂದು ಲಾರ್ಡ್ ರಿಪನ್ ಯೋಚಿಸಿದನು. ಆದರೆ ದಾದಾಭಾಯಿ ತನ್ನ ಮಾರ್ಗವನ್ನು ನಿರ್ಧರಿಸಿಕೊಂಡಿದ್ದನು. ಮತದಾರರು ನ್ಯಾಯವನ್ನು ಎತ್ತಿ ಹಿಡಿಯುವರೆಂದು ಆಶಿಸಿದನು.

ಅಂತು ಕಡೆಗೆ ಫೋರ್ಡ್ ತನ್ನ ಉಮೇದುವಾರಿಕೆಯನ್ನು ಹಿಂದಕ್ಕೆ ತೆಗೆದುಕೊಂಡನು. ಜುಲೈ ೬ ರಲ್ಲಿ ಚುನಾವಣೆ ನಡೆಯಿತು ಮೂರು ವೋಟುಗಳ ಆಧಿಕ್ಯದಿಂದ ದಾದಾಭಾಯಿ ಜಯಶೀಲನಾದನು ಜನ ಹರ್ಷಗೊಂಡರು. ದಾದಾಭಾಯಿಯ ಕೀರ್ತಿ ಪರಾಕಾಷ್ಠದಶೆಯನ್ನು ಮುಟ್ಟಿತು. ಅನೇಕ ವಾರಗಳ ಪರ್ಯಂತ ಮೊದಲನೆಯ ಭಾರತೀಯ ಎಂ.ಪಿ.ಗೆ ಅಭಿನಂದನೆಗಳು ಪ್ರಪಂಚದ ನಾನಾ ದಿಕ್ಕುಗಳಿಂದ ಸುರಿದವು. ಜುಲೈ ೨೩ ರಲ್ಲಿ ಹೋಲ್ಬರ್ನ್‌ನಲ್ಲಿ ಏರ್ಪಡಿಸಿದ್ದ ಭೋಜನ ಸಮಾರಂಭದಲ್ಲಿ ಅವನು ಮಾತನಾಡುತ್ತ "ಆಂಗ್ಲ ಮಹಿಳೆಯರಿಂದಲೂ ಮಹನೀಯರಿಂದಲೂ ಬಂದಿರುವ ತಂತೀಸಮಾಚಾರಗಳನ್ನೂ ಪತ್ರಗಳನ್ನೂ ಪರಿಶೀಲಿಸಿದರೆ, ಇಂಗ್ಲಿಷ್ ಜನ ನನ್ನ ಜಯವನ್ನು ತಮಗೇ ದೊರೆತದ್ದೆಂದು ತಿಳಿದಿರುವುದಾಗಿ ತೋರುವುದು" ಎಂದು ನುಡಿದನು.

ಇಂಡಿಯದ ನಾನಾ ಭಾಗಗಳಿಂದ ಸೆಂಟ್ರಲ್ ಫಿನ್ಸ್‌ಬರಿಗೂ ತಂತೀ ಸಂದೇಶಗಳು ಬಂದವು. ಈ ಬಗೆಯ ಜಯ ಇಂಗ್ಲೆಂಡಿನಂಥ ಸ್ವತಂತ್ರ ದೇಶದಲ್ಲಿ ಮಾತ್ರ ಸಾಧ್ಯ. ಮತದಾರರು ಅಧಿಕಾರೀ ಹೇಳಿಕೆಗಳಿಗಿಂತ ಚೆನ್ನಾಗಿ ಬ್ರಿಟಿಷ್ ಪ್ರಜೆಗಳ—ಅವರು ಎಲ್ಲೇ ಹುಟ್ಟಿರಲಿ—ಸಮಾನತೆಯನ್ನು ಪ್ರದರ್ಶಿಸಿದ್ದರು. ಈವರೆಗೆ ಇಂಡಿಯಾ ಪರವಾಗಿ ಬ್ರೈಟ್, ಫಾಸೆಟ್, ಬ್ರಾಡ್‌ಲಾಫ್, ಕೆಯ್ನ್ ಮೊದಲಾದವರು ವಾದಿಸಿದ್ದರು. ಈಗ ಅವರ ಜವಾಬ್ದಾರಿಯ ಹೊದಿಕೆ ನಾಡಿನ ಪುತ್ರನ ಮೇಲೆಯೇ ಬಿತ್ತು.

## ೨೧. ದಿನವೂ ಇಂಡಿಯದ ಯೋಚನೆ

ಪಾರ್ಲಿಮೆಂಟಿನ ಸದಸ್ಯನಾಗುವುದು ಉದ್ದಿಷ್ಟ ಗುರಿಗಾಗಿ ಒಂದು ಸಾಧನಮಾತ್ರವಾಗಿತ್ತು. ಇಂಡಿಯಾದೇಶದ ಹಿತಾಭಿವೃದ್ಧಿಯೇ ಅವನ ದಿನ ದಿನದ ಯೋಚನೆಯಾಗಿತ್ತು. ಏಳುವರ್ಷಗಳ ಚುನಾವಣೆಯ ಕಷ್ಟ ಕಾಲದಲ್ಲಿ ಸಹ, ಇಂಡಿಯಾದೇಶದ ಬಡತನದ ಸ್ಥಿತಿಯನ್ನೂ, ಪರಿಸ್ಥಿತಿಯ ಉಗ್ರಸ್ವರೂಪವನ್ನೂ, ಇಂಗ್ಲಿಷ್ ಜನರಿಗೆ ಹೇಗೆ ಮನದಟ್ಟು ಮಾಡಿಕೊಡು ವುದು, ಎಂಬುದೇ ಅವನ ನಿರಂತರವಾದ ಚಿಂತೆಯಾಗಿತ್ತು. ಬ್ರಿಟಿಷ್ ಜನರು ವಿಷಯಗಳನ್ನು ತಿಳಿಯಲು ಸಿದ್ಧರಾಗಿದ್ದರು. ಆದರೆ ತಿಳಿವಳಿಕೆಗೂ ಕ್ರಿಯೆಗೂ ಬಹುದೂರವಿತ್ತು.

ಮೊದ ಮೊದಲ ದಿನಗಳಲ್ಲಿ ಈಸ್ಟ್ ಇಂಡಿಯಾ ಅಸೋಸಿಯೇಷನ್ ಚರ್ಚೆಗೆ ಸರಿಯಾದ ಸ್ಥಳವಾಗಿತ್ತು. ಅಲ್ಲಿನ ವಿಮರ್ಶೆಗಳು ಅಧಿಕಾರಿಗಳ ಮೇಲೆ ಒಳ್ಳೇಪರಿಣಾಮನ್ನು ಉಂಟುಮಾಡಿದವು. ಆದರೆ ಅದರ ಆಡಳಿತ ಕ್ರಮೇಣ ಮೊದಲಿನ ಉತ್ಸಾಹವಿಲ್ಲದ ಜನರ ಕೈಗೆ ಬಂದಿತ್ತು. ಆದ್ದರಿಂದ ದಾದಾಭಾಯಿ ಇಂಡಿಯಾದ ಹೋರಾಟವನ್ನು ನಡೆಸಲು ಕಾಮನ್ಸ್ ಸಭೆಯಲ್ಲಿದ್ದ ಸ್ನೇಹಿತರ ನೆರವನ್ನು ಕೋರಿದನು. ಅವರಲ್ಲಿ ಮುಖ್ಯರಾದವರು ವಿಲಿಯಂ ವೆಡ್ಡರ್‌ಬರ್ನ್, ಡಬ್ಲ್ಯು. ಎಸ್. ಕೆಯ್ನ್, ಮತ್ತು ಸ್ಯಾಮ್ ವೆಲ್ ಸ್ಮಿತ್. ಹೈಂಡ್‌ಮನ್ ಪಾರ್ಲಿಮೆಂಟಿನಲ್ಲಿ ಇಲ್ಲದಿದ್ದರೂ ಬಹು ಸಹಾಯ ಕನಾಗಿದ್ದನು. ಆದರೆ ಮಾರ್ಗಸಾಧನಗಳ ವಿಷಯದಲ್ಲಿ ಅವನಿಗೂ ದಾದಾಭಾಯಿಗೂ ಅಭಿಪ್ರಾಯಭೇದಗಳಿದ್ದವು. ಅವನ ದೃಷ್ಟಿಯಲ್ಲಿ ಇಂಡಿಯಾದ ಪರಿಸ್ಥಿತಿ, ದಾದಾಭಾಯಿಗೆ ತೋರುವುದಕ್ಕಿಂತಲೂ ಹೆಚ್ಚಾಗಿ, ನಿರಾಶಾದಾಯಕವಾಗಿತ್ತು. ೧೮೮೪ ರಲ್ಲಿ ದಾದಾಭಾಯಿ ಇಂಡಿಯಾದಲ್ಲಿ ದ್ದಾಗ ಈ ಇಬ್ಬರು ಸ್ನೇಹಿತರ ನಡುವೆ ಪ್ರಚಲಿತ ರಾಜಕೀಯವನ್ನು ಕುರಿತು ನಿರಂತರವಾಗಿ ಅಭಿಪ್ರಾಯ ವಿನಿಮಯ ನಡೆಯುತ್ತಿತ್ತು. ಹೈಂಡ್‌ಮನ್ ಒಂದು ಕಾಗದದಲ್ಲಿ "ಇಲ್ಲಿ ಕ್ರಾಂತಿಯಾದ ಹೊರತು ಇಂಡಿಯಕ್ಕಾಗಿ ಏನನ್ನೂ ಮಾಡಲಾಗುವುದಿಲ್ಲವೆಂದು ನಾನು ನಿನಗೆ ಎಷ್ಟೋಸಲ ತಿಳಿ

ಸಿದ್ಧನೆ. ಆ ಕ್ರಾಂತಿಗಾಗಿ ನಾನು ಒಂದೇಸಮನಾಗಿ ಸಿದ್ಧತೆಗಳನ್ನು ಮಾಡುತ್ತಿದೇನೆ". ಈಮಾತಗಳು ದಾದಾಭಾಯಿಯಲ್ಲಿ ಯಾವ ಉತ್ಸಾಹ ವನ್ನೂ ಹುಟ್ಟಿಸಲಿಲ್ಲ. ವ್ಯವಸ್ಥಾಬದ್ಧವಾದಕ್ರಮ ಅವನ ಜೀವನದುಸಿ ರಾಗಿತ್ತು. ಹೈಂಡ್‌ಮನ್ ಮಾತ್ರ "ಬೇಡುವ ಕಾಲ—ಅದು ಎಂದಾದರೂ ಇದ್ದ ಪಕ್ಷದಲ್ಲಿ—ಹೊರಟುಹೋಯಿತು" ಎಂದು ಹೇಳುತ್ತಿದ್ದನು.

ಭಾರತರಾಷ್ಟ್ರ ಮಹಾಸಭೆ ಸ್ಥಾಪನೆಯಾದಂದಿನಿಂದ, ಇಂಡಿಯಾ ಮತ್ತು ಕಾಂಗ್ರೆಸ್ಸು ದಾದಾಭಾಯಿಯ ದಿನದಿನದ ಯೋಚನೆಯಲ್ಲಿ ಒಟ್ಟಾಗಿ ಬೆರೆತುಕೊಂಡಿದ್ದವು. ಅವೆರಡೂ ಪರ್ಯಾಯ ಪದಗಳೆಂಬಂತೆ ಅವನು ಮಾತಾಡುತ್ತಿದ್ದನು. ಇಂಡಿಯಾಕ್ಕೆ ಒಳ್ಳೆಯದಾದದ್ದು ಕಾಂಗ್ರೆಸ್ಸಿಗೂ ಒಳ್ಳೆಯದು; ಕಾಂಗ್ರೆಸ್ಸಿಗೆ ಕೆಡುಕಾದರೆ ಇಂಡಿಯಾಕ್ಕೂ ಕೆಡುಕು. ಈ ಕಾಲದ ಅವನ ವಿಪುಲ ಪತ್ರವ್ಯವಹಾರಗಳನ್ನು ನೋಡಿದರೆ, ರಾಷ್ಟ್ರ ಮಹಾ ಸಭೆಯ ವಿಷಯದಲ್ಲಿ ಅವನ ಮಮತೆಯೆಷ್ಟಿತ್ತು, ಅದರ ಬೆಳವಣಿಗೆಯ ವಿಚಾರದಲ್ಲಿ ಅವನು ಎಷ್ಟು ಯೋಚನೆ ಮಾಡುತ್ತಿದ್ದನು—ಎಂಬಿವು ವ್ಯಕ್ತ ವಾಗುತ್ತವೆ; ಆ ಕಾಲದಲ್ಲಿ ಅವನ ಮನಸ್ಸಿನಲ್ಲಿ ಹೆಚ್ಚಾಗಿ ಇದ್ದದ್ದು ಚುನಾ ವಣೆಯ ವಿಷಯವೋ ಕಾಂಗ್ರೆಸ್ಸಿನ ವಿಷಯವೋ ಹೇಳುವುದು ಕಷ್ಟ. ಪ್ರತಿ ವಾರವೂ ತಪ್ಪದಂತೆ, ಸಭೆಗೆ ಸಂಬಂಧಪಟ್ಟಂತೆ ಸಣ್ಣಪುಟ್ಟ ವಿವರಗಳನ್ನು ಸಹ ತಿಳಿಸುವ ಪತ್ರಗಳು ಬರುತ್ತಿದ್ದವು; ಅಥವಾ ಸಭೆಯ ಅಭಿವೃದ್ಧಿಗಾಗಿ ಸಲಹೆಸೂಚನೆಗಳನ್ನು ಒಳಗೊಂಡ ಪತ್ರಗಳು ಅವನಿಂದ ಸ್ನೇಹಿತರಿಗೆ ಹೋಗುತ್ತಿದ್ದವು. ಕಾಂಗ್ರೆಸ್ಸನ್ನು ಕುರಿತು ಪ್ರತಿದಿನವೆಂಬಂತೆ ಬ್ರಿಟಿಷ್ ಸ್ನೇಹಿತರೊಡನೆ ಮಾತಾಡುತ್ತಿದ್ದನು; ಅಥವಾ ಅವರಿಗೆ ಪತ್ರ ಬರೆಯುತ್ತಿ ದ್ದನು, ಅಥವಾ ಪತ್ರಿಕೆಗಳಿಗೆ ಬರೆಯುತ್ತಿದ್ದನು; ಇಲ್ಲವೆ ಸಭೆಗಳಲ್ಲಿ ಭಾಷಣ ಮಾಡುತ್ತಿದ್ದನು. ಅವನ ಪತ್ರಗಳಿಂದ ಅವನ ಉತ್ಕಟವಾದ ದೇಶಾಭಿ ಮಾನ ವ್ಯಕ್ತವಾಗುತ್ತದೆ, ತಾಯಿನಾಡನ್ನು ಅಧೀನತೆಯಿಂದ ಬಿಡುಗಡೆ ಮಾಡಲು ದಿನವೂ ಅವನು ಯೋಚಿಸುತ್ತಿದ್ದ ಯೋಚನೆಗಳೂ ಹಂಚಿಕೆಗಳೂ ಆಡುತ್ತಿದ್ದ ಮಾತುಗಳೂ ತಿಳಿದು ಬರುತ್ತವೆ. ಪ್ರಾಸಂಗಿಕವಾಗಿ, ಅವನ ಪತ್ರಗಳು ಕಾಂಗ್ರೆಸಿನ ಆರಂಭ ದಿನಗಳಿಗೆ ಸಂಬಂಧಪಟ್ಟ ಹಲವು ಸ್ವಾರಸ್ಯ ಸಂಗತಿಗಳನ್ನು ಬೆಳಕಿಗೆ ತರುತ್ತವೆ.

## ದಾದಾಭಾಯಿ ಮಲಬಾರಿಗೆ

ಜನವರಿ ೩೦, ೧೮೮೭.

ಮಹಮ್ಮದೀಯರು ಕಾಂಗ್ರೆಸಿಗೆ ಸೇರುವುದಿಲ್ಲವೆಂಬ ಹೇಳಿಕೆ ಸರಿಯಲ್ಲ ವೆಂದು ಬರೆಯಬೇಕೆಂದು ಇದಾನೆ, ಸರ್ ಡಬ್ಲ್ಯು. ಡಬ್ಲ್ಯು. ಹಂಟರ್. ದಿ ಟೈಂಸಿನ ಕಲ್ಕತ್ತದ ಬಾತ್ಮೀದಾರನು ಪ್ರತಿ ವಿಷಯವನ್ನೂ ಅತಿ ತಪ್ಪುತಪ್ಪಾಗಿ ನಿರೂಪಿಸುತ್ತಾನೆ. ಇಲ್ಲಿ ಕಾಂಗ್ರೆಸಿನ ವಿಷಯದಲ್ಲಿ ಬಹುವಾದ ಕುತೂಹಲವಿದೆ.

## ಸರ್ ಜಾನ್ ಬಡ್ಫಿಯರ್*ದಾದಾಭಾಯಿಗೆ

ಜುಲೈ ೭, ೧೮೮೭

ಈ ರಾಷ್ಟ್ರ ಮಹಾಸಭೆಯ ಅಧಿವೇಶನದಲ್ಲಿ ನಾನು ಸ್ವತಃ ಹಾಜರಿರ ಬೇಕೆಂಬ ಇಷ್ಟ ಬಹುವಾಗಿತ್ತು. ಸಂದರ್ಭ ಬಹು ಮಹತ್ವದ್ದು ಮತ್ತು ಬೋಧ ಪ್ರದವಾದದ್ದು. ಅದರಿಂದ ಹೊರಡುವ ನೀತಿಯನ್ನು ಈ ದೇಶದ ಆಡಳಿತ ವರ್ಗದವರು ತಿಳಿದುಕೊಳ್ಳುತ್ತಾರೆಂದು ನಂಬಿದ್ದೇನೆ. ಆದರೆ ಈ ವಿಚಾರದಲ್ಲಿ ನಾನು ಅಷ್ಟೇನೂ ಆಸೆ ಇಟ್ಟುಕೊಂಡಿಲ್ಲ. ಯಾಕೆಂದರೆ ಈಗ ಸರಕಾರದಲ್ಲಿ ಪ್ರಭಾವಶಾಲಿಗಳಾಗಿ ಅದನ್ನು ನಡಸುತ್ತಿರುವವರು ಅಬ್ಬರದ ಜನ ವರ್ಗ ದವರು. ತಮಗೆ ಸಂಬಂಧಪಟ್ಟ ವಿಷಯಗಳಲ್ಲೆಲ್ಲಾ ಅವರು ನ್ಯಾಯ ಸ್ವಾತಂತ್ರ್ಯಗಳನ್ನು ಮೆಚ್ಚುತ್ತಾರೆ. ಆದರೆ ಯಾರ ಮೇಲೆ ದರ್ಪ ತೋರಿಸಬಲ್ಲರೊ ಅವರು ತಮ್ಮ ನೀತಿಯನ್ನು ಪ್ರಶ್ನಿಸಿದರೆ ಕೂಡಲೆ ಅವರನ್ನು ತಿರಸ್ಕರಿಸಿ ಅವರ ಮೇಲೆ ಅಧಿಕಾರ ಚಲಾಯಿಸುತ್ತಾರೆ. ಕಟ್ಟ ಕಡೆಯಲ್ಲಿ ಜನ ತೆಯ ಹಿತ ಸಾಧನೆಯಾಗಬೇಕು. ನಮ್ಮ ಸ್ವದೇಶದ ಪ್ರಜಾಸರಕಾರವು ಇದನ್ನು ಎಷ್ಟು ಶೀಘ್ರವಾಗಿ ತಿಳಿದು ನಡೆದರೆ ಅಷ್ಟು ಇಂಡಿಯಾ ದೇಶದ ಮಟ್ಟಿಗಾ ದರೂ ಉತ್ತಮ.

## ದಾದಾಭಾಯಿ ಹ್ಯೂಮ್‌ಗೆ

ಜನವರಿ ೫, ೧೮೮೮.

ದೇಶೀಯ ಸಂಸ್ಥಾನಗಳು ಕಾಂಗ್ರೆಸಿನಲ್ಲಿ ಆಸಕ್ತಿವಹಿಸಲು ಮತ್ತು ಅದಕ್ಕೆ ಸಹಾಯಮಾಡಲು ಅವಕಾಶವಿರಬೇಕು. ಇಷ್ಟಪಟ್ಟರೆ ಅವರು ಪ್ರತಿ ನಿಧಿಗಳನ್ನೂ ಕಳಿಸಬಹುದು ಇಂಡಿಯಾ ದೇಶದ ಎಲ್ಲ ಜನಗಳು ಈ ಬಗೆ ಯಲ್ಲಿ ಒಟ್ಟಾಗುವುದು ಅಪೇಕ್ಷಣೀಯವಾಗಿದೆ.

---

* ಕಲ್ಕತ್ತ ಹೈ ಕೋರ್ಟಿನ ನಿವೃತ್ತ ನ್ಯಾಯಾಧೀಶ ಮತ್ತು The Aryan Village (ಆರ್ಯರ ಗ್ರಾಮ) ಎಂಬ ಗ್ರಂಥದ ಕರ್ತೃ.

## ದಾದಾಭಾಯಿ ಮಲಬಾರಿಗೆ

ಏಪ್ರಿಲ್ ೧೮, ೧೮೮೮.

ಸೈಯದ್ ಅಹಮದನನ್ನು ಒಲಿಸಿಕೊಂಡು ಕಾಂಗ್ರೆಸಿಗೆ ಇರುವ ವಿರೋಧವನ್ನು ತಪ್ಪಿಸಲು ಹ್ಯೂಮನಿಗೆ ಸಾಧ್ಯವಾಗಬಹುದೆಂದು ನಂಬಿದ್ದೇನೆ. ನಮ್ಮ ನಮ್ಮಲ್ಲಿರುವ ಅನೈಕಮತ್ಯದಿಂದ ಬಹುತೊಂದರೆಯಾಗುತ್ತದೆ ಇಲ್ಲಿ, ಇಂಡಿಯಾ ವಿಷಯದಲ್ಲಿ ಆಸಕ್ತಿ ಕ್ರಮೇಣ ಹೆಚ್ಚುತ್ತಿದೆ; ಆದರೆ ಈ ಒಡಕು ಅದನ್ನು ತಡೆಯುತ್ತದೆ.

ಕಾಂಗ್ರೆಸಿಗೆ ಇದ್ದ ವಿರೋಧ ಯಾವುದು? ಕಾಂಗ್ರೆಸಿನ ಬೆಳವಣಿಗೆಗೆ ತಡೆಯಾಗುತ್ತದೆಂದು ದಾದಾಭಾಯಿ ಹೆದರಿದ ಒಡಕು ಯಾವುದು? ೧೮೮೧ ರಲ್ಲಿ ಆಂಗ್ಲೋ ಇಂಡಿಯನ್ ಮತ್ತು ಮುಸ್ಲಿಂ ಪಂಗಡಗಳು ಕಾಂಗ್ರೆಸಿನ ವಿಷಯದಲ್ಲಿ ಬಹುನಾಗಿ ಉದ್ರೇಕಗೊಂಡಿದ್ದವು. ಆಲನ್ ಹ್ಯೂಮ್ ಕಾಂಗ್ರೆಸಿನ ತಂದೆಯೆಂದು ಹೆಸರಾಗಿರುವನಷ್ಟೆ. ಮೊದಲು ಅವನು ಕಾಂಗ್ರೆಸಿನ ಚಟುವಟಿಕೆಗಳು ಕೇವಲ ಸಾಮಾಜಿಕವಾಗಿ ಇರಬೇಕೆಂದು ಅಭಿಪ್ರಾಯವುಳ್ಳವನಾಗಿದ್ದನು. ಆಗ ವೈಸ್‌ರಾಯ್ ಆಗಿದ್ದ ಮಾರ್ಕ್ವಿಸ್ ಆಫ್ ಡಫೆರಿನ್ ಕಾಂಗ್ರೆಸಿನ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಜನಕ್ಕೆ ರಾಜಕೀಯ ಶಿಕ್ಷಣ ದೊರೆಯುವಂತೆ ಮಾಡಬೇಕೆಂದು ಹ್ಯೂಮನಿಗೆ ಸಲಹೆ ಮಾಡಿದನು. ಕಾಂಗ್ರೆಸಿನ ಎರಡನೆಯ ಅಧಿವೇಶನಕ್ಕೆ ಕಲ್ಕತ್ತೆಗೆ ಬಂದಿದ್ದ ಪ್ರತಿನಿಧಿಗಳನ್ನು ಸರಕಾರೀ ಭವನದಲ್ಲಿ ಏರ್ಪಡಿಸಿದ ವನಗೋಷ್ಠಿಗೆ ಆಹ್ವಾನಿಸಿದನು. ಮೂರನೆಯ ಅಧಿವೇಶನದ ಸಮಯದಲ್ಲಿ ಈ ಮೇಲ್ಪಂಕ್ತಿಯನ್ನು ಮದರಾಸಿನ ಗವರ್ನರ್ ಅನುಸರಿಸಿ ನಡೆದನು. ಬೊಂಬಾಯಿ ಗವರ್ನರ್ ಲಾರ್ಡ್ ರೀ ಮೊದಲಾದ ಅಧಿಕಾರಿಗಳು ಸರಕಾರಕ್ಕೆ ವ್ಯವಸ್ಥಾಬದ್ಧವಾದ ವಿರೋಧ ಪಕ್ಷವೊಂದು ರೂಪಗೊಳ್ಳುವುದನ್ನು ಅನುಮೋದಿಸಿದರು.

ಆದರೆ ಮದರಾಸು ಕಾಂಗ್ರೆಸಿನ ನಂತರ ಅಧಿಕಾರ ವರ್ಗದವರು ಅದರ ಬೆಳವಣಿಗೆಯ ವಿಷಯದಲ್ಲಿ ಭಯಪಟ್ಟರು. ಕಾಂಗ್ರೆಸ್ ವ್ಯವಸ್ಥಿತವಾದ ಸಮಾಜವನ್ನು ತಲೆಕೆಳಗು ಮಾಡಲು ಹೊರಟಿದೆಯೆಂದು ಆಂಗ್ಲೋ-ಇಂಡಿಯನ್ನರು ಸಂಶಯಪಟ್ಟರು. ಕಾಂಗ್ರೆಸ್ ಬ್ರಿಟಿಷ್ ಸರಕಾರಕ್ಕೆ ಬದಲಾಗಿ ಹಿಂದೂ ಸರಕಾರವನ್ನು ಸ್ಥಾಪಿಸಲು ಹೊರಟಿದೆಯೆಂದು ಮುಸ್ಲಿ

ಮರೂ ಕೆಲವರು ಪಾರಸಿಗಳೂ ಭಯಗ್ರಸ್ತರಾದರು.

ದಾದಾಭಾಯಿ ಕಾಂಗ್ರೆಸಿನ ಹೆಸರಿನಲ್ಲಿ ಇಂಗ್ಲೆಂಡಿನಲ್ಲಿ ಚಳವಳಿ ನಡಸುತ್ತಿದ್ದುದು ದೊಡ್ಡ ಅಪರಾಧವಾಗಿ ಭಾವಿಸಲ್ಪಟ್ಟಿತು. ಕಾಂಗ್ರೆಸ್ ಪ್ರತಿನಿಧಿಸುವ ರಾಜಕೀಯ ಶಕ್ತಿ ಬಲಯುತವಾದದ್ದೆಂದೂ ಅದಕ್ಕೆ ಅಡ್ಡ ಬಂದರೆ ಸರಕಾರ ತಾನೇ ಮುರಿದು ಬೀಳುವುದೆಂದೂ ದಾದಾಭಾಯಿ ಬಹಿರಂಗವಾಗಿ ನುಡಿದಿದ್ದನು. ದಾದಾಭಾಯಿ ಕಾಂಗ್ರೆಸ್ ಸಾಹಿತ್ಯವನ್ನು ನಿರಂತರವಾಗಿ ಹಂಚುತ್ತಿದ್ದನು. ಬ್ರಿಟಿಷರು ಆದರಿಸುತ್ತಿದ್ದ ನ್ಯಾಯ ಸ್ವಾತಂತ್ರ್ಯ ತತ್ತ್ವಗಳನ್ನೇ ಎತ್ತಿಮಾತಾಡಿ, ಅವರ ಮೇಲೆ ಪ್ರಭಾವ ಬೀರಿ, ರಾಷ್ಟ್ರೀಯ ಚಳವಳಿಯ ಪರವಾಗಿ ಅವರ ಸಹಾನುಭೂತಿಯನ್ನು ಗಳಿಸುತ್ತಿದ್ದನು. ಚಳವಳಿಯ ಈ ಮಜಲು ಬಹು ಘಾತಕವಾದದ್ದೆಂದು ಆಂಗ್ಲೊ ಇಂಡಿಯನರು ಭಯಪಟ್ಟರು. ಯಾಕೆಂದರೆ ಈಗಾಗಲೆ ಗ್ಲಾಡ್‌ಸ್ಟನ್‌ನಂಥ ಮಹಾವ್ಯಕ್ತಿ "ಈ ಮಹಾಜನರ ಉದಯೋನ್ಮುಖವಾದ ಆಶಯಗಳನ್ನು ತಿರಸ್ಕಾರದಿಂದ ಸಹ ನೋಡುವುದು ನಮಗೆ ತಕ್ಕದ್ದಲ್ಲ" ಎಂದು ತನ್ನ ದೇಶಬಾಂಧವರನ್ನು ಎಚ್ಚರಿಸಿದ್ದನು.

ಸುಧಾರಣೆಗಳನ್ನು ಆಚರಣೆಗೆ ತರುವ ಅಧಿಕಾರ ಸಂಪೂರ್ಣವಾಗಿ ಬ್ರಿಟಿಷ್ ಜನರ ಮತ್ತು ಸರಕಾರದ ಕೈಯಲ್ಲಿದೆ ಎಂಬ ಅಂಶವನ್ನು ದಾದಾಭಾಯಿ ತನ್ನ ದೇಶಬಾಂಧವರಿಗೆ ಪದೇ ಪದೇ ನೆನಪುಕೊಡುತ್ತಿದ್ದನು; ಕಾಂಗ್ರೆಸಿನ ಕೇಳಿಕೆಗಳು ನ್ಯಾಯ ಸಮ್ಮತವಾದುವೆಂದು ಬ್ರಿಟಿಷ್ ಜನರಿಗೆ ಮನವರಿಕೆ ಮಾಡಿಕೊಡಲು ಇಂಗ್ಲೆಂಡಿಗೆ ಆಗಾಗ್ಗೆ ಪ್ರತಿನಿಧಿ ನಿಯೋಗಗಳನ್ನು ಕಳಿಸಬೇಕೆಂದು ಸ್ವದೇಶೀಯರನ್ನು ಒತ್ತಾಯಪಡಿಸುತ್ತಿದ್ದನು. ಹಾಗೆಯೇ, ಅಧಿಕ ಸಂಖ್ಯೆಯಲ್ಲಿ ಇಂಡಿಯಾಕ್ಕೆ ಹೋಗುವಂತೆಯೂ, ಭಾರತೀಯರ ಶೀಲಸ್ವಭಾವಗಳನ್ನು ಪರಿಶೀಲಿಸಬೇಕೆಂದೂ, ಅವರ ನ್ಯಾಯಸಮ್ಮತವಾದ ಕೇಳಿಕೆಗಳ ವಿಷಯದಲ್ಲಿ ಸಹಾನುಭೂತಿಯುತರಾಗಿರಬೇಕೆಂದೂ ಮತ್ತು ತಮ್ಮ ವರ್ತನೆಯಿಂದ ಬ್ರಿಟಿಷ್ ನ್ಯಾಯ ಬುದ್ಧಿ ಎಂದಿನಂತೆಯೆ ಸುಸ್ಪಷ್ಟವಾಗಿದೆಯೆಂದು ತೋರಿಸಬೇಕಾಗಿಯೂ ಬ್ರಿಟಿಷ್ ಸ್ನೇಹಿತರಿಗೆ ಹೇಳುತ್ತಿದ್ದನು.

ಅವನ ಸಲಹೆಯನ್ನು ಅನುಸರಿಸಿ, ಕಾಂಗ್ರೆಸ್ ಕಾರ್ಯಕಾರೀಸಮಿತಿಯು

೧೮೯೦ ರ ಬೇಸಗೆಯಲ್ಲಿ ಪ್ರತಿನಿಧಿ ಮಂಡಲವನ್ನು ಕಳಿಸಿತು. ನಿಯೋಗದಲ್ಲಿ ಸುರೇಂದ್ರನಾಥ ಬ್ಯಾನರ್ಜಿ, ಆರ್. ಎನ್. ಮುಧೋಳ್ಕರ್, ಅಲನ್ ಹ್ಯೂಮ್ ಮತ್ತು ಅರ್ಡ್ಲಿ ನಾರ್ಟನ್ ಇದ್ದರು. ದೇಶದಲ್ಲೆಲ್ಲ ಸಂಚರಿಸಿ, ಬ್ರಿಟಿಷ್ ಜನರನ್ನು ಉದ್ದೇಶಿಸಿ ಮಾತಾಡಿ, ಇಂಡಿಯಾದ ಆಡಳಿತ ಪದ್ಧತಿಯಲ್ಲಿ ಸುಧಾರಣೆಗಳಾಗಬೇಕೆಂಬ ಕಾಂಗ್ರೆಸ್ ಕೋರಿಕೆಗೆ ಅವರ ಬೆಂಬಲ ಪಡೆಯುವುದು ನಿಯೋಗದ ಕರ್ತವ್ಯವಾಗಿತ್ತು. ಸದಸ್ಯರು ಮಾತಾಡಿದ ಸಭೆಗಳಿಗೆ ಜನ ತಕ್ಕ ಪ್ರಮಾಣದಲ್ಲಿ ಬಂದು, ಸುಧಾರಣೆಯ ಸಲಹೆಗಳ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ತೋರ್ಪಡಿಸಿದರು. ಅನೇಕ ಸಭೆಗಳಲ್ಲಿ ಸುಧಾರಣೆಗಳ ಪರವಾಗಿ ನಿರ್ಣಯಗಳಾದವು; ಕಾಂಗ್ರೆಸ್ ಸಲಹೆಗಳನ್ನು ಅಂಗೀಕರಿಸುವಂತೆ ಕಾಮನ್ಸ್ ಸಭೆಗೆ ಅರ್ಜಿಗಳನ್ನೂ ಕಳಿಸಲಾಯಿತು. ಈ ಚಳವಳಿಯ ಒಂದು ವಿಶೇಷ ಸ್ವಾರಸ್ಯವೆಂದರೆ, ಇಂಗ್ಲೆಂಡಿನ ನಾನಾ ಸ್ಥಳಗಳಲ್ಲಿ. ಇಂಡಿಯಾ ಪ್ರಶ್ನೆಯನ್ನು ಕುರಿತು ಬ್ರಾಡ್‌ಲಾಫ್ ಮಾತಾಡಿದನು.

## ೨೨. ವ್ಯಥೆ ಮತ್ತು ಕೀರ್ತಿ

ಪಾರ್ಲಿಮೆಂಟ್ ಸದಸ್ಯನ ಕೆಲಸ ಯಾವಾಗಲೂ ಶ್ರಮಸಾಧ್ಯವಾದದ್ದು. ದಾದಾಭಾಯಿಯ ಜವಾಬ್ದಾರಿಗಳಾದರೆ ಗುರುತರವಾಗಿದ್ದವು. ಅವನು ಬ್ರಿಟಿಷ್ ಕ್ಷೇತ್ರಕ್ಕೆ ಸಂಬಂಧಪಟ್ಟ ಕರ್ತವ್ಯಗಳನ್ನೂ ಇಂಡಿಯಾಕ್ಕೆ ಸಂಬಂಧಪಟ್ಟವುಗಳನ್ನೂ ನಿರ್ವಹಿಸಬೇಕಾಗಿತ್ತು. ಕಾಮನ್ಸ್ ಸಭೆಯನ್ನು ಅವನು ಬೆರಗುಗೊಳಿಸುತ್ತಾನೆಂದು ಯಾರೂ ನಿರೀಕ್ಷಿಸಿರಲಿಲ್ಲ. ಆದರೆ ಸಭೆಗೆ ಕಾಲಕ್ರಮದಲ್ಲಿ ಇಂಡಿಯಾ ಪ್ರಶ್ನೆಯನ್ನು ಬಳಕೆ ಮಾಡಿಕೊಟ್ಟು, ಸುಧಾರಣೆಯ ಕೆಲವಂಶಗಳನ್ನಾದರೂ ಸಭೆ ಅಂಗೀಕರಿಸುವಂತೆ ಮಾಡಬಹುದೆಂಬ ನಂಬಿಕೆ ಅವನಿಗೆ ಇತ್ತು. ಈ ಕೆಲಸಕ್ಕೆ ಸಾಧನವಾಗಿ ಅವನಲ್ಲಿ ತನ್ನ ಅಭಿಪ್ರಾಯದಂತೆ ನಡೆಯುವ ಧೈರ್ಯವೂ, ಧ್ಯೇಯದಲ್ಲಿ ಶ್ರದ್ಧೆಯೂ, ವಾದಾಂಶದ ಮೇಲೆ ಪ್ರಭುತ್ವವೂ ಇದ್ದವು.

ಆ ಮಹಾ ಸಭೆಯಲ್ಲಿ ಹೆಸರು ಪಡೆಯುವುದು ನುರಿತ ಬ್ರಿಟಿಷ್ ರಾಜ

ನೀತಿಜ್ಞರಿಗೂ ಸಹ ಸುಲಭವಾದುದಾಗಿರಲಿಲ್ಲ. ಹಾಗಿರುವಲ್ಲಿ ದಾದಾಭಾಯಿ ಯಾವ ಆಸೆಯನ್ನು ಇಟ್ಟುಕೊಳ್ಳಬಹುದಾಗಿತ್ತು? ಅವನಿಗೆ ಸಹಾಯಕವಾಗಿ ಒಂದು ವಿಶೇಷ ಸಂದರ್ಭ ಒದಗಿತ್ತು. ಐರಿಷ್ ನ್ಯಾಷನಲಿಸ್ಟರ ಬೆಂಬಲವೂ ಸೇರಿ ಗ್ಲಾಡ್‌ಸ್ಟನ್ನನ ಸರಕಾರ ನಲವತ್ತು ಮಂದಿಯ ಬಹುಮತವನ್ನು ಮಾತ್ರ ಪಡೆದಿತ್ತು. ಆದ್ದರಿಂದ ಆ ಪಕ್ಷದಲ್ಲಿನ ಒಂದೊಂದು ಸಣ್ಣ ಪಂಗಡವೂ, ಭಾಗವೂ, ಸರಕಾರಕ್ಕೆ ಬಹು ಬೆಲೆಯುಳ್ಳದ್ದಾಗಿತ್ತು. ಅಧಿಕ ಬಹುಮತವಿರುವ ಪಕ್ಷದಲ್ಲಿ ದಾದಾಭಾಯಿ ಇದ್ದಿದ್ದರೆ ಸಭೆಯ ಗಮನವನ್ನು ಸೆಳೆಯಲು ಹೆಚ್ಚು ಅವಕಾಶ ಇರುತ್ತಿರಲಿಲ್ಲ. ಅಲ್ಲದೆ ಎಲ್ಲ ಪಕ್ಷಗಳ ಸದಸ್ಯರೂ ಅವನಲ್ಲಿ ಸೌಜನ್ಯದಿಂದ ನಡೆಯುತ್ತಿದ್ದರು; ಮುಖ್ಯ ಮಂತ್ರಿ ಅವನಿಗೆ ಪ್ರೋತ್ಸಾಹ ನೀಡುತ್ತಿದ್ದನು; ವೆಡ್ಡರ್‌ಬರ್ನ್, ಕೆಯ್ನ್ ಮೊದಲಾದ ಹಳೆಯ ಸ್ನೇಹಿತರು ಅವನ ವಿಷಯದಲ್ಲಿ ಆಸಕ್ತಿವಹಿಸುತ್ತಿದ್ದರು. ಇಂಡಿಯದ ಸ್ಟೇಟ್ ಸೆಕ್ರೆಟರಿ ಲಾರ್ಡ್ ಕಿಂಬರ್ಲಿ ಅವನಲ್ಲಿ ವಿಶ್ವಾಸವಾಗಿದ್ದನು. ಈ ಎಲ್ಲ ಕಾರಣಗಳಿಂದ ದಾದಾಭಾಯಿ ಬಹುಕಾಲದಿಂದ ಸಭೆಯ ವಿಧಿವಿಧಾನಗಳ ಪರಿಚಯ ಇದ್ದವನಂತೆ ಸಭೆಯಲ್ಲಿ ಬಳಕೆಯಿಂದ ಓಡಾಡುತ್ತಿದ್ದನು.

ದಾದಾಭಾಯಿ ತನ್ನ ಮೊದಲನೆಯ ಭಾಷಣದಲ್ಲಿ ತನ್ನನ್ನು ಸಭೆಯ ಸದಸ್ಯನನ್ನಾಗಿ ಚುನಾಯಿಸಿದ್ದಕ್ಕಾಗಿ ತನ್ನ ದೇಶಬಾಂಧವರ ಸಂತೋಷವನ್ನು ವ್ಯಕ್ತಪಡಿಸಿ, ಇಂಡಿಯಾಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ತಕ್ಕ ರೀತಿಯಲ್ಲಿ ಪರಿಶೀಲಿಸಬೇಕೆಂದು ಅವರ ಪರವಾಗಿ ಕೇಳಿಕೊಂಡನು. ಎಲ್ಲಿಯ ವರೆಗೆ ಬ್ರಿಟನ್ನಿನ ನ್ಯಾಯಬುದ್ಧಿಯಲ್ಲೂ ಘನತೆಯಲ್ಲೂ ಇಂಡಿಯಾಕ್ಕೆ ನಂಬಿಕೆ ಇರುವುದೋ ಅಲ್ಲಿಯವರೆಗೆ ಇಂಡಿಯಾ ಸಾಮ್ರಾಜ್ಯ ನಡೆದು ಬರುತ್ತದೆಯೆಂದು ನುಡಿದನು.

ಭಾಷಣವನ್ನನುಸರಿಸಿ ಅನೇಕ ತೊಡಕಿನ ಪ್ರಶ್ನೆಗಳನ್ನು ಕೇಳುತ್ತಿದ್ದನು, ಧೈರ್ಯವಾಗಿ ವಾದಗಳನ್ನು ಮುಂದಿಡುತ್ತಿದ್ದನು. ಇಂಡಿಯಾ ದೇಶದ ವ್ಯವಸಾಯದ ಉತ್ಪನ್ನಕ್ಕೆ ಮತ್ತು ಇತರ ವಿಷಯಗಳಿಗೆ ಸಂಬಂಧಪಟ್ಟಂತ ವಿವರವಾದ ಸಮಾಚಾರಗಳನ್ನು ಅಪೇಕ್ಷಿಸುತ್ತಿದ್ದನು. ಅಂತು ಇಂಡಿಯಾದ ಸದಸ್ಯನ ಸೂಚನೆಗಳ ತಿಳಿವಳಿಕೆಗಳು (notices of motions)

ಸಾಮಾನ್ಯವಾಗಿ ಸಭೆಯ ಆರ್ಡರ್ ಪುಸ್ತಕದಲ್ಲಿ ಒಂದು ಪುಟಕ್ಕೂ ಹೆಚ್ಚು ಸ್ಥಳವನ್ನು ಆಕ್ರಮಿಸುತ್ತಿದ್ದವು.

ಚಿನ್ನ ಬೆಳ್ಳಿಗಳ ಬೆಲೆಯಲ್ಲಿ ಅಂತರ ಹೆಚ್ಚಾಗುತ್ತಿದ್ದುದರಿಂದ ದ್ವಿಲೋಹ ವಾದಿಗಳು ಸುವರ್ಣನಾಣ್ಯ ಪದ್ಧತಿಯನ್ನು ಬಿಡಬೇಕಾಗಿಯೂ ಅಥವಾ ಅದರಲ್ಲಿ ಬದಲಾವಣೆಗಳನ್ನು ಮಾಡಬೇಕಾಗಿಯೂ ವಾದಿಸುತ್ತಿದ್ದರು. ರೂಪಾಯಿನ ಬೆಲೆಯಲ್ಲಿ ಇಳಿತಾಯವಾದದ್ದರಿಂದ ಇಂಡಿಯಾಕ್ಕೆ ನಷ್ಟವಾಗಿತ್ತು. ಸವರ್ನ ರೂಪಾಯಿಗಳ ಬೆಲೆಯ ಪ್ರಮಾಣವನ್ನು ಕೃತಕ ರೀತಿಯಲ್ಲಿ ಗೊತ್ತುಮಾಡುವುದರಿಂದ ಇಂಡಿಯಾಕ್ಕೆ ನಷ್ಟ ಹೆಚ್ಚುವ ಸಂಭವವಿತ್ತು.

೧೮೮೬ ರಿಂದಲೂ ದಾದಾಭಾಯಿ ಈ ಸಮಸ್ಯೆಯನ್ನು ದಿ ಟೈಂಸ್ ಮತ್ತು ಇತರ ಪತ್ರಿಕೆಗಳಲ್ಲಿ ವಿಮರ್ಶಿಸುತ್ತಿದ್ದನು. "ಇಂಡಿಯಾದ ವಿನಿಮಯಪದ್ಧತಿ ಮತ್ತು ದ್ವಿಲೋಹವಾದ" ಎಂಬ ಹೆಸರಿನ ಲೇಖನವನ್ನು ಪ್ರಕಟಿಸಿದ್ದನು. ೧೮೮೬ರ ಡಿಸೆಂಬರ್ ೨೩ ರಲ್ಲಿ ಟೈಂಸ್ ಪತ್ರಿಕೆಗೆ ಬರೆದ ಕಾಗದದಲ್ಲಿ ದ್ವಿಲೋಹವಾದವನ್ನು ಖಂಡಿಸಿದ್ದನು.

ರೂಪಾಯಿಯ ಬೆಲೆಯ ಇಳಿತಾಯದ ಪರಿಣಾಮವಾಗಿ ಇಂಡಿಯಾ ಸರಕಾರದ ಸಿವಿಲ್ ಮತ್ತು ಮಿಲಿಟರಿ ಅಧಿಕಾರಿಗಳ ಸಂಬಳಗಳಲ್ಲಿ ಖೋತಾ ಆಗಿತ್ತು. ಅವರಿಗೆ ತಕ್ಕ ಪರಿಹಾರವನ್ನು ಕೊಡದಿದ್ದರಿಂದ ಆಗುವ ದುಷ್ಪರಿಣಾಮಗಳನ್ನು ಸರ್ ಸೀಮೌರ್ ಕಿಂಗ್ ಕಾಮನ್ಸ್ ಸಭೆಯಲ್ಲಿ ವಿವರಿಸಿ ಆ ಪ್ರಶ್ನೆಯನ್ನು ವಿಚಾರಿಸಲು ಸೆಲೆಕ್ಟ್ ಕಮಿಟಿಯನ್ನು ನೇಮಿಸಬೇಕಾಗಿ ಸೂಚನೆಯನ್ನು ತಂದನು. ಆ ಸಂದರ್ಭದಲ್ಲಿ, ಪರಿಹಾರಕೊಡುವುದರ ಪರವಾಗಿ ವೈಸರಾಯ್ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದಾಗಿ ತಿಳಿಸಿದನು. ದಾದಾಭಾಯಿ ಸಿಟ್ಟಿದು, "ಈ ವಿಷಯದಲ್ಲಿ ಇನ್ನೊಂದು ದೃಷ್ಟಿಯಿದೆ ಎಂಬುದು ವೈಸರಾಯ್‌ಗೆ ತಿಳಿಯಲಿಲ್ಲವೆ? ನಾಣ್ಯವಿನಿಮಯದ ಬೆಲೆಯ ಇಳಿತಾಯದಿಂದ ಇಂಡಿಯಾದ ಜನರ ಪರಿಸ್ಥಿತಿಯೇನು ? ಯಾರ ಜೋಳಿಗೆಯಿಂದ ಅಧಿಕಾರಿಗಳಿಗೆ ಪರಿಹಾರಕೊಡಬೇಕೆಂದಿರುವರೋ ಅವರ ವಿಷಯವಾಗಿ ಸಹಾನುಭೂತಿಯ ಒಂದು ಮಾತೂ ಹೊರಟಿಲ್ಲವಲ್ಲ" ಎಂದು ನುಡಿದನು.

ಆಮೇಲೆ ಭಾರತದ ಬಡತನದ ಸ್ಥಿತಿಯನ್ನು ವರ್ಣಿಸಿ, ದೇಶದಿಂದ ಐಶ್ವರ್ಯ ಹರಿದುಹೋಗುತ್ತಿರುವುದನ್ನು ವಿವರಿಸಿದನು. 'ಈ ಹಣ ಯಾವ ಮೂಲದಿಂದ ಬರುತ್ತದೆ ಎಂಬ ವಿಚಾರದಲ್ಲಿ ನಿಮಗೆ ಸ್ವಲ್ಪವಾದರೂ ನ್ಯಾಯ ಕರುಣೆಗಳು ಇರಬೇಕು.' 'ವೈಸ್‌ರಾಯ್ ಮೊದಲೆ ನಿರ್ಧರಿಸಿರುವಾಗ ಕಮಿಟಿಯನ್ನು ನೇಮಕ ಮಾಡುವುದರಿಂದ ಏನು ಪ್ರಯೋಜನ?.... ಈ ಬಡಜನರ ಮೇಲೆ ಹೆಚ್ಚಿನ ತೆರಿಗೆಯ ಹೊರೆಯನ್ನು ಹಾಕಬೇಡಿ ಎಂದು ಹೇಳಿದನು.'

ಇಂಗ್ಲೆಂಡಿನಲ್ಲಿರುವ ಎಲ್ಲ ಭಾರತೀಯರ ಸಭೆಯೊಂದು ಜೂನ್ ೨ರಲ್ಲಿ ಲಂಡನ್ನಿನಲ್ಲಿ ಸೇರಿ ಈ ರೀತಿಯ ನಿರ್ಣಯವನ್ನು ಮಾಡಿತು :

ವಾಸ್ತವವಾಗಿ ಸುಮಾರು ೧೧ ಪೆನ್ನಿ ಚಿನ್ನದ ಬೆಲೆಯಿರುವ ರೂಪಾಯಿಯನ್ನು ಅವಾಸ್ತವವಾಗಿ ೧೬ ಪೆನ್ನಿ ಚಿನ್ನದ ಬೆಲೆಯ ರೂಪಾಯಿಗೆ ಏರಿಸುವುದು ಇಂಡಿಯಾದ ತೆರಿಗೆದಾರರಿಂದ ಶೇಕಡ ೪೫ರಷ್ಟು ಹೆಚ್ಚಾದ ತೆರಿಗೆಯನ್ನು ಕ್ರೂರವಾಗಿ ವಸೂಲು ಮಾಡಿದಂತೆ; ಅದೇ ಸಮಯದಲ್ಲಿ, ಇಂಡಿಯಾದಲ್ಲಿ, ಸರಕಾರ ಅದೇ ಪ್ರಮಾಣದಲ್ಲಿ, ಅಧಿಕಾರಿಗಳ ಸಂಬಳಗಳನ್ನೂ ಇತರ ವೆಚ್ಚಗಳನ್ನೂ ಹೆಚ್ಚಿಸುವುದೂ, ಸುವರ್ಣನಾಣ್ಯ ಪದ್ಧತಿಯನ್ನು ಆಚರಣೆಗೆ ತರುವುದೂ ಆ ಬದಲಾವಣೆಯ ಏರಿಕೆಗೆ ತಕ್ಕ ಪ್ರಮಾಣದಲ್ಲಿ ತೆರಿಗೆದಾರರ ಅನ್ಯಾಯವಾದ ಹೊರೆಗಳನ್ನು ಇನ್ನು ಹೆಚ್ಚು ಮಾಡುತ್ತದೆ; ಇಂಡಿಯದ ಕ್ರೂರವಾದ ಕೇಡುಕುಗಳಾದ ಬಡತನ, ಕ್ಷಾಮ, ಪ್ಲೇಗು, ಅವಾಸ್ತವ ನಾಣ್ಯ ಪದ್ಧತಿ ಮುಂತಾದವುಗಳ ನಿಜವಾದ ಕಾರಣ ಲಾರ್ಡ್ ಸ್ಯಾಲಿಸ್‌ಬರಿ ಹೇಳುವಂತೆ ಇಂಡಿಯಾದ 'ಸುಲಿಗೆ' ಯಾಗಿದೆ.

ಕಳೆದ ೪೦ ವರ್ಷಗಳಲ್ಲಿ ರಾಜನೀತಿಯ ಮತ್ತು ಸಾರ್ವಜನಿಕ ಹಣಕಾಸಿನ ತತ್ತ್ವಗಳು ಬಹು ಬದಲಾವಣೆಗಳನ್ನು ಹೊಂದಿವೆ. ಆದರೆ ದಾದಾಭಾಯಿ ಒತ್ತಿ ಹೇಳಿದ ಮುಖ್ಯ ತತ್ತ್ವಗಳೂ ಅಭಿಪ್ರಾಯಗಳೂ ಈವೊತ್ತಿಗೂ ಸರಿಯೆನಿಸಿವೆ. ಆದರೆ ಸುವರ್ಣ ವಿನಿಮಯ ಪ್ರಮಾಣದಿಂದ ಇಂಡಿಯಾಕ್ಕೆ ಅನುಕೂಲವಾಯಿತೆಂಬುದು ಈಗ ವ್ಯಕ್ತವಾಗಿದೆ. ಆದರಿಂದ ಸುವರ್ಣ ಪ್ರಮಾಣವುಳ್ಳ ಪ್ರಗತಿಪರವಾದ ದೇಶಗಳೊಡನೆ ಇಂಡಿಯಾದ ಸಂಬಂಧ ಏರ್ಪಟ್ಟಿತು, ಇತರ ದೇಶಗಳು ತಿರಸ್ಕರಿಸಿದ ಬೆಳ್ಳಿ ಇಲ್ಲಿಗೆ ಹರಿದು ಬರುವುದು ನಿಂತಿತು. ಆದರೆ ದಾದಾಭಾಯಿಯ ಕಾಲದಲ್ಲಿ ಇದನ್ನೆಲ್ಲ ಮುಂದಾಗಿಯೇ ನಿರೀಕ್ಷಿಸಲು ಸಾಧ್ಯವಾಗುತ್ತಿರಲಿಲ್ಲ.

ಇಂಡಿಯದ ಸಿವಿಲ್ ಸರ್ವಿಸುಗಳಿಗೆ ಅಧಿಕಾರಿಗಳನ್ನು ನೇಮಕ ಮಾಡುವುದಕ್ಕಾಗಿ ನಡಸುವ ಮೊದಲ ಪರೀಕ್ಷೆಗಳನ್ನು ಇಂಗ್ಲೆಂಡ್ ಇಂಡಿಯಾಗಳಲ್ಲಿ ಏಕಕಾಲದಲ್ಲಿ ನಡೆಸಬೇಕೆಂಬ ಮಸೂದೆಯನ್ನು ಕಾಮನ್ಸ್ ಸಭೆಯ ಮುಂದೆ ತಂದನು. ಅದು ಜಯಪ್ರದವಾಗುವ ಸಂಭವವೇ ಇರಲಿಲ್ಲವಾದ್ದರಿಂದ ಅದೇ ವಿಷಯವಾಗಿ ಮಸೂದೆಯೊಡನೆಯೇ ನಿರ್ಣಯವೊಂದನ್ನು ತರುವಂತೆ ವ್ಯವಸ್ಥೆ ಮಾಡಿದನು. ನಿರ್ಣಯವನ್ನು ತಂದವನು ಹರ್ಬರ್ಟ್ ಪಾಲ್. ಸಂಬಂಧಪಟ್ಟ ಸದಸ್ಯರನ್ನೆಲ್ಲ ದಾದಾಭಾಯಿ ಮೊದಲೇ ಹೋಗಿ ನೋಡಿ ತಮ್ಮ ಕೇಳಿಕೆ ನ್ಯಾಯಸಮ್ಮತವಾದದ್ದೆಂಬುವನ್ನು ಅವರಿಗೆಲ್ಲ ವಿವರಿಸಿದ್ದನು. ಬ್ಯಾಲಟ್ ಅನುಕೂಲವಾಗಿ ಬಂದದ್ದರಿಂದ ಆ ವಿಷಯವನ್ನು ಕುರಿತು ಚರ್ಚೆಮಾಡುವುದಕ್ಕೂ ನಿರ್ಣಯವನ್ನು ಸೂಚಿಸುವುದಕ್ಕೂ ಹರ್ಬರ್ಟ್ ಪಾಲನಿಗೆ ಅವಕಾಶ (ಜೂನ್ ೨) ದೊರೆಯಿತು. ನಿರ್ಣಯವನ್ನು ದಾದಾಭಾಯಿ ಅನುಮೋದಿಸಿದನು, ವೆಡ್ಡರ್‌ಬರ್ನ್ ಸಮರ್ಥಿಸಿದನು. ದಾದಾಭಾಯಿ ಸಲಹೆಗೆ ಸಂಬಂಧಪಟ್ಟ ಎಲ್ಲ ಕಾರಣಗಳನ್ನೂ ಸಭೆಯ ಮುಂದಿಟ್ಟನು. ಆಗ ನಡೆದ ಚರ್ಚೆ ಸ್ಮರಣೀಯವಾಗಿತ್ತು. ಚರ್ಚೆಯನಂತರ ಸೂಚನೆಗೆ ಜಯ ದೊರೆಯಿತು. ಅದು ದಾದಾಭಾಯಿಗೆ ಬಹು ಅಭಿಮಾನದ ಸಂಗತಿಯಾಯಿತು. ತನ್ನ ಜೀವಮಾನವೆಲ್ಲ ಅದಕ್ಕಾಗಿ ಹೊಡೆದಾಡಿದ್ದನು. ಇಡೀ ಇಂಡಿಯಾದೇಶ ಅವನ ಸಂತೋಷದಲ್ಲಿ ಭಾಗಿಯಾಯಿತು. ನ್ಯಾಯಕ್ಕೆ ಕಡೆಗೂ ಜಯ ದೊರಕಿತ್ತು.

ನಿರ್ಣಯ ಪಾಸಾದರೂ ಕಾರ್ಯನಿರ್ವಾಹದ ಮಾತು ಬೇರೆ. ವೋಟು ಹೆಚ್ಚಿನ ಅಭಿಮತದಿಂದ ದೊರೆತದ್ದಲ್ಲ, ಅದು ಸರಕಾರವನ್ನು ಅಕಸ್ಮಾತ್ತಾಗಿ ಹಿಡಿದ ಸಂದರ್ಭದಿಂದ ಆದದ್ದು. ಆದ್ದರಿಂದ ನಿರ್ಣಯುವನ್ನು ಆಚರಣೆಗೆ ತರುವ ಸಂಭವ ತೋರಲಿಲ್ಲ. ಅಲ್ಲದೆ ಲಾರ್ಡ್ಸ್ ಸಭೆಯವರು ಅದಕ್ಕೆ ವಿರೋಧವಾಗಿದ್ದರು. ಈ ಪರಿಸ್ಥಿತಿಯನ್ನು ಪ್ರತಿಭಟಿಸಬೇಕೆಂದು ದಾದಾಭಾಯಿ ತನ್ನ ಸ್ನೇಹಿತರನ್ನೆಲ್ಲ ಒತ್ತಾಯಪಡಿಸಿದನು.

ಕಾಮನ್ಸ್ ಸಭೆಯ ನಿರ್ಣಯ ಇಂಡಿಯಾ ಸರಕಾರವನ್ನು ಬಂಧಿಸಲಾರದು. ಆದ್ದರಿಂದ ನಿರ್ಣಯವನ್ನು ಆಚರಣೆಗೆ ತರುವ ಬಿಡುವ ವಿಷಯದಲ್ಲಿ ಇಂಡಿಯಾ ಸರಕಾರಕ್ಕೆ ಸಲಹೆ ಕೊಡುವ ಅಧಿಕಾರ ಸ್ಟೇಟ್ ಸೆಕ್ರೆ

ಟರಿಯುದಾಗಿತ್ತು. ಸುಧಾರಣೆಗೆ ತಾನು ಸ್ವತಃ ವಿರೋಧವಾಗಿದ್ದರೂ ಅದನ್ನು ಅಡ್ಡಿ ತಾರದೆ, ನಿರ್ಣಯವನ್ನು ಇಂಡಿಯಾ ಸರಕಾರಕ್ಕೆ ಕಳಿಸಿ ಕೊಟ್ಟಿರುವುದಾಗಿ ಸ್ಟೇಟ್ ಸೆಕ್ರೆಟರಿ ಲಾರ್ಡ್ ಕಿಂಬರ್ಲಿ ದಾದಾಭಾಯಿಗೆ ಪತ್ರ ಮುಖೇನ ತಿಳಿಸಿದನು. ಆದರಿಂದ, ಬಲವಾದ ಚಳವಳಿ ಹೂಡಿದರೆ ನಿರ್ಣಯಕ್ಕೆ ವಿರೋಧವಾಗಿದ್ದ ಅಧಿಕಾರಗಳ ಮನಸ್ಸನ್ನು ತಿರುಗಿಸ ಬಹುದೆಂಬ ಆಶಾಕಿರಣವೊಂದು ದಾದಾಭಾಯಲ್ಲಿ ಮೂಡಿತು.

ದಾದಾಭಾಯನ್ನು ಸ್ವದೇಶಕ್ಕೆ ಆಹ್ವಾನಿಸಿ ದೊಡ್ಡ ರೀತಿಯಲ್ಲಿ ಸ್ವಾಗತಿಸಬೇಕೆಂಬ ಅಪೇಕ್ಷೆ ಇಂಡಿಯಾದಲ್ಲಿ ಉಂಟಾಗಿತ್ತು. ಆದ್ದರಿಂದ ಕಾಂಗ್ರೆಸಿನ ಲಾಹೋರ್ ಸಮಿತಿಯು ಮುಂದಿನ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆಯನ್ನು ವಹಿಸುವಂತೆ ಅವನನ್ನು ಆಹ್ವಾನಿಸಿತು. ಕೆಲಸ ಕಾರ್ಯಗಳನ್ನು ನೋಡಿ ಕೊಳ್ಳಲು ತಕ್ಕ ವ್ಯಸನ್ಥೆ ಮಾಡಿ ಇಂಡಿಯಾಕ್ಕೆ ಹೊರಟನು.

ಅಕ್ಟೋಬರ್ ೭ರ ಬೆಳಗ್ಗೆ, ದಾದಾಭಾಯಿಯ ಮಗ ಅದಿ, ಆಸ್ಪತ್ರೆಯ ಕೆಲಸವನ್ನು ಮುಗಿಸಿಕೊಂಡು ಕಚ್ ಮಾಂಡ್ವಿಯಿಂದ ಬರುತ್ತಿರುವಾಗ, ತರುಣ ವಯಸ್ಸಿನಲ್ಲಿಯೆ, ಹೃದಯ ಸ್ತಂಭನದಿಂದ ಕಾಲವಾದನು. ಪ್ರಸಂಚದ ನಾನಾ ಕಡೆಗಳಿಂದ ದಾದಾಭಾಯಿಗೆ ಸಹಾನುಭೂತಿಯ ಪತ್ರಗಳು ಬಂದವು. ಹೃದಯಸ್ಪರ್ಶಿಯಾದ ಒಂದು ಪತ್ರವನ್ನು ಇಲ್ಲಿ ನೆನೆಯಬಹುದು, "ಈ ಕ್ರೂರವಾದ ನಷ್ಟವನ್ನು ಸಹಿಸುವಷ್ಟು ಸ್ಥೈರ್ಯವೂ ನಂಬಿಕೆಯೂ ನಿನ್ನಲ್ಲಿವೆಯೆಂಬುದು ನನಗೆ ತಿಳಿದಿದೆ. ಅಖಂಡ ಇಂಡಿಯಾ ನಿನ್ನ ಮಗನೆಂಬುದನ್ನು ನೆನಸಿಕೊ"—ಎಂದು ಮಲಬಾರಿ ಬರೆದನು.

ದಾದಾಭಾಯಿ ದುಃಖವನ್ನು ಅಸದೃಶವಾದ ಸ್ಥೈರ್ಯದಿಂದ ಸಹಿಸಿಕೊಂಡನು. ಸ್ವಂತ ದುಃಖದ ಪ್ರಸ್ತಾಪ ಸಾರ್ವಜನಿಕ ವಿಷಯಗಳ ಮಧ್ಯದಲ್ಲಾಗಲಿ, ಸ್ವಂತ ಪತ್ರವ್ಯವಹಾರದಲ್ಲಾಗಲಿ ಪ್ರವೇಶಿಸಲಿಲ್ಲ. ಆ ವರ್ಷ ಅವನು ಸಲ್ಲಿಸಿದ ಸೇವೆ ಗಮನಾರ್ಹವಾಗಿತ್ತು. ಕಾಮನ್ಸ್ ಸಭೆಯ ಸದಸ್ಯಾನಾದವನು ಸಭೆಯಲ್ಲಿ ತನ್ನ ಕ್ಷೇತ್ರದ ಹಿತಾಸಕ್ತಿಗಳನ್ನು ನೋಡಿಕೊಳ್ಳುವುದಲ್ಲದೆ ಇತರ ಅನೇಕಕಾರ್ಯಗಳನ್ನೂ ಎಸಗಬೇಕಾಗುತ್ತದೆ. ತನ್ನ ರಾಜಕೀಯ ಪಂಗಡದವರು ಏರ್ಪಡಿಸಿದ ರಾಜಕೀಯ ಸಭೆಗಳಲ್ಲಿ ಹಾಜರಿರಬೇಕು. ಅಲ್ಲದೆ, ಯಾವಪಕ್ಷಕ್ಕೂ ಸಂಬಂಧವಿರದ ನಾನಾ ಸಾಮಾಜಿಕ ಧಾರ್ಮಿಕ

ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕು. ದಾದಾಭಾಯಿ ಈ ಕಾರ್ಯಗಳನ್ನೆಲ್ಲ ನಿರ್ವಹಿಸುತ್ತಿದ್ದುದಲ್ಲದೆ, ಫಿನ್ಸ್‌ಬರಿಯ ಅನೇಕ ಸಂಘಗಳಲ್ಲೂ ಮದ್ಯ ನಿರೋಧ ಸಂಸ್ಥೆಗಳಲ್ಲೂ ಭಾಗವಹಿಸುತ್ತಿದ್ದನು.

ನಾನಾ ಸಂಘ ಸಂಸ್ಥೆಗಳವರು-ರಾಜಕೀಯ ಮತ್ತು ಇತರ–ಅವನನ್ನು ಆಗಾಗ್ಗೆ ಭಾಷಣಗಳಿಗಾಗಿ ಆಹ್ವಾನಿಸುತ್ತಿದ್ದರು. ದಾದಾಭಾಯಿ ಸಂತೋಷ ದಿಂದ ಆಹ್ವಾನಗಳನ್ನು ಅಂಗೀಕರಿಸುತ್ತಿದ್ದನು. ಲಂಡನ್ ವಾಣಿಜ್ಯ ಸಂಸ್ಥೆ, ಬ್ಯಾಂಕರುಗಳ ಸಂಸ್ಥೆ ಮತ್ತು ಇತರ ವಾಣಿಜ್ಯ ಮಂಡಲಿಗಳು ಆರ್ಥಿಕ, ಮತ್ತು ಹಣಕಾಸಿನ ಸಮಸ್ಯೆಗಳನ್ನು ಕುರಿತು ಮಾತನಾಡಲು ಆಹ್ವಾನಿಸುತ್ತಿದ್ದರು. ಕಾಮನ್ಸ್ ಸಭೆಯಲ್ಲೂ ಹೊರಗೂ ಇಂಡಿಯಾ ವಿಚಾರ ಪ್ರಚಾರವಾಗಲೆಂಬ ಉದ್ದೇಶದಿಂದಲೂ, ತನ್ನ ನಡವಳಿಕೆಯಿಂದ ಹೆಚ್ಚು ಜನ ಭಾರತೀಯರು ಕಾಮನ್ಸ್ ಸಭೆಯನ್ನು ಪ್ರವೇಶಿಸುವಂತಾಗ ಲೆಂಬ ಉದ್ದೇಶದಿಂದಲೂ ಆಹ್ವಾನಗಳನ್ನು ಸೇವಾ ಮನೋಭಾವದಿಂದ ಅಂಗೀಕರಿಸುತ್ತಿದ್ದನು.

## ೨೩. ನಾಯಕನ ಸ್ವದೇಶಾಗಮನ

ದಾದಾಭಾಯಿಯ ಸ್ವದೇಶಾಗಮನದ ವಿಷಯದಲ್ಲಿ ಇಂಡಿಯದಲ್ಲಿ ಎಲ್ಲೆಲ್ಲೂ ಉತ್ಸಾಹ ತೋರಿಬರುತ್ತಿತ್ತು. ಅವನನ್ನು ಕರೆದುತರುತ್ತಿದ್ದ ದೋಣಿ ಬೊಂಬಾಯಿ ರೇವನ್ನು ಡಿಸೆಂಬರ್ ೨ ರ ಮಧ್ಯರಾತ್ರಿಯಲ್ಲಿ ಸೇರು ವುದಾಗಿ ಗೊತ್ತಾಗಿತ್ತು. ಬೆಳಗಾಗುವುದಕ್ಕೆ ಬಹು ಮುಂಚೆಯೇ ಬೊಂಬಾಯಿ ನಗರವೆಲ್ಲ ಎಚ್ಚರಗೊಂಡಿತ್ತು. ಏಳು ಗಂಟೆಯ ವೇಳೆಗೇ ಅಪ್ಪೊಲೊ ಬಂದರು ಜನಸಂದಣಿಯಿಂದ ನಿಬಿಡವಾಗಿತ್ತು. ಹಡಗುಕಟ್ಟೆಯನ್ನು ಧ್ವಜಗಳಿಂದಲೂ ಹೂವುಗಳಿಂದಲೂ ವಿವಿಧವರ್ಣದ ತೋರಣ ಬಾವುಟ ಗಳಿಂದಲೂ ಸಿಂಗರಿಸಿದ್ದರು. ಬಂದರಿಗೆ ಒಯ್ಯುವ ರಸ್ತೆಗಳು ಬಾವುಟ ಗಳಿಂದಲೂ ತೋರಣಗಳಿಂದಲೂ ಅಲಂಕೃತವಾಗಿ ಗೆಲವಾಗಿದ್ದವು. ಅಲ್ಲಲ್ಲಿ ದಾದಾಭಾಯಿಯ ಭಾವಚಿತ್ರಗಳೂ ಬಣ್ಣದ ಬಟ್ಟೆಯ ಮೇಲೆ ಬರೆದ ಸೂಕ್ತಿ ಗಳೂ ಕಂಗೊಳಿಸುತ್ತಿದ್ದವು. ಫಿನ್ಸ್‌ಬರಿ ಮತದಾರರನ್ನು ವಂದಿಸುವ

ಪತ್ರಿಕೆಗಳನ್ನು ಅಲ್ಲಿ ನೋಡಬಹುದಾಗಿತ್ತು. 'ಧೀರನೂ ಉದಾರಿಯೂ ಆದ ಭಾರತದ ಪುತ್ರ ಶ್ರೇಷ್ಠ'ನಿಗೆ ಎಲ್ಲೆಲ್ಲೂ ಸ್ವಾಗತವಿತ್ತು. ಒಂದು ಧ್ವಜದ ಮೇಲೆ ಈ ಹಾರೈಕೆ ಲಿಖಿತವಾಗಿತ್ತು: "ಸ್ವಾರ್ಥತ್ಯಾಗಿಯೇ, ಅಕಳಂಕ ಸಭ್ಯ ಪುರುಷನೇ, ದೇವರು ನಿನ್ನನ್ನು ಹರಸಲಿ." ಇನ್ನೊಂದರ ಮೇಲೆ: "ನಿನ್ನಂಥ ನೂರುಜನ ಭಾರತದ ಬಿಡುಗಡೆಗೆ ಬೇಕಾಗಿದ್ದಾರೆ."

ಬಂದರಿಗೆ ಹೋಗುವ ಪ್ರತಿರಸ್ತೆಯೂ ಪುರಜನರಿಂದ ದಟ್ಟವಾಗಿತ್ತು; ದಾರಿಯುದ್ದಕ್ಕೂ ಹೆಂಸಗರು ಮಕ್ಕಳ ಗುಂಪು ಆ ಸರಳ ಸಾಹಸಿಯ ದರ್ಶನ ಪಡೆಯಲು ಕಾದು ನಿಂತಿತ್ತು. ಶಾಲೆಯ ಬಾಲಕ ಬಾಲಕಿಯರು ಭಾರತದ ಋಷಿಯೆಂದು ಹೆಸರಾದ ಪೂಜ್ಯನನ್ನು ಸ್ವಾಗತಿಸಲು ಕೈಯಲ್ಲಿ ಹಾರ ಹಿಡಿದು ಎಲ್ಲೆಲ್ಲೂ ನಿಂತಿದ್ದರು. ಆದರೆ ಜಹಜು ಬರುವುದು ತಡವಾಯಿತು. ಸ್ವಾಗತ ಸಮಿತಿಯವರು ಹಡಗಿನಿಂದ ಇಳಿಯುವ ಕಾಲವನ್ನು ಮಧ್ಯಾಹ್ನದ ಮೇಲೆ ೪ ಗಂಟೆಗೆ ಎಂದು ನಿರ್ಧರಿಸಿದರು.

ನಿರಾಶೆ ಹೊಂದಿದ ಜನ ಮನೆಗೆ ಹಿಂದಿರುಗಿ ಪುನಃ ಗೊತ್ತಾದ ವೇಳೆಗೆ ಬಹುಮುಂಚೆಯೇ ಬಂದು ನೇರಿದರು. ನಾಲ್ಕು ಗಂಟೆಗೆ ಸರಿಯಾಗಿ, ಉಗಿದೋಣಿ ದಾದಾಭಾಯಿಯನ್ನೂ ಪ್ರತಿನಿಧಿ ಮಂಡಲಿಯ ಸದಸ್ಯರನ್ನೂ ಹೊತ್ತುತಂದಿತು. ದಾದಾಭಾಯಿ ಕಪ್ಪುಕೋಟನ್ನೂ ರುಮಾಲನ್ನೂ ಕೆಂಪು ರೇಶಿಮೆಯ ಷರಾಯಿಯನ್ನೂ ಧರಿಸಿದ್ದನು. ಅವನನ್ನು ಕಂಡಕೂಡಲೆ ಜನ ಅವನ ಕಡೆಗೆ ಧಾವಿಸಿದರು. ಚಪ್ಪರದಲ್ಲಿ ತನಗಾಗಿ ಕಾಯುತ್ತಿದ್ದ ಇಬ್ಬರು ಹೆಣ್ಣು ಮಕ್ಕಳನ್ನೂ ಮೊಮ್ಮಕ್ಕಳನ್ನೂ ನೋಡುವುದು ಸಹ ಅವನಿಗೆ ಕಷ್ಟವಾಯಿತು. ಸ್ವಾಗತ ಸಮಿತಿಯ ಅಧ್ಯಕ್ಷನಾದ ಫಿರೋಜ್ ಷಾ ಮೆಹತಾ ಅವನನ್ನು ಗಾಡಿಗೆ ಎಳೆದು ತರಬೇಕಾಯಿತು.

ಕಿಟಕಿಗಳಲ್ಲೂ ಉಪ್ಪರಿಗೆಯ ಮೊಗಸಾಲೆಗಳಲ್ಲೂ ಮನೆಯ ಮೇಲು ಭಾಗಗಳಲ್ಲೂ ದಟ್ಟೈಯಿಸಿ ನಿಂತಿದ್ದ ಜನರು ಸಾಗುತ್ತಿದ್ದ ಮೆರವಣಿಗೆಯನ್ನು ನೋಡಿದರು. ನಾಯಕನು ಮನೆಯನ್ನು ಸೇರುವವರೆಗೂ ಆಗಸವು ಜಯಕಾರಗಳಿಂದ ಪ್ರತಿಧ್ವನಿತವಾಯಿತು. ಪ್ರತಿ ಕುಟುಂಬವೂ ಪ್ರತಿ ಸಂಸ್ಥೆಯೂ ಅವನೆಡೆಗೆ ಹೂವನ್ನು ಎರಚಿತು; ಗಾಡಿಯಲ್ಲಿ ಉದ್ದಕ್ಕೂ ವಂದಿಸುತ್ತ ನಿಂತಿದ್ದನು.

ಸಂಜೆ ಆರುಗಂಟೆಗೆ ಮೆರವಣಿಗೆ ದಾದಾಭಾಯಿಯ ಮನೆಯನ್ನು ಸೇರಿತು. ಅವನೊಡನೆ ಅವನ ಸ್ನೇಹಿತನೂ ಪಾರ್ಲಿಮೆಂಟ್ ಸದಸ್ಯನೂ ಆದ ಸೀಮೌರ್ ಕೀ ಇಂಗ್ಲೆಂಡಿನಿಂದ ಬಂದಿದ್ದನು.

ರಾಜರು ಅಸೂಯೆ ಪಡಬಹುದಾದಷ್ಟು ಸೊಗಸಾಗಿತ್ತು ಸ್ವಾಗತದ ಏರ್ಪಾಡು. ದಾದಾಭಾಯಿಯನ್ನು ಮೊದಲು ಅಭಿನಂದಿಸಿದವನು ಬೊಂಬಾಯಿಯ ಗವರ್ನರ್ ಲಾರ್ಡ್ ಹ್ಯಾರಿಸ್. ಸ್ವಲ್ಪ ಹೊತ್ತಿನ ಮೇಲೆ ಶಾಸನ ಸಭೆಯ ಇಬ್ಬರು ಸದಸ್ಯರೂ ಮತ್ತು ಮುಖ್ಯ ನ್ಯಾಯಾಧೀಶನೂ ಬಂದು ದಾದಾಭಾಯಿಯನ್ನು ಭೇಟಿಮಾಡಿದರು. ಬೊಂಬಾಯಿ ಪ್ರಾಂತದ ಪೂನಾ, ಸತಾರಾ, ಬೆಳಗಾಂ, ಷೋಲಾಪುರ, ಸೂರತ್, ಬ್ರೋಚ್, ನವಸಾರಿ—ಇವೇ ಮೊದಲಾದ ಸ್ಥಳಗಳಿಂದ ಬಂದಿದ್ದ ಪ್ರತಿನಿಧಿಗಳು ಬೊಂಬಾಯಿ ಪ್ರಾಂತದ ಅಸೋಸಿಯೇಷನ್ನಿನಲ್ಲಿ ದಾದಾಭಾಯಿಯನ್ನು ಭೇಟಿ ಮಾಡಿದರು. ಕಾಮನ್ಸ್ ಸಭೆಗೆ ಸದಸ್ಯನಾದ ಬಗೆಯನ್ನು ವಿವರಿಸಬೇಕೆಂದು ವಾಚಾ ಅವನನ್ನು ಪ್ರಾರ್ಥಿಸಿದನು. ದಾದಾಭಾಯಿ ಆ ಕಥೆಯನ್ನೆಲ್ಲ ವಿಸ್ತರಿಸಿದನು.

"ನೀನು ಸಭೆಯ ಸದಸ್ಯನಾದುದರಿಂದ ಹಿಂದಿನ ಮುಖ್ಯಮಂತ್ರಿಗೆ ಅಸಮಾಧಾನವಾಯಿತಲ್ಲವೆ?" ಎಂದು ದಿನ್‌ಷಾ ವಾಚಾ ಕೇಳಿದನು. ಉದಾತ್ತ ಚಿತ್ತನಾದ ನಮ್ಮ ನಾಯಕನು "ಇಲ್ಲ" ಎಂದಷ್ಟೆ ಹೇಳಿ ಸುಮ್ಮನಿದ್ದನು.

ಡಿಸೆಂಬರ್ ೧೯ ನೆಯ ತಾರೀಕಿನ ದಿನ ಬೊಂಬಾಯಿ ಪುರಭವನದಲ್ಲಿ ನಾನಾ ಸಂಸ್ಥೆಗಳೂ ಪ್ರತಿನಿಧಿ ಮಂಡಳಿಗಳೂ ಅವನಿಗೆ ಬಿನ್ನವತ್ತಳೆಗಳನ್ನು ಅರ್ಪಿಸಿದರು. ಅವರೆಲ್ಲರನ್ನು ವಂದಿಸುತ್ತ, ತನ್ನ ಚುನಾವಣೆ ಬ್ರಿಟಿಷರ ದಯಾಪರತೆಯನ್ನು ತೋರಿಸುತ್ತದೆ ಎಂದನು.

ಡಿಸೆಂಬರ್ ೨೦ ರಲ್ಲಿ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷನಾಗಿ ಗೊತ್ತಾಗಿದ್ದ ದಾದಾಭಾಯಿ, ಕಾರ್ಯದರ್ಶಿಯಾದ ವಾಚಾನೊಡನೆ ಲಾಹೋರಿಗೆ ಹೊರಟನು. ಪ್ರತಿಯೊಂದು ಸ್ಟೇಷನ್ನಿನಲ್ಲಿಯೂ—ರೈಲು ಅಲ್ಲಿಗೆ ಬರುವ ಹೊತ್ತು ಹಗಲಾಗಿರಲಿ ರಾತ್ರಿಯಾಗಿರಲಿ, ದಿನದ ಯಾವ ವೇಳೆಯೇ ಆಗಿರಲಿ—ಜನ ಗುಂಪು ಕಟ್ಟಿಕೊಂಡು ಹೂವು ಹಿಡಿದು ಮಹಾ ವೃದ್ಧನ ದರ್ಶನ

ಕ್ಕಾಗಿ ಬರುತ್ತಿದ್ದರು.

ಲಾಹೋರಿನಲ್ಲಿ ಪಂಜಾಬಿಗಳೂ ಮುಸ್ಲಿಮರೂ ಬಹು ಸಂತೋಷ ದಿಂದ ಸೇರಿದ್ದರು. ಸ್ವಾಗತ ಸಮಿತಿಯವರು ಅರ್ಪಿಸಿದ ಬಿನ್ನವತ್ತಳೆಯಲ್ಲಿ ಇಂಡಿಯಾದ ಸಮಸ್ಯೆಗಳ ಮೇಲೆ ದಾದಾಭಾಯಿಗೆ ಇರುವ ಪ್ರಭುತ್ವವನ್ನೂ, ಇಂಡಿಯಾ ಸಂಬಂಧವಾಗಿ ಅವನು ನಡಸಿದ ಹೋರಾಟವನ್ನೂ ಹೊಗಳಿ ದ್ದರು. "ಪಾರಸಿಗಳು ಇಂಡಿಯಾದೇಶಕ್ಕೆ ಕೊಟ್ಟಿರುವ ಬಹು ದೊಡ್ಡ ಕಾಣಿಕೆ ನೀನೇ ಆಗಿದ್ದೀಯೆ" ಎಂದು ತಿಳಿಸಿದ್ದರು. ದಾದಾಭಾಯಿ ತನ್ನ ಭಾಷಣದಲ್ಲಿ ಜಾತಿಮತ ಭಾವನೆಗಳನ್ನುಳಿದು ಶ್ರಮಿಸವುದು ಅಗತ್ಯವೆಂದು ಎಚ್ಚರಿಕೆ ಕೊಟ್ಟನು. ದಾದಾಭಾಯಿಗೆ ದೊರೆತ ಸ್ವಾಗತಕ್ಕೆ ಸಮಾನ ವಾದದ್ದು ಪ್ರಾಯಶಃ ವೈಸರಾಯಿಗೆ ಒಂದು ಬಾರಿ ದೊರೆತಿರಬಹುದು, ಎಂದು ವಿಲಿಯಂ ಹಂಟರ್ ಟೈಂಸ್ ಪತ್ರಿಕೆಯಲ್ಲಿ ಬರೆದನು.

ಲಾಹೋರಿನಿಂದ ಬೊಂಬಾಯಿಗೆ ಹಿಂದಿರುಗಿದ ಮರುಪ್ರಯಾಣವೂ ವಿಜಯೋತ್ಸಾಹದಿಂದ ಕೂಡಿತ್ತು. ಜಾತಿಮತ ಭೇದಗಳನ್ನು ಎಣಿಸದೆ ಜನ ತಮ್ಮ ಉತ್ಸಾಹವನ್ನು ಪ್ರದರ್ಶಿಸಿದರು.

ಜೂನ್ ೧೨ರಲ್ಲಿ ಬೊಂಬಾಯಿ ಮ್ಯುನಿಸಿಪಲ್ ಕಾರ್ಪೊರೇಷನ್ ಬಿನ್ನ ವತ್ತಳೆಯನ್ನರ್ಪಿಸಿ ನಗರಕ್ಕೆ ಅವನಿಂದಾದ ನಾನಾ ಬಗೆಯ ಸಾರ್ವಜನಿಕ ಸೇವೆಗಳನ್ನು ಸ್ಮರಿಸಿತು. ಇದೇ ರೀತಿಯಾಗಿ ಅನೇಕ ಸಾರ್ವಜನಿಕ ಸಮಾ ರಂಭಗಳಾದ ಮೇಲೆ ಜನವರಿ ೨೨ರಲ್ಲಿ ಇಂಗ್ಲೆಂಡಿಗೆ ಪ್ರಯಾಣ ಮಾಡಿದನು. ನಗರದ ಕಾಲೇಜು ವಿದ್ಯಾರ್ಥಿಗಳು ಅವನ ಗೌರವಾರ್ಥವಾಗಿ ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ ಸಭೆಯನ್ನು ಏರ್ಪಡಿಸಿದ್ದರು. ಬಂದರಿಗೆ ಹೊರಟವನು ಮಾರ್ಗ ಮಧ್ಯದಲ್ಲಿ ಆ ಸಭೆಗೆ ದಯಮಾಡಿಸಿ ಅದರಲ್ಲಿ ಭಾಗವಹಿಸಿದನು. ಬಹು ಉತ್ಸಾಹದಿಂದ ಅರ್ಪಿಸಿದ ಬಿನ್ನವತ್ತಳೆಯಲ್ಲಿ ವಿದ್ಯಾರ್ಥಿಗಳು, ೬೮ ವರ್ಷ ಗಳ ಭಾರವನ್ನು ಹೊತ್ತು, ದೇಶದ ರಾಜಕೀಯ ಗುರುವಾಗಿ ಹಿಂದಿರುಗಿರುವ ಕಾಲೇಜಿನ ಮೊದಲನೆಯ ಭಾರತೀಯ ಪ್ರೊಫೆಸರನ್ನು ಸ್ವಾಗತಿಸಿ ಅಭಿವಂ ದಿಸಿದರು. ಉತ್ತರವಾಗಿ ಮಾತಾಡುತ್ತ ದಾದಾಭಾಯಿ, "ನಮ್ಮ ಬಾಲ್ಯ ದಲ್ಲಿ ನಮ್ಮನ್ನು ದೇಶದ ಆಶೆಭವಿಷ್ಯಗಳೆಂದು ಹೇಳುತ್ತಿದ್ದರು. ಈಗ ಭವಿಷ್ಯದ ಆಶೆಗಳನ್ನು ಪೂರೈಸುವುದು ನಿಮಗೆ ಸೇರಿದೆ" ಎಂದು ನುಡಿದನು.

ಬಹುಮಂದಿ ವಿದ್ಯಾರ್ಥಿಗಳು ಅವನ ಸಾರೋಟಿನ ಕುದುರೆಗಳನ್ನು ಬಿಚ್ಚಲು ಯತ್ನಿಸಿದರು. ಅವರುಗಳಲ್ಲಿ ಈ ಲೇಖಕನೂ ಒಬ್ಬನಾಗಿದ್ದನು. ಪಾರಸೀ ಮತಸ್ಥನಾದ ಗಾಡಿ ಹೊಡೆಯುವವನು ಕುದುರೆ ಬಿಚ್ಚಲು ಅವಕಾಶ ಕೊಡದೆ ಚಾಟಿಯನ್ನು ಬೀಸಿದ್ದು ಈಗಲೂ ಅಚ್ಚಳಿಯದಂತೆ ಕಣ್ಣಮುಂದಿದೆ. ತಮ್ಮ ಪ್ರಯತ್ನ ಸಾಗದೆ ಹೋಗಲು ಅನೇಕ ವಿದ್ಯಾರ್ಥಿಗಳು ಅಪ್ರೊಶೊ ಬಂದರಿಗೆ ಸಾರೋಟಿನ ಮುಂದೆಯೂ ಹಿಂದೆಯೂ ನಡೆದು ಹೋದರು. ಪ್ರತಿನಿಧಿ ಮಂಡಲಿಯ ಸದಸ್ಯರು ಹಡಗಿನೊಳಗೆ ಹೋಗಿ—ಬಹುಮಂದಿ ಶಿಷ್ಯರಿಗೆ ಬೋಧಿಸಿ ರಾಷ್ಟ್ರದ ಬಿಡುಗಡೆಯ ಮಾರ್ಗವನ್ನು ತೋರಿದ ಆ ಪೂಜ್ಯಗುರುವನ್ನು ಬೀಳ್ಕೊಟ್ಟರು.

## ೨೪. ಚರಿತ್ರಾರ್ಹವಾದ ಚರ್ಚೆಗಳು

ಲಂಡನ್ನಿಗೆ ಹಿಂದಿರುಗುತ್ತಲೇ, ಸೆಂಟ್ರಲ್ ಫಿನ್ಸ್‌ಬರಿಯ ಸಂಯುಕ್ತ ಲಿಬರಲ್ ಮತ್ತು ರ್‍ಯಾಡಿಕಲ್ ಸಂಘದ ಅಧ್ಯಕ್ಷನೂ ಹಲವು ಸದಸ್ಯರುಗಳೂ ದಾದಾಭಾಯಿಯನ್ನು ಸ್ಟೇಷನ್ನಿನಲ್ಲಿ ಭೇಟಿಮಾಡಿ ಅವನಿಗೆ ಒಳ್ಳೆಯ ಸ್ವಾಗತವನ್ನು ಕೊಟ್ಟರು. ಹೀಗೆ ಶುಭವಾಗಿ ಆರಂಭವಾದ ಆ ವರ್ಷ (೧೮೪೪) ಗಣ್ಯವಾದ ಸಭಾಕಾರ್ಯಗಳಲ್ಲಿ ಕೊನೆಗಂಡಿತು.

ಸಿವಿಲ್ ಸರ್ವಿಸ್ ಪರೀಕ್ಷೆಗಳ ಸಂಬಂಧದಲ್ಲಿ ದಾದಾಭಾಯಿ ೧೮೯೩ ರಲ್ಲಿ ಕಾಮನ್ಸ್ ಸಭೆಯಲ್ಲಿ ಹೊಂದಿದ್ದ ಜಯವನ್ನು ಇಂಡಿಯಾದ ವೇತನ ಜೀವಿ ಪ್ರಭುತ್ವವು ಪರಿಣಾಮಕಾರಿಯಾಗದಂತೆ ಮಾಡಿತ್ತು. ಆದರೆ ೧೮೯೪ ರಲ್ಲಿ ಅವನು ಪಟ್ಟ ಶ್ರಮದ ಫಲವಾಗಿ ಇಂಡಿಯದ ವೆಚ್ಚಗಳನ್ನು ಪರಿಶೋಧಿಸಲು ರಾಯಲ್ ಕಮಿಷನ್ ಏರ್ಪಾಡಾಯಿತು.

ಇಂಡಿಯದ ಹಣಕಾಸಿನ ಚರ್ಚೆಯ ಸಂಬಂಧದಲ್ಲಿ ಸ್ಯಾಮ್ಯುಯೆಲ್ ಸ್ಮಿತ್‌ನು ಮಾತಾಡುತ್ತ, ಇಂಡಿಯಾ ದೇಶದಂಥ ಬಡ ದೇಶಕ್ಕೆ ಬ್ರಿಟಿಷ್ ರಾಜ್ಯಾಡಳಿತವು ತೀರ ದುಬಾರಿಯಾದದ್ದೆಂದು ಭಾರತೀಯರು ಆಕ್ಷೇಪಿಸು ತ್ತಾರೆ. ಅವರು ಹೇಳುವುದು ಸರಿಯಾಗಿದೆ, ಎಂದು ಹೇಳಿದನು. ಸುಮಾರು ನಲವತ್ತು ವರ್ಷಗಳ ಕಾಲ ಅವನು ದಾದಾಭಾಯಿಯೊಡನೆ ಆ ವಿಷಯ

ವನ್ನು ಪರಿಶೀಲಿಸಿದ್ದನು, ಅಲ್ಲದೆ ಸ್ವಲ್ಪ ಕಾಲದ ಹಿಂದೆ ತಾನೆ ಇಂಡಿಯಕ್ಕೆ ಪುನಃ ಹೋಗಿ ಬಂದಿದ್ದನು. ಆದ್ದರಿಂದ ಅಂಕಿ ಅಂಶಗಳನ್ನು ಕೊಟ್ಟು ಇಂಡಿಯದ ಬಡತನದ ಸ್ಥಿತಿಯನ್ನು ಸಿದ್ಧಾಂತ ಮಾಡಲು ಸಮರ್ಥನಾದನು. ಭಾರತದ ಹೆಚ್ಚುತ್ತಿರುವ ಮಿಲಿಟರಿ ವೆಚ್ಚವು ದೇಶದ ಉತ್ಪನ್ನವನ್ನೆಲ್ಲ ತಿಂದು ಹಾಕುತ್ತಿದೆ. ಇಂಡಿಯಾ ದೇಶದವರಿಗೆ ಸ್ವಂತ ಪಾರ್ಲಿಮೆಂಟ್ ಇಲ್ಲ, ಅವರು ಪಾರ್ಲಿಮೆಂಟುಗಳ ತಾಯಿಗೆ ಮೂಕ ಮನವಿಯನ್ನು ಸಲ್ಲಿಸಬಹುದು, ಅಷ್ಟೆ. ಆದ್ದರಿಂದ ಇಂಡಿಯದ ಹಣಕಾಸಿನ ಸ್ಥಿತಿಯನ್ನು ವಿಚಾರಣೆ ಮಾಡಬೇಕಾಗಿಯೂ, ಆ ಕೇಳಿಕೆಯನ್ನು ನಿರಾಕರಿಸಬಾರದಾಗಿಯೂ ಪ್ರಾರ್ಥಿಸಿದನು.

ದಾದಾಭಾಯಿ ನಿರ್ಣಯವನ್ನು ಅನುಮೋದಿಸಿ ಮಾತಾಡಿದನು. ಅವನ ಭಾಷಣವನ್ನು ಸಭೆ ತಾಳ್ಮೆಯಿಂದ ಕೇಳಿತು.

ಇಂಡಿಯಾದ ಸ್ಟೇಟ್ ಸೆಕ್ರೆಟರಿಯು ಅಂಥ ವಿಚಾರಣೆಗೆ ವಿರೋಧವಾಗಿರಲಿಲ್ಲ ಇಂಡಿಯದ ಉತ್ಪನ್ನ ಹೇಗೆ ಖರ್ಚಾಗುತ್ತಿದೆಯೆಂದು ಆಗಾಗ್ಗೆ ವಿಚಾರಣೆ ಮಾಡಿ ನೋಡುವುದು ಉತ್ತಮವೆಂದು ಅವನು ಒಪ್ಪಿಕೊಂಡನು. ಆದರೆ, ಸೂಚನೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕಾಗಿ ಸಲಹೆ ಮಾಡಿದನು. ಹಾಗೆ ಮಾಡಿದಲ್ಲಿ, ಮುಂದಿನ ಅಧಿವೇಶನದಲ್ಲಿ, ಆ ಪ್ರಶ್ನೆಯನ್ನು ಪರಿಶೀಲಿಸಲು, ಸರಕಾರದ ಪರವಾಗಿ ತಾನು ಸೆಲೆಕ್ಟ್ ಕಮಿಟಿ ನೇಮಕವಾಗುವಂತೆ ಸಲಹೆ ಮಾಡುವುದಾಗಿ ಹೇಳಿದನು. ಸ್ಮಿತ್ ಅದಕ್ಕೆ ಒಪ್ಪಿದನು.

ಆಗ ಭಾಷಣಕ್ಕೆ ತಿದ್ದುಪಡಿಯ ರೂಪವಾಗಿ ದಾದಾಭಾಯಿಯು, ವೆಚ್ಚದಲ್ಲಿ ಕೆಲವು ಬಾಬುಗಳು ಇಂಗ್ಲೆಂಡ್ ಇಂಡಿಯಾಗಳ ನಡುವೆ ವಿಭಾಗವಾಗುತ್ತಿದ್ದ ರೀತಿಯನ್ನು ಕುರಿತು, ಅನೇಕ ಪ್ರಶ್ನೆಗಳನ್ನು ಕೇಳಿದನು. ಗೃಹವೆಚ್ಚದಲ್ಲಿ ಅನ್ಯಾಯವಾದ ಭಾಗಾಂಶವನ್ನು ಇಂಡಿಯದ ಮೇಲೆ ಹೊರಿಸಲಾಗುತ್ತಿದೆಯೆ ಎಂಬ ವಿಷಯವನ್ನು ವಿಚಾರಣೆ ಮಾಡಲು ತನ್ನ ವಿರೋಧವೇನೂ ಇಲ್ಲವೆಂದು ಸ್ಟೇಟ್ ಸೆಕ್ರೆಟರಿ ತಿಳಿಸಿದನು. ಇಂಡಿಯಾ ದೇಶವನ್ನು ಪೀಡಿಸುವುದಾಗಲಿ, ಸುಲಿಗೆ ಮಾಡುವುದಾಗಲಿ, ಆ ದೇಶಕ್ಕೆ ಕೆಡುಕು ಮಾಡುವುದಾಗಲಿ ನಮಗೆ ಇಷ್ಟವಾದದ್ದಲ್ಲ; ಇಂಡಿಯಾ ವಿಚಾರದಲ್ಲಿ ಪ್ರಗತಿಯ ಹಾದಿಯಲ್ಲಿ ಹೋಗುವುದೇ ಬ್ರಿಟನ್ನಿನ ಅಪೇಕ್ಷೆ, ಎಂದು ಸರಕಾರದ,

ಇಂಡಿಯಾ ಕಚೇರಿಯ ಮತ್ತು ಇಂಡಿಯಾ ಸರಕಾರದ ಸಹೋದ್ಯೋಗಿಗಳ ಪರವಾಗಿ, ಭರವಸೆ ಕೊಡುವುದಾಗಿ ಹೇಳಿದನು. ಆಗ ದಾದಾಭಾಯಿ ತನ್ನ ತಿದ್ದುಪಡಿಗಳನ್ನು ಹಿಂದಕ್ಕೆ ತೆಗೆದುಕೊಂಡು ಜಯ ಪಡೆದವನಂತೆ ಕುಳಿತುಕೊಂಡನು.

ಸುಮಾರು ಈ ಸಮಯದಲ್ಲಿ, ಇಂಗ್ಲಿಷ್ ಪತ್ರಿಕೆಗಳಲ್ಲಿ ರಷ್ಯದ ಏಷ್ಯಾ ದಾಳಿಯ ವಿಚಾರ ಪ್ರಮುಖವಾಗಿ ಚರ್ಚೆಯಾಗುತ್ತಿತ್ತು. ದಾದಾಭಾಯಿ ತನ್ನ ಅಭಿಪ್ರಾಯವನ್ನು "ರಷ್ಯದ ದಾಳಿಯ ಭಯ" (The Fear of A Russian Invasion) ಎಂಬ ಲೇಖನದಲ್ಲಿ ವ್ಯಕ್ತಪಡಿಸಿದನು. ಆ ಲೇಖನ 'ಇಂಡಿಯ' ಪತ್ರಿಕೆಯಲ್ಲಿ ಅಚ್ಚಾಯಿತು. ಈಗಿನ ನಿರಂಕುಶ ಪ್ರಭುತ್ವವೂ, ಸುಲಿಗೆಯೂ ಅಪನಂಬಿಕೆಯೂ ಮುಂದುವರಿದರೆ, ಮುಂದೆ ಬಹು ತೊಂದರೆಯಿದೆ. ಆದರೆ ಇಂಡಿಯಾದೇಶದ ಒಳ ಸಮಸ್ಯೆಯನ್ನು ತೃಪ್ತಿಕರವಾಗಿ ಪರಿಹರಿಸಿದರೆ, ರಷ್ಯ ಏನೇ ಕಾರ್ಯಕ್ರಮ ಕೈಕೊಳ್ಳಲಿ, ಬ್ರಿಟನ್ ನಿಶ್ಚಿಂತನೆಯಾಗಿರಬಹುದು, ಎಂದು ತಿಳಿಸಿದನು.

'ಗ್ರೇಟ್ ಥಾಟ್ಸ್' ಎಂಬ ಪತ್ರಿಕೆಯ ಪ್ರತಿನಿಧಿಯು ದಾದಾಭಾಯಿಯನ್ನು ಸಂದರ್ಶಿಸಿ, "ನಮ್ಮ ಆಳ್ವಿಕೆಯಿಂದ ಇಂಡಿಯಾದ ಜನರಿಗೆ ಅಸಮಾಧಾನವುಂಟಾಗಿದೆಯೆ?" ಎಂದು ಪ್ರಶ್ನಿಸಿದನು (ಆಗಸ್ಟ್ ೮, ೧೮೯೫). "ಅಸಮಾಧಾನ ದಿನದಿನವೂ ಹೆಚ್ಚುತ್ತಿದೆ. ಒಂದಲ್ಲ ಒಂದು ದಿನ ಅದು ಭಯಂಕರವಾದ ಅನರ್ಥಕ್ಕೆ ದಾರಿಯಾಗುವುದಿಲ್ಲವೆಂದು ಸಾಹಸಿಗಳು ಮಾತ್ರ ಹೇಳಬಹುದು."— ದಾದಾಭಾಯಿ ಹೀಗೆ ಉತ್ತರಿಸಿದನು.

ಜಿ. ಡಬ್ಲ್ಯು. ಟೂಲಿ ಎಂಬಾತನು ಭೇಟಿಮಾಡಿದಾಗ ಕೊಟ್ಟ ಉತ್ತರವಿದು ('ಹ್ಯುಮ್ಯಾನಿಟೇರಿಯನ್' ಪತ್ರಿಕೆಯಲ್ಲಿ ೧೮೯೫ ರ ಜೂನ್ ೮ ರಲ್ಲಿ ಪ್ರಕಟವಾಗಿದೆ):

ನನ್ನನ್ನು ತಪ್ಪಾಗಿ ತಿಳಿದುಕೊಳ್ಳಬೇಡಿ. ಇಂಗ್ಲೆಂಡ್ ವಿಷಯಕ್ಕೆ ಇಂಡಿಯಾದಲ್ಲಿ ಅಪಾರವಾದ ಕೃತಜ್ಞತಾಭಾವವಿದೆ. ಈಗಿನ ತಲೆಮೊರೆಯವರು ಶಿಕ್ಷಣದಿಂದ ದೊರೆತಿರುವ ಫಲವನ್ನು ಅನುಭವಿಸಿದ್ದಾರೆ.... ಆದರೆ ಮುಂದೆ ಬರುವ ತಲೆಮೊರೆಯವರು ಅದನ್ನು ಭಾವಿಸಲಾರರು. ಅವರ ಕಾಲಕ್ಕೆ ಪರಿಸ್ಥಿತಿ ಎಷ್ಟೇ ಸುಧಾರಿಸಿದ್ದರೂ, ಅವರು ಹೆಚ್ಚು ಹಕ್ಕುಗಳನ್ನು ಕೇಳುತ್ತಾರೆ; ದೊರೆಯದಿದ್ದರೆ ದಂಗೆಯೇಳುತ್ತಾರೆ.

ಅಫೀಮುವ್ಯಾಪಾರದ ವಿಷಯವಾಗಿ ಕಾಮನ್ಸ್ ಸಭೆಯಲ್ಲಿ ನಡೆದ ಚರ್ಚೆಗಳಲ್ಲಿ ದಾದಾಭಾಯಿಯ ಭಾಗವನ್ನು ತಿಳಿಸಲೇಬೇಕು. ಅಫೀಮು ವ್ಯಾಪಾರದ ವಿಚಾರದಲ್ಲಿ ಅವನ ಅಭಿಪ್ರಾಯ ಏನೆಂಬುದನ್ನು ನಾವು ಆಗಲೇ ತಿಳಿದಿದ್ದೇವೆ. ಲಾರ್ಡ್ ಹಾರ್ಟಿಂಗ್‌ಟನ್ನನೊಡನೆ ನಡೆದ ಪತ್ರವ್ಯವಹಾರದಲ್ಲಿ ಅಫೀಮು ವ್ಯಾಪಾರ ಬ್ರಿಟಿಷ್ ಸರಕಾರದ ನೀತಿಪತನಕ್ಕೆ ಒಂದು ದೃಷ್ಟಾಂತವಾಗಿದೆಯೆಂದು ಹೇಳಿದ್ದನು. ೧೮೮೬ ರಲ್ಲಿ ಕಾಮನ್ಸ್ ಸಭೆಯ ಅನೇಕಮಂದಿ ಸದಸ್ಯರೂ ಬ್ರಿಟಿಷ್ ಪೌರರು ಹಲವರೂ ಅಫೀಮಿನ ವಿರುದ್ಧವಾಗಿ ಚಳವಳಿಯಲ್ಲಿ ದುಮುಕಿದರು. ಇಂಡಿಯಾ ಮತ್ತು ಚೀನಾ ಲೀಗ್ ಎಂಬ ಸಂಸ್ಥೆಯ ಕಾರ್ಯಗಳಲ್ಲಿಯೂ ಭಾಗವಹಿಸಿದನು. ಅಫೀಮು ವ್ಯಾಪಾರವನ್ನು ಅಡಗಿಸುವುದು ಆ ಸಂಸ್ಥೆಯ ಉದ್ದೇಶವಾಗಿತ್ತು. ಇಂಡಿಯಾಕ್ಕೆ ಸಂಬಂಧಪಟ್ಟ ನೈತಿಕ ಪ್ರಶ್ನೆಗಳ ವಿಷಯದಲ್ಲಿ ಸಾರ್ವಜನಿಕಾಭಿಪ್ರಾಯವನ್ನು ರೂಪಿಸುವುದೂ ಸಂಸ್ಥೆಯ ಗುರಿಯಾಗಿತ್ತು.

೧೮೯೧ರ ಏಪ್ರಿಲ್ ೧೦ ರಲ್ಲಿ ಕಾಮನ್ಸ್ ಸಭೆಯಲ್ಲಿ ಒಂದು ನಿರ್ಣಯ ಅಂಗೀಕೃತವಾಯಿತು: ಅದರ ಪ್ರಕಾರ, ಇಂಡಿಯಾ ಸರಕಾರ ಅಫೀಮಿನಿಂದ ಉತ್ಪನ್ನವನ್ನು ತೆಗೆಯುತ್ತಿದ್ದ ಪದ್ಧತಿ ನೈತಿಕವಾಗಿ ಸಮರ್ಥಿಸಲಾಗದ್ದಾಗಿದೆ; ಇಂಡಿಯಾ ಸರಕಾರ ಗಸಗಸೆಯನ್ನು ಬೆಳೆಯುವುದಕ್ಕೂ, ಬ್ರಿಟಿಷ್ ಇಂಡಿಯಾದಲ್ಲಿ ಅದರ ವ್ಯಾಪಾರಕ್ಕೂ—ಔಷಧದ ಉದ್ದೇಶಗಳಿಗೆ ನ್ಯಾಯವಾಗಿ ಒದಗಿಸಬೇಕಾದ ಪ್ರಮಾಣವನ್ನು ಹೊರತಾಗಿ—ಅನುಮತಿ ಕೊಡಕೂಡದು. ಅಲ್ಲದೆ ದೇಶೀಯ ಸಂಸ್ಥಾನಗಳಲ್ಲಿ ಬೆಳೆದ ಅಫೀಮು ಬ್ರಿಟಿಷ್ ಇಂಡಿಯಾದ ಮೂಲಕ ರವಾನೆಯಾಗುವುದನ್ನು ತಡೆಯಲು ಕಾರ್ಯಕ್ರಮಗಳನ್ನು ಕೈಕೊಳ್ಳಬೇಕು ; ಎಂದು ತೀರ್ಮಾನವಾಯಿತು.

ದಾದಾಭಾಯಿ ತನ್ನ ಜೀವಮಾನ ಕಾಲದಲ್ಲಿ ಕುಡಿತದ ಕೇಡನ್ನು ನಿಲ್ಲಿಸಬೇಕೆಂದು ಆಸೆ ಪಟ್ಟಿದ್ದನು. ರಾಜಕೀಯದಲ್ಲಿ ಸಹೋದ್ಯೋಗಿಗಳಾಗಿದ್ದ ಕೆಯ್ನ್ ಮತ್ತು ಸ್ಯಾಮ್ಯುಯಲ್ ಸ್ಮಿತ್ ಇಬ್ಬರೂ ಮದ್ಯ ನಿರೋಧದ ವಿಷಯದಲ್ಲಿ ಉತ್ಸಾಹಿಗಳಾಗಿದ್ದರು. ೧೮೮೮ ರಲ್ಲಿ ಕೆಯ್ನ್ ಬೊಂಬಾಯಿಯಲ್ಲಿ ಇದ್ದಾಗ ಪ್ರತಿನಿಧಿ ಸ್ವರೂಪರಾದ ಭಾರತೀಯರ ಸಭೆಯೊಂದನ್ನು ಸೇರಿಸಿದ್ದನು. ಸಭೆಯ ಉದ್ದೇಶ ಇಂಡಿಯದ ಜನರಲ್ಲಿ ಮದ್ಯ ಪಾನದ

ಅಭ್ಯಾಸ ಹರಡದಂತೆ ನೋಡಿಕೊಳ್ಳಲು ಇಂಗ್ಲೆಂಡಿನಲ್ಲಿ ಒಂದು ಸಂಘವನ್ನೂ ಇಂಡಿಯದಲ್ಲಿ ಅದರ ಶಾಖೆಗಳನ್ನೂ ಸ್ಥಾಪಿಸುವುದಾಗಿತ್ತು ಈ ಉದ್ದೇಶ ಸಾಧನೆಗಾಗಿ ಆಂಗ್ಲೋ–ಇಂಡಿಯನ್ ಮದ್ಯಪಾನ ನಿರೋಧ ಸಂಸ್ಥೆ ಸ್ಥಾಪನೆ ಯಾಯಿತು. ಸ್ಮಿತ್ ಅದರ ಅಧ್ಯಕ್ಷನಾದನು. ದಾದಾಭಾಯಿ ಆರಂಭ ದಿಂದಲೂ ಅದರ ಸದಸ್ಯನಾಗಿದ್ದು ಅನೇಕ ವರ್ಷಗಳ ಕಾಲ ಕಾರ್ಯಕಾರೀ ಸಮಿತಿಯ ಸದಸ್ಯನಾಗಿಯೂ ಸಹ ಇದ್ದನು.

ಬ್ರಿಟನ್ನಿನ ರಾಷ್ಟ್ರೀಯ ಮದ್ಯಪಾನ ನಿರೋಧ ಸಂಘದ ಸಹಕಾರವನ್ನು ಹೊಂದಿ ಇಂಗ್ಲೆಂಡಿನಲ್ಲಿಯೂ ಇಂಡಿಯದಲ್ಲೂ ಪಾನಕ್ಕೆ ವಿರೋಧವಾಗಿ ಸಾರ್ವಜನಿಕಾಭಿಪ್ರಾಯವನ್ನು ರೂಢಿಸಲಾಯಿತು. ಇಂಡಿಯದ ಮುಖ್ಯ ನಗರಗಳಲ್ಲೆಲ್ಲ ಶಾಖಾ ಸಮಿತಿಗಳನ್ನು ರೂಪಿಸಿ ದೇಶದಲ್ಲೆಲ್ಲ ಮದ್ಯಪಾನ ನಿರೋಧ ಸಂಘಗಳನ್ನು ಸ್ಥಾಪಿಸಲಾಯಿತು.

ಇಂಗ್ಲೆಂಡಿನಿಂದ ಪ್ರತಿನಿಧಿ ಮಂಡಲಿಗಳು ಇಂಡಿಯಾಕ್ಕೆ ಬಂದು ಇಲ್ಲಿನ ಕೆಲಸಗಾರರಿಗೆ ಉತ್ತೇಜನ ಕೊಟ್ಟು ಚಳವಳಿಯ ಕಾರ್ಯಕ್ಷೇತ್ರವನ್ನು ವಿಸ್ತರಿಸಿದವು. ಇಂಗ್ಲೆಂಡಿನಿಂದ ಇಂಡಿಯಾಕ್ಕೆ ಮದ್ಯಗಳು ಬರದಂತೆ ತಡೆ ಯುವುದೇ ಮುಖ್ಯವೆಂದು ದಾದಾಭಾಯಿ ವಾದಿಸುತ್ತಿದ್ದನು. ಈ ದೇಶದ ಜನ ಮತಧರ್ಮದ ಪ್ರಭಾವದಿಂದಲೂ ಸಂಪ್ರದಾಯದಿಂದಲೂ ಮದ್ಯ ನಿಷೇಧಕರು; ಆದರೆ ಇಂಡಿಯಾದಲ್ಲಿ ಪಾಶ್ಚಾತ್ಯ ನಾಗರಿಕತೆಯನ್ನು ಹರಡಿದ ಬ್ರಿಟಿಷ್ ಸರಕಾರ ಹದಿನಾರಾಣೆ ಪಾಶ್ಚಾತ್ಯ ಸಂಸ್ಥೆಯಾದ ಎಕ್ಸೈಜ್ ಇಲಾ ಖೆಯನ್ನೂ ಅದರೊಡನೆ ಷರಾಬು ಅಂಗಡಿಯನ್ನೂ ಆಚರಣೆಗೆ ತಂದಿರು ತ್ತದೆ. ಇಂಡಿಯಾದಲ್ಲಿರುವ ಬಟ್ಟಿ ಕಾರಖಾನೆಗಳೆಲ್ಲ ಸರಕಾರಕ್ಕೆ ಸೇರಿ ದವುಗಳೆಂದು ಹೇಳಬಹುದು. ಷರಾಬು ಅಂಗಡಿಗಳನ್ನು ಬಹಿರಂಗವಾಗಿ ಹರಾಜು ಹಾಕುತ್ತಾರೆ. ಹೆಚ್ಚಾಗಿ ಸಾರಾಯಿ ಮಾರಾಟ ಮಾಡುವ ಸವಾಲುದಾರನಿಗೆ ಅಂಗಡಿ ದೊರೆಯುತ್ತದೆ.

ಭಾರತದ ಎಕ್ಸೈಜ್ ಆಡಳಿತದಲ್ಲಿ ಪರಿಣಾಮಕಾರಿಯಾದ ಸುಧಾ ರಣೆಗಳನ್ನು ಸರಕಾರ ಆಚರಣೆಗೆ ತರಬೇಕೆಂಬ ನಿರ್ಣಯ ನ್ಯಾಷನಲ್ ಟೆಂಪರೆನ್ಸ್ ಅಸೋಸಿಯೇಷನ್ನಿನ ಪ್ರಭಾವದಿಂದ ಕಾಮನ್ಸ್ ಸಭೆಯಲ್ಲಿ ಅಂಗೀಕೃತವಾಯಿತು.

ಲಂಡನ್ನಿನ ನಿವಾಸಿಗಳಾಗಿದ್ದ ಬಹುಮಂದಿ ಭಾರತೀಯರು, ಮುಖ್ಯವಾಗಿ ವಿದ್ಯಾರ್ಥಿಗಳು, 'ಇಂಡಿಯನ್ ಬ್ರದರ್ ಹುಡ್ ಆಫ್ ಟೋಟಲ್ ಆಬ್‌ಸ್ಟೈಯ್ನರ್ಸ್' (ಪೂರ್ಣ ಮದ್ಯ ನಿಷೇಧಕ ಭಾರತ ಸೋದರ ಸಂಘ) ಎಂಬ ಸಂಘವನ್ನು ಸ್ಥಾಪಿಸುವುದಕ್ಕಾಗಿ ವೆಸ್ಟ್‌ಮಿನ್ಸ್ಟರ್ ಪುರಭವನದಲ್ಲಿ ಸಭೆಸೇರಿದರು. ಸ್ಯಾಮ್ಯುಯೆಲ್ ಸ್ಮಿತ್ ಸಭೆಯ ಅಧ್ಯಕ್ಷತೆವಹಿಸಿ ಅದನ್ನು ಹರಸಿದನು. ತರುಣರು ಮದ್ಯವನ್ನು ದ್ವೇಷಿಸುವಂತೆ ಮಾಡುವುದರಿಂದ ಕುಡಿತದ ಕೇಡನ್ನು ಬಹುಮಟ್ಟಿಗೆ ತಡೆಯಬಹುದೆಂದು ಅವನೂ ದಾದಾಭಾಯಿಯೂ ನಂಬಿದ್ದರು. ದಾದಾಭಾಯಿ ಭಾರತ ಸೋದರ ಸಂಘದ ಅಧ್ಯಕ್ಷನಾಗಿ ಚುನಾಯಿತನಾದನು.

ತಾತ್ಕಾಲಿಕ ನಿವಾಸಿಗಳಾದ ವಿದ್ಯಾರ್ಥಿಗಳು ಪೂರ್ಣ ನಿರೋಧವನ್ನು ಸಾಧಿಸುವುದರಲ್ಲಿ ಜಯಶೀಲರಾಗುತ್ತಾರೆಂದು ನಿರೀಕ್ಷಿಸಬೇಕಾಗಿರಲಿಲ್ಲ. ತರುಣ ವಿದ್ಯಾರ್ಥಿಗಳು ಆ ಚಳವಳಿಯಲ್ಲಿ ಆಸಕ್ತಿ ವಹಿಸಿ, ಕುಡಿತದ ವಿಚಾರದಲ್ಲಿ ಅಸಹ್ಯವಿಟ್ಟುಕೊಂಡು ಇಂಡಿಯಕ್ಕೆ ಹಿಂದಿರುಗಿದರೆ ಸಾಕೆಂದು ದಾದಾಭಾಯಿ ಆಶಿಸಿದ್ದನು. ಆಶಾವಾದಿಯಾದ ಅವನು ಇಡೀ ಭಾರತವು ಮದ್ಯಪಾನ ನಿರೋಧದ ವಿರೋಧವಾಗಿ ವೋಟು ಮಾಡುವ ದಿನವನ್ನು ಎದುರು ನೋಡುತ್ತಿದ್ದನು.

## ೨೫. ಚುನಾವಣೆಯಲ್ಲಿ ಅಪಜಯ

ಬಹುದಿನಗಳಿಂದ ನಿರೀಕ್ಷಿಸಿಕೊಂಡಿದ್ದ ರಾಯಲ್ ಕಮಿಷನ್ನಿನ ನೇಮಕ, ೧೮೯೫ರ ಮೇ ಅಂತ್ಯದಲ್ಲಿ, ಪ್ರಕಟವಾಯಿತು. ಲಾರ್ಡ್ ವೆಲ್ಬಿ ಅದರ ಅಧ್ಯಕ್ಷನಾಗಿದ್ದನು. ನಿಯೋಗ ಮಂಡಲಿ ವಿಚಾರ ಮಾಡಬೇಕಾಗಿದ್ದ ವಿಷಯಗಳೆಂದರೆ: ಸ್ಟೇಟ್ ಸೆಕ್ರೆಟರಿಯ ಅಥವಾ ಇಂಡಿಯಾ ಸರಕಾರದ ಆಜ್ಞೆಗನುಸಾರವಾಗಿ ಆದ ಮಿಲಿಟರಿ ಮತ್ತು ಸಿವಿಲ್ ವೆಚ್ಚಗಳ ನಿರ್ವಹಣ ಮತ್ತು ವ್ಯವಸ್ಥೆ; ಬ್ರಿಟಿಷ್ ಮತ್ತು ಇಂಡಿಯಾ ಸರಕಾರಗಳ ನಡುವೆ, ಎರಡು ಸರಕಾರಗಳಿಗೂ ಆಸಕ್ತಿಯಿರುವ ಉದ್ದೇಶಗಳಿಗಾಗಿ ನಡೆದ ಖರ್ಚುಗಳ ವಿಭಾಗ. ಮಂಡಲಿಯನ್ನು ಸೇರುವಂತೆ ದಾದಾಭಾಯಿಗೆ

ಆಹ್ವಾನ ಬಂತು. ನಿಯೋಗದಲ್ಲಿದ್ದವರಲ್ಲಿ ಅವನೊಬ್ಬನೇ ಭಾರತೀಯ ಸದಸ್ಯ; ಆದರೆ ಭಾರತೀಯರಷ್ಟೆ ಅಥವಾ ಅವರಿಗಿಂತ ಉತ್ತಮರಾದ ಇಬ್ಬರು ಬ್ರಿಟಿಷ್ ಸದಸ್ಯರಿದ್ದರು: ವೆಡ್ಡರ್‌ಬರ್ನ್ ಮತ್ತು ಕೆಯ್ನ್.

ರಾಯಲ್ ಕಮಿಷನ್ನಿನ ಸದಸ್ಯತನವೆಂದರೆ ಕಷ್ಟವಾದ ಕೆಲಸ; ಅದರಲ್ಲೂ ಬಹು ದಿನಗಳಿಂದ ಅಂಥ ಕಮಿಷನ್ನಿಗಾಗಿ ಒತ್ತಾಯ ಮಾಡುತ್ತಿದ್ದ ದಾದಾಭಾಯಿಗೆ. ಕಮಿಷನ್ ನೇಮಕವಾಗುತ್ತಿದ್ದಂತೆಯೆ ಪಾರ್ಲಿಮೆಂಟು ವಿಸರ್ಜನೆಯಾಯಿತು. ಅದರಿಂದ ದಾದಾಭಾಯಿಗೆ ಕಮಿಷನ್ನಿನ ಕೆಲಸಕ್ಕೆ ಅಗತ್ಯವಾಗಿದ್ದ ಕಾಲ ದೊರೆಯಿತೆನ್ನಬಹುದು. ಆದರೆ ಕಾಮನ್ಸ್ ಸಭೆಯಿಂದ ಹೊರಗಿರಲು ಅವನು ಇಷ್ಟಪಡಲಿಲ್ಲ. ಸಂಯುಕ್ತ ಲಿಬರಲ್ ಮತ್ತು ರ್‍ಯಾಡಿಕಲ್ ಸಂಘವು ಅವನನ್ನು ಸೆಂಟ್ರಲ್ ಫಿನ್ಸ್‌ಬರಿ ಕ್ಷೇತ್ರಕ್ಕೆ ಉಮೇದುವಾರನನ್ನಾಗಿ ಅಂಗೀಕರಿಸಿತು.

ಆದರೆ ಲಿಬರಲ್ ಪಕ್ಷದವರಿಗೆ ಜಯದ ಸಂಭವ ಕಡಿಮೆಯಾಗಿತ್ತು. ಲಿಬರಲ್ ಸರಕಾರವಿದ್ದಾಗ ಅನೇಕ ಹಿತಾರ್ಥಗಳಿಗೆ ಸಂಬಂಧಪಟ್ಟ ಪ್ರಶ್ನೆಗಳು ಬಂದಿದ್ದವು. ಈಗ ಆ ಹಿತಾರ್ಥಗಳವರು ತಮ್ಮ ತಮ್ಮ ಸ್ಥಾನಗಳನ್ನು ಭದ್ರಪಡಿಸಿಕೊಳ್ಳಲು ಹೋರಾಟ ನಡಸುತ್ತಿದ್ದರು. ದಾದಾಭಾಯಿಯ ಪರವಾಗಿ ಉತ್ಸಾಹಭರಿತವಾದ ಸಭೆಗಳು ಜರುಗಿದವು. ಆದರೆ ಅವನೂ ಬಿರುಗಾಳಿಯಲ್ಲಿ ಸಿಕ್ಕಿದನು. ವಿಲಿಯಂ ಹಾರ್‌ಕೋರ್ಟ್, ಜಾನ್ ಮಾರ್ಲೆ ಮೊದಲಾದವರನ್ನು ಮುಳುಗಿಸಿದ ಪ್ರತಿಕ್ರಿಯೆಯ ಪ್ರವಾಹ ಫಿನ್ಸ್‌ಬರಿ ಕ್ಷೇತ್ರದಲ್ಲಿಯೂ ಹಾವಳಿ ಮಾಡಿತು. ದಾದಾಭಾಯಿಯ ವಿರೋಧಿಯಾದ ಉಮೇದುವಾರನು ೮೦೫ ಅಧಿಕ ಮತಗಳಿಂದ ಜಯಶಾಲಿಯಾದನು.

ದಾದಾಭಾಯಿಯ ಅಪಜಯದ ಸುದ್ದಿ ಇಂಡಿಯದಲ್ಲೆಲ್ಲ ಬಹು ವ್ಯಥೆಯನ್ನುಂಟುಮಾಡಿತು. ದಾದಾಭಾಯಿ ಮಾತ್ರ ಸೋಲನ್ನು ಶಾಂತ ಚಿತ್ತದಿಂದ ಸ್ವೀಕರಿಸಿದನು. ಪುನಃ ಕಾಮನ್ಸ್ ಸಭೆಯನ್ನು ಪ್ರವೇಶಿಸಲು ಪ್ರಯತ್ನಿಸುವುದಾಗಿ ತನ್ನ ದೇಶ ಬಾಂಧವರಿಗ ತಿಳಿಸಿದನು.

# ೨೬. ಇಂಡಿಯಾದ ವೆಚ್ಚ ಸಂಬಂಧವಾದ ನಿಯೋಗ ಮಂಡಲಿ

ಪಾರ್ಲಿಮೆಂಟಿನ ಸದಸ್ಯತನ ತಪ್ಪಿದ್ದು ಒಂದಕ್ಕೆ ಒಳ್ಳೆಯದಾಯಿತು. ಅದರಿಂದ, ರಾಯಲ್ ಕಮಿಷನ್ನಿನ (ನಿಯೋಗ ಮಂಡಲಿಯ) ಕೆಲಸಕ್ಕೆ ಕಾಲವನ್ನೂ ಶಕ್ತಿಯನ್ನೂ ವಿನಿಯೋಗಿಸಲು ಅನುಕೂಲವಾಯಿತು. ಪಾರ್ಲಿಮೆಂಟಿನ ಕರ್ತವ್ಯಗಳ ಜೊತೆಗೆ ರಾಯಲ್ ಕಮಿಷನ್ನಿನ ಕೆಲಸವನ್ನೂ ತೃಪ್ತಿಕರವಾಗಿ ಮಾಡುವುದು ಅಸಾಧ್ಯವಾಗುತ್ತಿತ್ತು.

ಲಾರ್ಡ್ ವೆಲ್ಬಿ ದಕ್ಷನೂ ದಯಾಪರನೂ ಆದ ಅಧ್ಯಕ್ಷನಾಗಿದ್ದನು. ಕಮಿಷನ್ನಿನ ಇತರ ಸದಸ್ಯರು ನುರಿತ ರಾಜನೀತಿಜ್ಞರಾಗಿದ್ದರು. ಇಂಡಿಯಾ ವಿಷಯದಲ್ಲಿ ಅವರಿಗೆ ಪೂರ್ವಾಗ್ರಹವೇನೂ ಇರಲಿಲ್ಲ. ಆದರೂ ದಾದಾಭಾಯಿ ತಾನು, ವೆಡ್ಡರ್‌ಬರ್ನ್ ಮತ್ತು ಕೇಯ್ನ್ ಸೇರಿ, ಮೂವರ ಅಲ್ಪ ಸಂಖ್ಯೆಯ ಪಕ್ಷವಾಗಬಹುದೆಂದು ಭಯಪಟ್ಟನು. ಮೊದಲನೆಯ ಸಭೆಯಲ್ಲೇ, ಕಮಿಷನ್ನಿನ ವಿಚಾರಣೆಗೆ ಸೂಚಿಸಿದ ವಿಷಯದ ವ್ಯಾಪ್ತಿಯ ಸಂಬಂಧವಾಗಿ ತೀವ್ರವಾದ ಭಿನ್ನಾಭಿಪ್ರಾಯ ತಲೆದೋರಿತು. ಸದಸ್ಯರಲ್ಲಿ ಕೆಲವರು, ವಿಭಾಗದ ಕಲಮಿನ ಉದ್ದೇಶ–ಒಂದು ಕಡೆ ಇಂಡಿಯಾ ಕಚೇರಿ ಇನ್ನೊಂದು ಕಡೆ ಯುದ್ಧ ಕಚೇರಿ ಮತ್ತು ನೌಕಾಧಿಪತ್ಯದ ಕಚೇರಿ ಇವುಗಳ ಮಧ್ಯೆ ತೋರಿದ ವಿವಾದಗಳನ್ನು ಇತ್ಯರ್ಥಮಾಡುವುದಾಗಿದೆ, ಎಂದರು. ಈ ರೀತಿಯಾಗಿ ಕಮಿಷನ್ನಿನ ವ್ಯಾಪ್ತಿಯನ್ನು ಪರಿಮಿತಿಗೊಳಿಸುವ ಪ್ರಯತ್ನವನ್ನು ದಾದಾಭಾಯಿ ಪ್ರತಿಭಟಿಸಿದನು. ಪಾರ್ಲಿಮೆಂಟಿನ ಚರ್ಚೆಯ ಕಾಲದಲ್ಲಿ, ಅವನು, ಇಂಗ್ಲೆಂಡ್ ಇಂಡಿಯಾಗಳಲ್ಲಿ ಆಗಿರುವ ಎಲ್ಲ ಖರ್ಚುಗಳ ವಿಚಾರದಲ್ಲಿಯೂ ಇಂಗ್ಲೆಂಡ್ ಇಂಡಿಯಾಗಳ ಹಣಕಾಸಿನ ಸಂಬಂಧಗಳನ್ನು ವ್ಯವಸ್ಥೆಗೊಳಿಸಬೇಕಾಗಿ ಸ್ಪಷ್ಟಪಡಿಸಿದ್ದನು. ಅಂತು ಸಮಿತಿಯ ಕಾರ್ಯಾರಂಭದಲ್ಲಿ ಶುಭಸೂಚನೆ ಕಂಡುಬರಲಿಲ್ಲ. ದಾದಾಭಾಯಿ ಹೋರಾಟಕ್ಕೆ ಸಿದ್ಧನಾಗಬೇಕಾಗಿತ್ತು.

ಈ ಕೆಲಸದ ನಡುವೆ ಸಿವಿಲ್ ಸರ್ವಿಸ್ಸಿನ ಪ್ರಶ್ನೆಯನ್ನು ಬಿಟ್ಟು ಬಿಡ

ಲಿಲ್ಲ. ಅದು ಈ ವಿಚಾರಣೆಯ ಭಾಗವಾಗಿತ್ತು. ವಿಚಾರಣೆಯ ಕಾಲದಲ್ಲಿ ಅದನ್ನು ಎತ್ತಬೇಕೆಂದು ದಾದಾಭಾಯಿ ನಿರ್ಧರಿಸಿದ್ದನು. ಆ ಸಂಬಂಧ ವಾಗಿ ಮನವಿಗಳನ್ನು ಸಲ್ಲಿಸುವಂತೆ ಕಾಂಗ್ರೆಸ್ ಸಮಿತಿಗಳನ್ನೂ ಇತರ ರಾಜಕೀಯ ಸಂಸ್ಥೆಗಳನ್ನೂ ಎಚ್ಚರಿಸಿದನು.

ಈ ವಿಷಯವಾಗಿ ಕಾಮನ್ಸ್ ಸಭೆಯಲ್ಲಿ ವಾದಮಾಡಿದ ಅಂಶಗಳನ್ನು ತೆಗೆದುಕೊಂಡು ಅವುಗಳಿಗೆ ವಿವರವಾದ ಟಿಪ್ಪಣಿಗಳನ್ನು ಬರೆಯಲಾರಂಭಿಸಿ ದನು. ಉದಾಹರಣೆಗೆ:— ಇಂಡಿಯಾದಲ್ಲಿ ಬ್ರಿಟಿಷ್ ಬಲವನ್ನು ಹೆಚ್ಚಿಸು ವುದಕ್ಕೂ ಅದನ್ನು ನಡಸಿಕೊಂಡು ಬರುವುದಕ್ಕೂ ತಗಲಿದ ಎಲ್ಲಬಗೆಯ ವೆಚ್ಚಗಳನ್ನು ಇಂಡಿಯದ ಮೇಲೆ ಹೊರಿಸಲಾಗಿತ್ತು. ಇದು ಮೊದಲನೆಯ ಟಿಪ್ಪಣಿಯ ವಿಷಯವಾಗಿತ್ತು. ಇಂಡಿಯದ ಹುಟ್ಟುವಳಿಯಿಂದ ದೊರೆತ ಈ ಅನುಕೂಲತೆಗಳ ಬಗ್ಗೆ ಬ್ರಿಟನ್ ತಾನು ನ್ಯಾಯವಾಗಿ ಕೊಡಬೇಕಾದ ಖರ್ಚುಗಳನ್ನು ಸಲ್ಲಿಸಿಯೇ ಇರಲಿಲ್ಲ.

ಕಮಿಷನ್ನಿನ ಮುಂದೆ ಸಾಕ್ಷ್ಯ ಕೊಡಲು ಇಬ್ಬರನ್ನು ಚುನಾಯಿಸು ವಂತೆ ಕಾಂಗ್ರೆಸ್ಸಿನ ಬ್ರಿಟಿಷ್ ಸಮಿತಿಯು ಕಾಂಗ್ರೆಸಿಗೆ ಸೂಚಿಸಲೆಂದು ಕೆಯ್ನ್ ಸಲಹೆಮಾಡಿದನು. ಜನವರಿ ೨೦(೧೮೯೬)ರ ವೊಳಗೆ, ಕಮಿಷನ್ನಿನ ತಿಳಿವಳಿಕೆ ಗಾಗಿ ಸಾಕ್ಷ್ಯ ನುಡಿಯುವವರ ಹೆಸರುಗಳನ್ನೂ ಸಾಕ್ಷ್ಯದ ಗೋಷ್ವಾರೆ ಯನ್ನೂ ಕಳಿಸಿಕೊಡುವಂತೆ ದಾದಾಭಾಯಿ ವಾಚಾನಿಗೆ ಬರೆದನು. ಮಹಾ ದೇವ ಗೋವಿಂದ ರಾನಡೆ ಸಾಕ್ಷ್ಯನುಡಿಯಬೇಕೆಂಬ ಇಷ್ಟ ಬಹುವಾಗಿತ್ತು ದಾದಾಭಾಯಿಗೆ. ಆ ಪ್ರಸಿದ್ಧ ನ್ಯಾಯಶಾಸ್ತ್ರಜ್ಞನು ಅರ್ಥಶಾಸ್ತ್ರಜ್ಞನೂ, ಸಮಾಜಸುಧಾರಕನೂ, ರಾಜ್ಯ ಸುಧಾರಕನೂ ಆಗಿದ್ದನು. ಅವನ ಸ್ವತಂತ್ರ ಮನೋಭಾವ, ನಿಷ್ಪಕ್ಷಪಾತತೆ, ಸಮತೂಕವಾದ ದೃಷ್ಟಿ ಇವುಗಳಿಗಾಗಿ ಅವನನ್ನು ಬಹುಗೌರವದಿಂದ ಕಾಣುತ್ತಿದ್ದರು. ಆದರೆ ಹೈಕೋರ್ಟ್ ನ್ಯಾಯಾಧೀಶನಾದ ಆತನು ಕಮಿಷನಿನ್ನ ಮುಂದೆ ಸಾಕ್ಷ್ಯಕೊಡುವುದನ್ನು ಇಂಡಿಯಾ ಸರಕಾರ ಒಪ್ಪಲಿಲ್ಲ. ಬೊಂಬಾಯಿಪ್ರಾಂತಸಂಘದವರು ವಾಚಾ ನನ್ನು ಸಾಕ್ಷಿನುಡಿಯಲು ಚುನಾಯಿಸಿದರು. ಆತನೊಡನೆ, ಡೆಕ್ಕನ್ ಸಭೆಯ ಪ್ರತಿನಿಧಿಯಾಗಿ ಗೋಪಾಲಕೃಷ್ಣ ಗೋಖಲೆ ಹೊರಟನು. ಬಂಗಾಳದಿಂದ ಸುರೇಂದ್ರನಾಥಬಾನರ್ಜಿಯೂ, ಮದ್ರಾಸಿನಿಂದ ಜಿ. ಸುಬ್ರಹ್ಮಣ್ಯ ಅಯ್ಯರೂ

ಸಾಕ್ಷಿಗಳಾಗಿ ಬಂದಿದ್ದರು. ಅವರು ಸಮುದ್ರವನ್ನು ದಾಟುವ ಮೊದಲೇ ದಾದಾಭಾಯಿ ತನ್ನ ಸಹೋದ್ಯೋಗಿಗಳ ತಿಳಿವಳಿಕೆಗಾಗಿ ಅನೇಕ ಟಿಪ್ಪಣಿಗಳನ್ನು ತಯಾರಿಸಿದ್ದನು. ಉತ್ಪನ್ನ ಹಂಚಿಕೆಗಳನ್ನು ಕುರಿತು ವಿವರವಾದ ಪಟ್ಟಿಗಳನ್ನು ತಯಾರಿಸಿ, ಪ್ರಚಲಿತವಾದ ಪದ್ಧತಿಯ ಪರಿಣಾಮವಾಗಿ ಬ್ರಿಟಿಷ್ ಇಂಡಿಯಾದ ಜನರಲ್ಲಿ ಅತಿಯಾದ ಬಡತನ ಹರಡಿವೆಯೆಂದು ಸ್ಥಾಪಿಸಿ, ಆ ಬಗೆಯ ಪರಿಸ್ಥಿತಿ ಬ್ರಿಟಿಷರ ಕೀರ್ತಿಗೂ ಆಡಳಿತಕ್ಕೂ ಘಾತಕವೂ, ಭಾರತೀಯರ ಅವನತಿಗೂ ವಿನಾಶಕ್ಕೂ ಕಾರಣವೂ, ಆಗುತ್ತದೆಯೆಂದು ತೋರಿಸಿದ್ದನು.

ಒಂಭತ್ತನೆಯ ಟಿಪ್ಪಣಿಯಲ್ಲಿ ಇಂಡಿಯಾದ ಗಡಿಯಾಚೆ ನಡೆದ ಯುದ್ಧಗಳ ಮತ್ತು ಅವುಗಳಿಗೆ ತಗಲಿದ ವೆಚ್ಚಗಳ ಪಟ್ಟಿಯಿತ್ತು. ಕಮಿಷನ್ ವರದಿ ತಯಾರಿಸುವುದರಲ್ಲಿ ಅವನ ಹೇಳಿಕೆಯನ್ನು ಪರಿಶೀಲಿಸಬಹುದು ಅಥವಾ ಬಿಡಬಹುದು. ಆದರೆ ಕಮಿಷನ್ನಿನ ಮುಂದೆ ತಾನು ಸಾಕ್ಷಿಯಾಗಿ ನಿಂತರೆ, ಆಗ ತಾನು ಎತ್ತುವ ವಿಷಯಗಳನ್ನು ಅದು ಯೋಚಿಸಲೇಬೇಕಾಗುತ್ತದೆ. ಈ ಕಾರಣದಿಂದ ಸಾಕ್ಷಿಯಾಗಿ ನಿಂತು ಸವಾಲಿಗೆ ಗುರಿಯಾದನು. ಅಧ್ಯಕ್ಷನಿಗೂ ಸಾಕ್ಷಿಗೂ ಅನೇಕ ವಾಗ್ಯುದ್ಧಗಳು ನಡೆದವು.

ಉದಾಹರಣೆಗೆ :

ಅಧ್ಯಕ್ಷ: ಸಿವಿಲ್ ಸರ್ವಿಸ್ಸಿನಲ್ಲಿ ಯಾವುದಾದರೂ ಭಾಗವನ್ನು—ಯೂರೋಪಿಯನ್ನರ ಸರ್ವಿಸ್ಸನ್ನು—ಉಳಿಸಬೇಕೆಂದಿರುವೆಯಾ ?

ಸಾಕ್ಷಿ: ಅತ್ಯುಚ್ಚ ಮಟ್ಟದ ಅಧಿಕಾರಿಗಳಾದ ವೈಸರಾಯ್, ಗವರ್ನರುಗಳು ಮುಖ್ಯ ದಂಡನಾಯಕ ಅವರುಗಳು ಮಾತ್ರ........

ಅಧ್ಯಕ್ಷ: ಹಾಗಾದರೆ ವೈಸ್‌ರಾಯ್ ಮೊದಲಾದವರು ಇರಬೇಕು ?

ಸಾಕ್ಷಿ: ಹೌದು, ಅವರುಗಳು ಮಾತ್ರ.

ಅಧ್ಯಕ್ಷ: ಅವರಿಗೆ ಕೆಳಮಟ್ಟದಲ್ಲಿ ಆಂಗ್ಲರು ಯಾರೂ ಬೇಡ ?

ಸಾಕ್ಷಿ: ನನಗೇನೂ ಅಗತ್ಯ ಕಾಣುವುದಿಲ್ಲ.

ಅಧ್ಯಕ್ಷ: ಹಾಗಾದರೆ ಕ್ರಮೇಣ ಅವರನ್ನೆಲ್ಲ ಕಳಿಸಿ ಬಿಡುತ್ತೀಯಾ ?

ಸಾಕ್ಷಿ: ಕೆಳಗಿನಿಂದ ಕಡಿಮೆ ಮಾಡುತ್ತ ಹೋಗಬಹುದು.

ಅಧ್ಯಕ್ಷ: ಆದರೆ ಇಂಡಿಯಾ ದೇಶದ ಚರಿತ್ರೆಯನ್ನು ನೋಡಿದರೆ

ಒಬ್ಬರನ್ನೊಬ್ಬರು ಉದ್ದಕ್ಕೂ ಕೊಲ್ಲುತ್ತಿದ್ದಾರೆ....ಇಂಡಿಯಾ ದೇಶದ ಅಭಿವೃದ್ಧಿಯನ್ನು ಸಾಧಿಸಲು ಪಿಂಡಾರಿಗಳನ್ನು ಬಿಡಬೇಕೆಂದು ನಿನ್ನ ಹಂಚಿಕೆ ಯೇನು ?

ಸಾಕ್ಷಿ: ಆ ಅಗತ್ಯವೇನಿಲ್ಲ. ಆ ಕಾಲ ಹೋಯಿತು.

ಅಧ್ಯಕ್ಷ: ಬರೋಡಾದ ಮುಖ್ಯ ಮಂತ್ರಿ ಸರ್ ಮಾಧವರಾವ್ 'ಭಾರತೀಯರಿಗಾಗಿ ಭಾರತ' ಎಂಬ ವಿಷಯವನ್ನು ಕುರಿತು ಲಾರ್ಡ್ ರಾಬರ್ಟ್ಸ್‌ನೊಡನೆ ಹೇಳಿದ ಮಾತು ಗೊತ್ತಿದೆಯೆ ?

"ಏನು ಹೇಳಿದ ?"

"ಮೃಗಾಲಯದಲ್ಲಿ ಪಂಜರಗಳ ಬಾಗಿಲುಗಳನ್ನು ತೆಗೆದಂತೆ ಆಗುತ್ತದೆಯಂತೆ. ಸ್ವಲ್ಪ ಹೊತ್ತಿನಲ್ಲಿಯೆ ಹುಲಿಯೊಂದು ಉಳಿದು ಇತರ ಪ್ರಾಣಿಗಳೆಲ್ಲ ಮೃತಿ ಹೊಂದುತ್ತವೆ ಎಂದು ಹೇಳಿದ. ಹುಲಿಯೆಂದರೆ ಪ್ರಾಯಶ: ಉತ್ತರ ಇಂಡಿಯದ ಕ್ಷಾತ್ರ ಪುರುಷರು ಇರಬಹುದು."

"ನಾವು ನ್ಯಾಯ ಶಿಸ್ತುಗಳನ್ನು ಪಾಲಿಸುವಷ್ಟು ನಾಗರಿಕರಾಗಿಲ್ಲವಾದರೆ, ಅದು ೧೫೦ ವರ್ಷಗಳ ಬ್ರಿಟಿಷ್ ಆಳ್ವಿಕೆಯ ಪರಿಣಾಮವೆ ?"

ಒಟ್ಟಿನಲ್ಲಿ ದಾದಾಭಾಯಿಯ ಹೇಳಿಕೆಗಳು ಉಜ್ಜ್ವಲವಾಗಿದ್ದವು. ಸವಾಲು ಬಿರುಸಾಗಿದ್ದುದರಿಂದ ತನಗೆ ಬೇಕಾಗಿದ್ದ ವಿಷಯಗಳನ್ನೆಲ್ಲ ಒತ್ತಿ ಹೇಳಲು ಅನುಕೂಲವಾಯಿತು. ಪ್ರಾಸಂಗಿಕವಾಗಿ, ಅಂಕಿ ಅಂಶಗಳ ಮೇಲೆ ಅವನಿಗಿರುವ ಪ್ರಭುತ್ವ ವ್ಯಕ್ತವಾಗಿ, ಅದನ್ನು ಸಹೋದ್ಯೋಗಿಗಳು ಮೆಚ್ಚಿಕೊಂಡರು.

೧೮೯೬ ರಿಂದೀಚೆಗೆ ಪರಿಸ್ಥಿತಿ ಆಮೂಲಾಗ್ರವಾಗಿ ಬದಲಾಗಿರುವುದರಿಂದ ಸಾಕ್ಷ್ಯದ ವಿವರಗಳನ್ನಾಗಲಿ, ಕಮಿಷನ್ನಿನ ಶಿಫಾರಸುಗಳನ್ನಾಗಲಿ, ವರದಿಗಳಲ್ಲಿನ ದೃಷ್ಟಿಭೇದಗಳನ್ನಾಗಲಿ ಪರಿಶೀಲಿಸುವುದು ಅನಾವಶ್ಯಕ. ವರದಿಯಲ್ಲಿ, ಇಂಡಿಯಾಕ್ಕೆ ಆದ ಕೆಲವು ಅನ್ಯಾಯಗಳನ್ನು, ಗಮನಿಸಿದ್ದರೆಂದು ತಿಳಿಸಿದರೆ ಸಾಕು.

# ೨೭. ಬ್ರಿಟಿಷ್ ಆಡಳಿತದಲ್ಲಿ ಬ್ರಿಟಿಷ್ ಮೂಲ ತತ್ತ್ವಗಳ ಸಮಾವೇಶವಿಲ್ಲ

ನಾಲ್ಕು ದಶಕಗಳಿಂದಲೂ ದಾದಾಭಾಯಿಯೂ ಅವನ ಸ್ನೇಹಿತರೂ—ಆಂಗ್ಲ ಮತ್ತು ಭಾರತೀಯ ಮಿತ್ರರಿಬ್ಬರೂ—ಇಂಡಿಯಾದೇಶದ ಕುಂದು ಕೊರತೆಗಳನ್ನೂ, ಆ ದೇಶದ ಆಡಳಿತ ಪದ್ಧತಿಯ ದೋಷಗಳನ್ನೂ, ಬ್ರಿಟಿಷ್ ಜನರ ಗಮನಕ್ಕೆ ತರಲು ನಿರಂತರವಾದ ಪ್ರಯತ್ನ ನಡಸಿದ್ದರು. ಅದರ ಪರಿಣಾಮವಾಗಿ ಅನೇಕ ಜನರು ಚಳವಳಿಯ ವಿಷಯದಲ್ಲಿ ಸಹಾನುಭೂತಿ ಯುತರಾಗಿದ್ದು ಅದಕ್ಕೆ ಪ್ರೋತ್ಸಾಹ ನೀಡಿದರು. ಆದರೆ ಅಧಿಕಾರ ಸೂತ್ರವನ್ನು ವಹಿಸಿದವರ ಮೇಲೆ ಪರಿಣಾಮಕರವಾದ ಪ್ರಭಾವವುಂಟಾಗಿರ ಲಿಲ್ಲ. ಆದ್ದರಿಂದ ತನ್ನ ಜೀವನದ ಕೊನೆಯ ದಿನಗಳನ್ನು ಹೆಚ್ಚು ವ್ಯಾಪಕ ವಾದ, ಹೆಚ್ಚು ತೀವ್ರವಾದ ಚಳವಳಿಯಲ್ಲಿ—ಇಂಡಿಯ ದೇಶದ ಆಡಳಿತ ವನ್ನು ಬ್ರಿಟಿಷ್ ಮೂಲ ತತ್ತ್ವಗಳಿಗನುಸಾರವಾಗಿ ನಡಸಿ ಎಂಬ ಚಳವಳಿ ಯಲ್ಲಿ—ಕಳೆಯಬೇಕೆಂದು ನಿರ್ಧರಿಸಿದನು.

ದಿನ್‌ಷಾ ವಾಚಾ ಮತ್ತು ಗೋಖಲೆ ೧೮೯೭ರ ಏಪ್ರಿಲ್‌ನಲ್ಲಿ ಲಂಡ ನ್ನಿಗೆ ಬಂದರು. ಅದೇ ಸಮಯದಲ್ಲಿ ಸುರೇಂದ್ರನಾಥ ಬಾನರ್ಜಿಯೂ, ಸುಬ್ರಹ್ಮಣ್ಯಅಯ್ಯರೂ ಅಲ್ಲಿ ಇದ್ದರು. ಈ ಸಂದರ್ಭವನ್ನು ಉಪಯೋಗಿಸಿ ಕೊಂಡು ದಾದಾಭಾಯಿ ಚಳವಳಿಯನ್ನು ಆರಂಭಿಸಿದನು ೧೮೯೭ ರ ಡಿಸೆಂಬರ್ ೨೮ ರಲ್ಲಿ ಲಂಡನ್ ಇಂಡಿಯನ್ ಸೊಸೈಟಿಯ ಆಶ್ರಯದಲ್ಲಿ ನಡೆದ ಇಂಗ್ಲೆಂಡಿನಲ್ಲಿದ್ದ ಭಾರತೀಯರ ಸಭೆಯಲ್ಲಿ ಈ ರೀತಿಯ ನಿರ್ಣಯ ವಾಯಿತು : ಇಂಡಿಯಾ ಅನುಭವಿಸುತ್ತಿರುವ ಬಡತನಕ್ಕೂ ಕೇಡುಗಳಿಗೂ ಮುಖ್ಯ ಕಾರಣ, ಅನ್ಯಾಯವಾದ ಮತ್ತು ಬ್ರಿಟಿಷರಿಗೆ ಯೋಗ್ಯವಲ್ಲದ ಸರಕಾರ ಪದ್ಧತಿ. ಈ ಆಡಳಿತದಿಂದ ಬಿಡುವಿಲ್ಲದ ಮತ್ತು ದಿನದಿನವೂ ಹೆಚ್ಚುತ್ತಿರುವ ಸುಲಿಗೆ ನಡೆಯುತ್ತಿದೆ. ಬ್ರಿಟಿಷ್ ಜನರ ಇಷ್ಟಗಳಿಗೆ ತೀರ ವಿರುದ್ಧವಾಗಿಯೂ, ಪಾರ್ಲಿಮೆಂಟಿನ ಕಾನೂನುಗಳಿಗೂ ನಿರ್ಣಯಗಳಿಗೂ ವ್ಯತಿರಿಕ್ತವಾಗಿಯೂ, ಬ್ರಿಟಿಷ್ ಜನಾಂಗವೂ ದೊರೆಯೂ ಪದೇ ಪದೇ

ಇತ್ತ ವಚನಗಳಿಗೆ ಭಂಗ ಬರುವಂತೆಯೂ, ಸರಕಾರವನ್ನು ರಾಜಕೀಯ ಬೂಟಾಟಿಕೆಯಿಂದಲೂ ಕಪಟೋಪಾಯಗಳಿಂದಲೂ ನಡೆಸಲಾಗುತ್ತಿದೆ. ಕ್ಷಾಮ ಪ್ಲೇಗುಗಳ ಸಂಬಂಧವಾದ ಖರ್ಚಿನ ಪೂರ್ಣ ಭಾಗವನ್ನಲ್ಲದಿದ್ದರೆ ಬಹು ಭಾಗವನ್ನೂ, ಅವಿವೇಕವಾದ ಗಡಿನಾಡಿನ ಯುದ್ಧದ ಎಲ್ಲ ಖರ್ಚನ್ನೂ ಬ್ರಿಟಿಷ್ ಖಜಾನೆಯಿಂದ ಭರಿಸತಕ್ಕದ್ದು.

ದಾದಾಭಾಯಿ, ಈ ಸಮಯದಲ್ಲಿ, ಚಳವಳಿಗೆ ಸಮಾಜ ಸ್ವಾಮ್ಯವಾದಿಗಳ ಬೆಂಬಲವನ್ನು ಪಡೆಯುತ್ತಿದ್ದದ್ದು ಅನೇಕ ಸ್ನೇಹಿತರಿಗೆ ಮನಸ್ಸಿನಲ್ಲಿ ಕಿರಿಕಿರಿಯಾಯಿತು. ಅವರಿಗೆ ಉತ್ತರವಾಗಿ ದಾದಾಭಾಯಿ :

ಸಮಾಜಸ್ವಾಮ್ಯವಾದಿಗಳು ನಮಗೆ ಸಹಾಯಮಾಡುತ್ತಿದಾರೆಂದು ಆಗ್ರಹಪಡಬೇಡಿ. ಇಂಡಿಯಾ ವಿಷಯದಲ್ಲಿ ಇಂಗ್ಲಿಷರ ಮನಸ್ಸನ್ನು ಒಲಿಸುವುದು ಎಷ್ಟು ಕಷ್ಟವೆಂದು ನಿಮಗೆ ತಿಳಿದರೆ, ಸಮಾಜಸ್ವಾಮ್ಯವಾದಿಗಳಿಂದ ನಮಗೆ ದೊರೆಯುತ್ತಿರುವ ಸಹಾಯದ ಬೆಲೆ ಗೊತ್ತಾಗುತ್ತವೆ. ಹೈಂಡ್‌ಮನ್ ಅವರ ನಾಯಕನಾಗಿರುವುದರಿಂದಲೇ ನಮಗೆ ಈ ಸಹಾಯ ದೊರೆಯುತ್ತಿದೆ. ಅವನು 'ಇಂಡಿಯಾದ ದಿವಾಳಿ' ಎಂಬ ಲೇಖನವನ್ನು ಮೊದಲು ಬರೆದಾಗ ಅವನ ಕನಸಿನಲ್ಲಿಯೂ ಸಮಾಜ ಸ್ವಾಮ್ಯವಾದ ಇರಲಿಲ್ಲ.... ಅಭಿವೃದ್ಧಿ ಪಥದಲ್ಲಿರುವ ಬಲಯುತವಾದ ಈ ಸಂಸ್ಥೆ ಭಾರತದ ವಿಷಯದಲ್ಲಿ ಆಸಕ್ತಿ ವಹಿಸುತ್ತಿರುವುದು ನಮ್ಮ ಅದೃಷ್ಟ. ಭವಿಷ್ಯತ್ತು ಬಹುಮಟ್ಟಿಗೆ ಈ ಪಕ್ಷಕ್ಕೆ ಸೇರಿದೆಯೆಂಬುದನ್ನು ಮರೆಯಬಾರದು.

ಹೀಗೆ ಹೈಂಡ್‌ಮನ್ನನ ಹೃತ್ಪೂರ್ವಕವಾದ ಬೆಂಬಲವನ್ನು ದಾದಾಭಾಯಿ ಮೆಚ್ಚಿಕೊಂಡಿದ್ದರೂ ಚಳವಳಿಯ ರೀತಿಯನ್ನು ಬದಲಾಯಿಸಬೇಕೆಂದು ಅವನು ಪದೇ ಪದೇ ಸಲಹೆಮಾಡುತ್ತಿದ್ದುದನ್ನು ದಾದಾಭಾಯಿ ದೃಢವಾಗಿ ನಿರಾಕರಿಸುತ್ತಿದ್ದನು. ಹೈಂಡ್‌ಮನ್ ಮಾತ್ರ ಭಾರತೀಯರ ಸತ್ತ್ವವಿಲ್ಲದ ಚಳವಳಿಯನ್ನು ಹೆಚ್ಚು ಹೆಚ್ಚು ಕಠಿನವಾಗಿ ಖಂಡಿಸುತ್ತಿದ್ದನು. ಚಳವಳಿಯನ್ನು ಹೆಚ್ಚು ಜವಾಬ್ದಾರಿ ವಹಿಸಿ ನಡಸದೆ, ಎಲ್ಲಾ ಕೆಲಸವನ್ನೂ ನಿನ್ನಂಥವನಿಗೆ ಬಿಟ್ಟು, ಕಾಂಗ್ರೆಸ್ ಸಭೆಯಲ್ಲಿ ರಾಣಿಗೆ ಅಭಿನಂದನೆಯನ್ನು ಸಲ್ಲಿಸುವ ಮುಟ್ಠಾಳ ನಿರ್ಣಯವನ್ನು ಅಂಗೀಕರಿಸುವ ಭಾರತೀಯರನ್ನು ಕಂಡರೆ ನನಗೆ ತಿರಸ್ಕಾರ, ಎಂದು ಹೇಳುತ್ತಿದ್ದನು. ಅಭಿನಂದನೆ ಯಾವುದಕ್ಕೆ ? ಎರಡು ಮೂರು ತಲೆಮೊರೆಗಳವರಗೂ ಉದ್ಧಾರವಾಗದಂತೆ ಭಾರತವನ್ನು ಹಾಳು ಮಾಡಿರುವುದಕ್ಕೇ ? ನಿಮ್ಮನ್ನು ಕಂಡರೆ ಅಯ್ಯೋ ಅನ್ನಿಸು

ತ್ತದೆ. ಉನ್ನತ ಸ್ಥಾನದಲ್ಲಿರುವವರು ನನ್ನನ್ನು ಕೇಳಿದಾರೆ. "ಇಂಡಿಯಾದಲ್ಲಿ ಅಸಮಾಧಾನವೆಲ್ಲಿನೆ, ಹೈಂಡ'ಮನ' ? ನ್ಯಾಯಕ್ಕಾಗಿ ಭಾರತೀಯರು ಎಲ್ಲಿ ಕೂಗುತ್ತಿದಾರೆ? ನೀನು ಹೇಳುವಂತೆ ಜನರು ಬಡವರಾಗಿ ದುಃಖ ಪೀಡಿತ ರಾಗಿದ್ದರೆ, ಈಗ ಕೇಳುತ್ತಿರುವುದಕ್ಕಿಂತಲೂ ಹೆಚ್ಚಾಗಿ ಅವರ ದನಿ ಕೇಳಿಸ ಬೇಕಾಗಿತ್ತಲ್ಲ!" ಈ ಮಾತಿಗೆ ನಾನೇನು ಉತ್ತರ ಹೇಳಲಿ ? ಏನೂ ಉತ್ತರ ತೋರುವುದಿಲ್ಲ. ಏನಾದರೂ ಒಳ್ಳೆಯದಾಗ ಬೇಕಿದ್ದರೆ, ಎದ್ದೇಳಿ, ಗಲಭೆ ಹಾಕಿ....ನಾನು ಸಹಾಯ ಮಾಡುತ್ತೇನೆ. ನಮ್ಮ ಸಂಸ್ಥೆ, ಪತ್ರಿಕೆ ಸಹಾಯ ಮಾಡುತ್ತವೆ ; ಆದರೆ 'ಕಷ್ಟ ಪಟ್ಟು ಕೆಲಸಮಾಡುವವನಿಗೆ ದೈವ ಸಹಾಯ ಮಾಡುತ್ತದೆ.'

ಈ ಮಾತು ಕಥೆಗಳಾದ ಮೇಲೆ ದಾದಾಭಾಯಿ ಹೈಂಡ'ಮನ'ಗೆ ಬರೆದ ಪತ್ರದಿಂದ ಅವರವರಲ್ಲಿ ಮೂಲ ಭೂತವಾಗಿದ್ದ ಅಭಿಪ್ರಾಯ ಭೇದ ವ್ಯಕ್ತವಾಗುತ್ತದೆ.

'ಜಸ್ಟಿಸ್' ಪತ್ರಿಕೆಯಲ್ಲಿ ನೀನು ಬರೆದ ಲೇಖನವನ್ನು ಓದಿದ ಮೇಲೆ, ಇಂಡಿಯಾಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ನಿನ್ನೊಡನೆಯೂ ಎಸ್. ಡಿ. ಎಫ್. ನೊಡನೆಯೂ ಸೇರಿ ಕೆಲಸ ಮಾಡುವುದು ನನಗೆ ಅಸಾಧ್ಯವೆನಿಸುತ್ತದೆ. ದಂಗೆಗೆ ಪ್ರೋತ್ಸಾಹ ಕೊಡುವುದು ನನ್ನ ಗುರಿಯಲ್ಲ, ನನಗೆ ಇಷ್ಟವಿಲ್ಲ. ದಂಗೆಯನ್ನು ತಪ್ಪಿಸುವುದೂ, ಇಂಡಿಯಾದೊಡನೆ ಇರುವ ಬ್ರಿಟಿಷ್ ಸಂಬಂಧವನ್ನು ಎರಡೂ ದೇಶ ಗಳಿಗೆ ಹಿತಕರವಾಗುವಂತೆಯೂ ಸಂತೋಷಪ್ರದವಾಗುವಂತೆಯೂ ಮಾಡುವುದೂ ನನ್ನ ಗುರಿ.

ರಾಜದ್ರೋಹದ ಆಪಾದನೆಯ ಮೇಲೆ ಪತ್ರಿಕೋದ್ಯಮಿಗಳ ಮೇಲೆ ಕ್ರಮ ಜರುಗಿಸಿ ಸರಕಾರ ಅನ್ಯಾಯ ಮಾಡಿದರು. ದಾದಾಭಾಯಿ ಅದನ್ನು 'ರಾಜಕೀಯ ಅವಿವೇಕ' ಎಂದು ಹೇಳಿದನು. "ಬ್ರಿಟಿಷರ ಕಾರ್ಯದಿಂದಲೆ ಬ್ರಿಟಿಷ್ ಸಂಬಂಧ ದುರ್ಬಲವಾಗುತ್ತಿರುವುದು ವ್ಯಸನಕರವಾದ ಸಂಗತಿ" ಎಂದು ವಾಚಾನಿಗೆ ಬರೆದನು.

## ೨೮. ಬ್ರಿಟಿಷ್ ಪ್ರಜೆಗಳನ್ನು ಎಚ್ಚರಗೊಳಿಸಿದ್ದು

೧೮೮೮ ರ ನವೆಂಬರಿನಲ್ಲಿ ದಾದಾಭಾಯಿ, ರಾಜಕೀಯ ಚಳವಳಿಯ ಸಂಬಂಧವಾಗಿ ಲಂಕಾಷೈರಿಗೆ ಹೋದನು ಆ ಸ್ಥಳಕ್ಕೆ ವಿಶೇಷ ಗಮನ ಕೊಡುವುದು ಅಗತ್ಯವಾಗಿತ್ತು : ಯಾಕೆಂದರೆ, ಲಂಕಾಷೈರಿನ ವ್ಯಾಪಾರದ ಅಭಿವೃದ್ಧಿಗಾಗಿ ಇಂಡಿಯಾಕ್ಕೆ ಬಹಳ ಕೆಡುಕನ್ನು ಎಸಗಲಾಗಿತ್ತು ; ಇಂಗ್ಲೆಂಡ್ ಇಂಡಿಯಾಗಳ ನಡುವೆ ಹತ್ತಿ ವ್ಯಾಪಾರವನ್ನು ನಿಜವಾಗಿ ಹೇಗೆ ಉತ್ತಮಗೊಳಿಸಬಹುದೆಂಬುದನ್ನು ಲಂಕಾಷೈರಿನ ಜನ ಅರಿತರೆ ಇಂಡಿಯಾಕ್ಕೆ ಬಹಳ ಒಳ್ಳೆಯದನ್ನು ಮಾಡಬಹುದಾಗಿತ್ತು. ನವೆಂಬರ್ ೧೪ ರಲ್ಲಿ ದಾದಾಭಾಯಿ, ಪೂರ್ವ ಮ್ಯಾಂಚೆಸ್ಟರಿನ ಲಿಬರಲ್ ಸಂಘದ ಆಶ್ರಯದಲ್ಲಿ ಮೊದಲನೆಯ ಭಾಷಣವನ್ನು ಮಾಡಿದನು. "ಇಂಡಿಯಾದಿಂದ ಇಲ್ಲಿಗೆ ಐಶ್ವರ್ಯ ಹರಿದು ಹೋಗುತ್ತಿದೆ. ಅದು ಭಾರತದ ಕೈಗಾರಿಕೆಗೆ ಒಂದು 'ರಕ್ಷಣೆ'ಯಾಗಿ ಪರಿಣಮಿಸಿದೆಯೆಂಬುದು ನಿಮಗೆ ಗೊತ್ತಿದೆಯೆ ?" ಎಂದು ಕೇಳಿದನು. "ಪ್ರೊಗದಿ ಕೊಡುವ ರಾಜ್ಯದಿಂದ—ಕೊಡುವ ಪ್ರೊಗದಿ ಹಣ ಅಪಹಾರವಾಗುವುದಲ್ಲದೆ ಅದರ ಭಾಗಕ್ಕೆ ಎಲ್ಲ ವಿದೇಶೀ ವಸ್ತುಗಳ ಬೆಲೆಯೂ ಹೆಚ್ಚುತ್ತದೆಯೆಂಬುದು ವಿದಿತವಾದ ಆರ್ಥಿಕ ತತ್ತ್ವ."

ಅನಂತರ ದಾದಾಭಾಯಿ ಕ್ಯಾಸಲ್‌ಟೌನ್, ಚೋರ್ಲಿ, ಅಥರ್‌ಟನ್ ಮತ್ತು ನಟ್ಸ್‌ಫೋರ್ಡ್ ಈ ಸ್ಥಳಗಳಲ್ಲಿ ಅನೇಕ ಸಭೆಗಳನ್ನು ನಡೆಸಿ ಭಾಷಣ ಮಾಡಿದನು. ಡಬ್ಲ್ಯು. ಎ. ಚೇಂಬರ್ಸ್, ರಮೇಶದತ್ತ್, ಮತ್ತು ಬಿಪಿನ್ ಚಂದ್ರಪಾಲ್ ಇವರುಗಳು ಚಳವಳಿಯಲ್ಲಿ ಭಾಗವಹಿಸಿದರು. ಕಾಂಗ್ರೆಸ್ಸಿನ ಬ್ರಿಟಿಷ್ ಸಮಿತಿಯೂ ಚಟುವಟಿಕೆಯಾಗಿ ಕೆಲಸಮಾಡುತ್ತಿತ್ತು. ಡಬ್ಲ್ಯು. ಎಸ್. ಕೆಯ್ನ್ ಇಂಡಿಯದ ರಾಷ್ಟ್ರೀಯ ಮಹಾಸಭೆಯನ್ನು ಕುರಿತು ಭಾಷಣಮಾಡಿದನು. ಎಲ್ಲೆಲ್ಲೂ ಜನ ಭಾರತ ಸುಧಾರಕರ ವಿಷಯದಲ್ಲಿ ಉತ್ಸಾಹವನ್ನು ತೋರಿದರು. ಬ್ರಿಟನ್ ಭಾರತದಿಂದ ಎರಡು ಮಾರ್ಗಗಳಲ್ಲಿ ಲಾಭ ಸಂಪಾದನೆ ಮಾಡಬಹುದೆಂದು ಜಾನ್ ಬ್ರೈಟ್ ಹೇಳಿದ್ದನು: ಒಂದು ಸುಲಿಗೆಯಿಂದ, ಎರಡು ವ್ಯಾಪಾರದಿಂದ. ಬ್ರಿಟಿಷ್ ಜನರ ಒಲವು

ಎರಡನೆಯ ಮಾರ್ಗದ ಕಡೆಗೆ ಎಂದು ದಾದಾಭಾಯಿ ಹೇಳಿದನು. ಅದು ಸಾಧ್ಯವಾಗಲು ಇಂಡಿಯಾ ಸಂಪದ್ಯುಕ್ತವಾಗಿರಬೇಕು. ಆದರೆ ಇಂಡಿಯಾ ದೇಶದ ಜನರ ಉತ್ಪನ್ನ ವರ್ಷಕ್ಕೆ ತಲೆಯೊಂದಕ್ಕೆ ರೂ. ೨೦ ಗಳು ಮಾತ್ರ. ಅಂಥವರಿಂದ ಏನು ವ್ಯಾಪಾರವನ್ನು ನಿರೀಕ್ಷಿಸಬಹುದು ?

ಈ ಮಾತು ಅಲ್ಲಿದ್ದ ವರ್ತಕ ಜನದ ಮನಕ್ಕೆ ತಟ್ಟಿತು. ಭಾರತೀಯರ ಕುಂದು ಕೊರತೆಗಳ ವಿಚಾರದಲ್ಲಿ ಅವರು ಸಹಾನುಭೂತಿಯುತರಾದರು ; ಸೂಚಿತವಾದ ಸಮ್ಮತಿಧಾರಣೆಗಳು ಅವರಿಗೆ ನ್ಯಾಯ ಸಮ್ಮತವಾಗಿರುವಂತೆ ತೋರಿದವು.

ಹೀಗೆ ಇಂಗ್ಲೆಂಡಿನ ಎಲ್ಲ ಭಾಗಗಳಲ್ಲೂ ಅನೇಕ ಸಭೆಗಳು ಜರುಗಿ ಭಾಷಣಗಳಾದವು.

೧೯೦೦ ರಲ್ಲಿ ಇಂಡಿಯಾದಲ್ಲಿ ಕ್ಷಾಮ ತಲೆದೋರಿತು. ೨೫ ವರ್ಷಗಳ ಕಾಲದಲ್ಲಿ ಅಂಥ ಕೆಟ್ಟ ಕ್ಷಾಮ ಯಾವಾಗಲೂ ಬಂದಿರಲಿಲ್ಲ. ದಾದಾಭಾಯಿ ಇಂಗ್ಲೆಂಡಿನ ನಾನಾ ಸ್ಥಳಗಳಲ್ಲಿ ಅನೇಕ ಸಭೆಗಳನ್ನು ನಡಸಿದನು. ಜೂನ್ ೨೮ ರಲ್ಲಿ ಶ್ರೀಮತಿ ಚಾರ್ಲ್ಸ್ ಮ್ಯಾಲೆಟ್ "ಭಾರತದ ಕ್ಷಾಮ" ವನ್ನು ಕುರಿತು ಭಾಷಣ ಮಾಡಿದಳು; ಜಿ. ಓ. ಎಮ್. (ಮಹಾಕುಲ ವೃದ್ಧನು) ಅಧ್ಯಕ್ಷತೆ ವಹಿಸಿದ್ದನು. ಅಸರ್ಲಿ, ಫಿನ್ಸ್‌ಬರಿ ಮೊದಲಾದ ಸ್ಥಳಗಳಲ್ಲಿ ಭಾಷಣ ಮಾಡಿದನು.

ಸಭೆಯೊಂದರಲ್ಲಿ ಮಾತನಾಡುತ್ತ ಇಂಡಿಯಾ ಬಹು ರಾಜಭಕ್ತಿಯುತವಾಗಿ ನಡೆದುಕೊಂಡಿದೆ ಎಂದು ತಿಳಿಸಿ 'ಆ ರಾಜಭಕ್ತಿ ತಪ್ಪಿಹೋಗುವುದಿಲ್ಲವೆಂದು ತಿಳಿಯಬೇಡಿ' ಎಂದು ಎಚ್ಚರಿಸಿದನು. ಅದು ಕೇವಲ ಬೆದರಿಕೆಯಾಗಿರಲಿಲ್ಲ. ೧೮೫೨ ರಲ್ಲಿ ದಾದಾಭಾಯಿ ತನ್ನ ಮೊದಲನೆಯ ರಾಜಕೀಯ ಭಾಷಣವನ್ನು ಮಾಡಿದಾಗ ಇದ್ದ ಸ್ಥಿತಿ ಶತಮಾನದ ಕೊನೆಯಲ್ಲಿ ಭಾರತದಲ್ಲಿ ಇರಲಿಲ್ಲ. ಇಂಡಿಯಾದಲ್ಲಿ ತೀವ್ರವಾದ ಅತೃಪ್ತಿ ನೆಲಸಿದೆಯೆಂದು ಎಲ್ಲರಿಗೂ ತಿಳಿದಿತ್ತು; ದಾದಾಭಾಯಿಗೆ ಹೆಚ್ಚಿನ ವಿಷಯವೂ ತಿಳಿದಿತ್ತು. ಅಧಿಕಾರಿಗಳು ತೊಂದರೆಯನ್ನು ನಿರೀಕ್ಷಿಸುತ್ತಿದಾರೆ ಎಂಬುದು ಅವನಿಗೆ ತಿಳಿದು ಬಂದಿತ್ತು.

೧೯೦೦ ರ ಅಕ್ಟೋಬರ್ ೧೩ ರಲ್ಲಿ ಡಾ| ಮಲ್ಲಿಕ್ ದಾದಾಭಾಯಿಯು

ಗೌರವಾರ್ಥವಾಗಿ ಟ್ರ್ಯೂಡರ್ ಹೊಟೇಲಿನಲ್ಲಿ ಔತಣವನ್ನು ಏರ್ಪಡಿಸಿದ್ದನು. ಇಂಡಿಯದ ಹೋರಾಟದಲ್ಲಿ ಆಸಕ್ತಿಯುಳ್ಳ ತರುಣ ಭಾರತೀಯರನ್ನು ಚಳವಳಿಗೆ ಸೆಳೆಯುವುದು ಔತಣಕೂಟದ ಮುಖ್ಯ ಉದ್ದೇಶವಾಗಿತ್ತು. ರಮೇಶದತ್ತ್, ಡಿಗ್ಬಿ ಮೊದಲಾದ ಮಿತ್ರರನೇಕರು ದಾದಾಭಾಯಿಯ ದೇಶ ಸೇವಾಕಾರ್ಯವನ್ನೂ ಧೈರ್ಯವನ್ನೂ ದೃಢತೆಯನ್ನೂ ಪ್ರಶಂಸೆ ಮಾಡಿದರು. ಡಿಗ್ಬಿ ಆ ಸಂದರ್ಭದಲ್ಲಿ ಹೇಳಿದ ಮಾತುಗಳಿವು :

ಇಂಗ್ಲಿಷ್ ರಾಜನೀತಿಜ್ಞರಲ್ಲಿ ಜಾನ್ ಬ್ರೈಟ್‌ನೊಡನೆ ಮಾತ್ರ ದಾದಾಭಾಯಿಯನ್ನು ಹೋಲಿಸಬಹುದಾಗಿದೆ. ಅವರಿಬ್ಬರಲ್ಲಿ ಅನೇಕ ಸಮಾನಗುಣಶೀಲಗಳಿವೆ. ಕೆಲವು ಖಚಿತವಾದ ಅಭಿಪ್ರಾಯಗಳನ್ನಿಟ್ಟುಕೊಂಡು ಬ್ರೈಟ್ ತನ್ನ ರಾಜಕೀಯ ಜೀವನವನ್ನು ಆರಂಭಿಸಿದನು ; ದೀರ್ಘಜೀವನದ ಕೊನೆಯಲ್ಲಿ, ಪ್ರಾಯಿಕವಾಗಿ ದೇಶದ ಜನವೆಲ್ಲ ತನ್ನ ಅಭಿಪ್ರಾಯಗಳನ್ನು ಅಂಗೀಕರಿಸಿರುವುದನ್ನು ಕಂಡನು. ಯಾವುದರಿಂದ ಆರಂಭಿಸಿದನೋ ಅದ ರಿಂದಲೇ ಕೊನೆಮಾಡಿದನು. ಅನೇಕ ವರ್ಷಗಳ ಕೆಳಗೆ ಅವನು ಯಾವುದನ್ನು ಪ್ರಚಾರಮಾಡಿದನೋ ಅದನ್ನೇ ಈಗಲೂ ಸಮರ್ಥಿಸುತ್ತಿದ್ದಾನೆ. ಕಟ್ಟಕಡೆ ಯಲ್ಲಿ ಅವನ ಅಭಿಪ್ರಾಯಗಳು ಅಂಗೀಕೃತವಾಗುತ್ತಿವೆ ಎಂಬುದಕ್ಕೆ ನಿರಂತರ ವಾದ ನಿದರ್ಶನಗಳು ಕಾಣಿಸುತ್ತಿವೆ.

ದಾದಾಭಾಯಿ ಯುವಕರನ್ನುದ್ದೇಶಿಸಿ ಹೀಗೆ ನುಡಿದನು :

ನಿಮ್ಮ ಮುಂದಿರುವ ಕಾರ್ಯವೇನು ಗೊತ್ತೆ ? ಭಾರತದ ದಾರಿದ್ರ್ಯದ ನಿಜವಾದ ಕಾರಣವನ್ನು ನೀವು ಬಯಲುಮಾಡಬೇಕು. ದೇಶದ ದಾರಿದ್ರ್ಯಕ್ಕೆ ಭೂಕಂದಾಯದ ಹೊರೆ, ದೇಶೀಯ ಕೈಗಾರಿಕೆಗಳ ಅವನತಸ್ಥಿತಿ, ಮೊದಲಾದ ಕಾರಣಗಳನ್ನು ಒಡ್ಡುತ್ತಾರೆ. ಈನೆಪಗಳನ್ನು ನಾನು ಆಗಾಗ ವಿಚಾರಮಾಡಿ ದ್ದೇನೆ. ಅವೆಲ್ಲ ತಿರುಳಿಲ್ಲದ ಕಾರಣಗಳು.... ಎಲ್ಲಿಯವರೆಗೆ ಇಂಡಿಯಾ ದೇಶದ ಸುಲಿಗೆ ನಡೆಯುತ್ತದೆಯೊ ಅಲ್ಲಿಯವರಿಗೆ ಭಾರತಕ್ಕೆ ಭವಿಷ್ಯವಿಲ್ಲ .. ನೀವು ಪಟ್ಟು ಹಿಡಿದು ಕೆಲಸಮಾಡಿ ಮುಂದೆನುಗ್ಗಿ ! ಜಾನ್ ಬುಲ್‌ನಿಂದ ಪಾಠವನ್ನು ಕಲಿಯಿರಿ.

ದಾದಾಭಾಯಿಗೆ ಯುವಕರಲ್ಲಿ ಅಗಾಧವಾದ ನಂಬಿಕೆಯಿತ್ತು. ರಾಷ್ಟ್ರೀಯ ಸಂಸ್ಥೆಗಳನ್ನು ನಡಸುತ್ತ ವೃದ್ಧನಾದವನಲ್ಲಿ ಇದು ವಿಚಿತ್ರ ಗುಣ ವೆನ್ನಬಹುದು. ಅವನ ಸಹಾಯಕರಾದ ವಾಚಾ, ಮೆಹತಾ, ಮತ್ತು ಬಾನರ್ಜಿ ಇವರುಗಳು ಕೆಲವು ಯುವಕರ ಖಂಡಿತವಾದವನ್ನೂ ದಂಗೆಕೋರ ತನವನ್ನೂ ಕಂಡು ತಾಳ್ಮೆಗೆಡುತ್ತಿದ್ದಾಗ, ತಲೆನರೆತ ಈ ಬುದ್ಧಿವಾದಿಯು

ಹೆಚ್ಚು ಹೆಚ್ಚು ಮಂದಿ ಯುವಕರು ಮುಂದೆ ಬಂದು ಸ್ವಾತಂತ್ರ್ಯ ಜ್ಯೋತಿ ಯನ್ನು ಎತ್ತಿ ಹಿಡಿಯಲೆಂದು ಆಶಿಸುತ್ತಿದ್ದನು. ಕೆಲವು ವರ್ಷಗಳ ಮೇಲೆ ಗೋಖಲೆಗೆ ಕಾಗದ ಬರೆಯುತ್ತ ಯುವಕರ ಅಗತ್ಯವನ್ನು ವಿವರಿಸಿದನು :

ಪ್ರತಿಪ್ರಾಂತವೂ ಸುಶಿಕ್ಷಿತರಾದ ಯುವಕರ ತಂಡವನ್ನು ಒದಗಿಸಬೇಕು. ಆ ಯುವಕರು ಸೇವಾಪ್ರಚಾರಕಾರ್ಯವನ್ನು ಕೈಕೊಳ್ಳಬೇಕು. ಕೆಲಸವನ್ನು ಶ್ರದ್ಧೆಯಿಂದಮಾಡಲು ಅನುಕೂಲಿಸುವಂತೆ ತಕ್ಕ ಸಂಸ್ಥೆಯನ್ನು ಸೇರಬೇಕು. ಕಾಲ ನಮಗೆ ಅನುಕೂಲವಾಗಿದೆ. ಇಂಗ್ಲಿಷ್ ಜನರೂ ಪತ್ರಿಕೆಗಳೂ ಇಂಡಿಯಾಕ್ಕೆ ಆದ ಅನ್ಯಾಯಗಳನ್ನು ಅರಿತುಕೊಳ್ಳುತ್ತಿವೆ. ಏಷ್ಯಾ ಎಚ್ಚರ ಗೊಳ್ಳುತ್ತಿದೆ.

೧೯೦೦ ರ ಅಕ್ಟೋಬರ್ ೧೯ ರಲ್ಲಿ ವೆಡ್ಡರ್‌ಬರ್ನ್, ಹ್ಯೂಮ್ ಮತ್ತು ದಾದಾಭಾಯಿ ಮೂವರೂ ಸೇರಿ ಲಾಹೋರಿನ ಕಾಂಗ್ರೆಸ್ಸಿನಲ್ಲಿ ಗೊತ್ತಾದ ಅಧ್ಯಕ್ಷನಿಗೆ ಒಂದು ಸಾರ್ವಜನಿಕ ಪ್ರಕಟನೆಯನ್ನು ಕಳಿಸಿದರು. ಅದರಲ್ಲಿ ಕಾಂಗ್ರೆಸಿನ ಹದಿನೈದು ವರುಷಗಳ ಚರಿತ್ರೆಯನ್ನು ಅವಲೋಕಿಸಿ ನೂತನ ಪರಿಸ್ಥಿತಿ ಹುಟ್ಟುತ್ತಿದೆಯೆಂದು ವಿವೇಚಿಸಿದ್ದರು. ಅದು ವಿಷಮ ಪರಿಸ್ಥಿತಿ, ಕಾಂಗ್ರೆಸ್ಸು ಕವಲೊಡೆಯುವ ಸಮಯ. ವ್ಯವಸ್ಥಾಬದ್ಧವಾದ ಚಳವಳಿ ಮುಂದುವರಿಯುತ್ತ ಹೋಗಿ ಆಳುವವರನ್ನೂ ಪ್ರಜೆಗಳನ್ನೂ ಒಟ್ಟು ಗೂಡಿಸಿ, ಇಂಡಿಯಾ ಇಂಗ್ಲೆಂಡುಗಳೆರಡರ ಹಿತವನ್ನೂ ಸಾಧಿಸಬೇಕೇ ಅಥವಾ ಇದುವರೆಗಿನ ಕೆಲಸ ನಿರಾಶೆ ಪ್ರತಿ ಕ್ರಿಯೆಗಳಲ್ಲಿ ಪರ್ಯವಸಾನವಾಗ ಬೇಕೆ? ಇದಕ್ಕೆ ಉತ್ತರ ಭಾರತದ ಜನರ ನಡತೆಯಲ್ಲಿದೆ. ಸಂಸ್ಥೆಯ ಸ್ಥಾಪ ಕರಾದ ನಾವು ಮಾರ್ಗ ಶೋಧನೆಯ ಕೆಲಸವನ್ನು ಪೂರೈಸಿದ್ದೇವೆ. ತರು ಣರ ಕೈಗೆ ಸೂತ್ರವನ್ನು ವಹಿಸುತ್ತಿದ್ದೇವೆ. ಕೆಲಸದ ಹೊರೆಯನ್ನು ಅವರು ಹೆಚ್ಚು ಹೆಚ್ಚಾಗಿ ವಹಿಸಿಕೊಳ್ಳುವುದನ್ನು ಎದುರು ನೋಡುತ್ತಿದೇವೆ.

ನವೆಂಬರ್ ೭ರಲ್ಲಿ ದಾದಾಭಾಯಿ ಸಾಮರ್ ಸೆಟ್ ಎಂಬ ಚಿಕ್ಕ ಪಟ್ಟ ಣಕ್ಕೆ ಹೋದನು. ಅಲ್ಲಿ ಮಾತಾಡುತ್ತ, ಇಂಗ್ಲೆಂಡು ಇಂಡಿಯಾಕ್ಕೆ ಮಾಡಿ ರುವ ಒಳ್ಳೆಯ ಕೆಲಸಗಳ ವಿಷಯವಾಗಿ ನಾನು ಹೆಚ್ಚಾಗಿ ಮಾತಾಡುವುದಿಲ್ಲ ವೆಂದು ಆಕ್ಷೇಪಣೆ ಮಾಡುತ್ತಾರೆ; ಆದರೆ ಇಂಡಿಯಾದೊಡನೆ ಇಂಗ್ಲೆಂಡಿನ ಸಂಬಂಧ ಬಹುಕಾಲ ನಡೆದು ಬರಬೇಕೆಂದು ನಾನು ಹೇಳುವ ಮಾತಿಗಿಂತ ಹೆಚ್ಚಿನ ಪ್ರಶಸ್ತಿ ಇಂಗ್ಲೆಂಡಿಗೆ ಬೇಕೆ? ಆದರೆ ಬ್ರಿಟಿಷರ ಆಡಳಿತದ ಸತ್ಫಲ

ಣಾಮಗಳಿಗಿಂತ ದುಷ್ಪರಿಣಾಮಗಳು ಜಾಸ್ತಿಯಾಗಿರುವುದು ನಮ್ಮ ದುರದೃಷ್ಟ, ಎಂದು ಸಮಾಧಾನ ಹೇಳಿದನು.

ಕ್ರಾಯ್‌ಡನ್ನಿನ ಫ್ರೀ ಚರ್ಚಿನ ವೇದಿಕೆಯಿಂದ ಸಹ ಒಂದು ಬಾರಿ ಭಾಷಣ ಮಾಡಿ ಇಂಡಿಯಾ ದೇಶದ ದುಃಖಕರವಾದ ಪರಿಸ್ಥಿತಿಯನ್ನು ವರ್ಣಿಸಿ "ನನ್ನ ಮಾತನ್ನು ವೇದವಾಕ್ಯವೆಂದು ನಂಬಬೇಡಿ, ನೀವೇ ತಿಳಿದು ನೋಡಿ" ಎಂದು ಹೇಳಿದನು.

ಜುಲೈ ೩೦ ರಲ್ಲಿ ವೆಸ್ಟ್‌ಮಿನ್‌ಸ್ಟರ್‌ನ ಕ್ಯಾಕ್ಸ್‌ಟನ್ ಹಾಲಿನಲ್ಲಿ ಕಾಂಗ್ರೆಸಿನ ಬ್ರಿಟಿಷ್ ಸಮಿತಿಯ ಮತ್ತು ಲಂಡನ್ ಇಂಡಿಯನ್ ಸೊಸೈಟಿಯ ಆಶ್ರಯದಲ್ಲಿ ಮುಖ್ಯವಾದ ಸಭೆಯೊಂದು ಸೇರಿತ್ತು. ದಕ್ಷಿಣ ಆಫ್ರಿಕದಲ್ಲಿ ಬ್ರಿಟಿಷ್ ಕಾವಲು ದಂಡೊಂದನ್ನು ಇಡುವ ಸಲುವಾಗಿ ಇಂಡಿಯಾದ ಮೇಲೆ ತೆರಿಗೆ ಹಾಕಬೇಕೆಂಬ ಸಲಹೆಯಿತ್ತು. ಅದನ್ನು ವಿರೋಧಿಸುವ ಸಲುವಾಗಿ ಸಭೆ ಸೇರಿತ್ತು. ಮುಖ್ಯ ನಿರ್ಣಯವನ್ನು ದಾದಾಭಾಯಿ ಸೂಚಿಸಿದನು. ಲಾರ್ಡ್ ವೆಲ್ಬಿ ಅದನ್ನು ಅನುಮೋದಿಸಿದನು. ಅವನ ಅಭಿಪ್ರಾಯದಲ್ಲಿ, ದಕ್ಷಿಣ ಆಫ್ರಿಕದಲ್ಲಿ ಬ್ರಿಟಿಷ್ ರಕ್ಷಣಾದಳವನ್ನು ಇಡುವ ಖರ್ಚಿನಲ್ಲಿ ಇಂಡಿಯಾ ಭಾಗವಹಿಸಬೇಕೆಂಬುದು ಅನ್ಯಾಯವಾದ, ಅವಿವೇಕಯುತವಾದ, ಎಂದೂ ಕೇಳದ, ಕೇಳಿಕೆಯಾಗಿತ್ತು.

ಈ ಚಳವಳಿಯ ಮಧ್ಯೆ ದಾದಾಭಾಯಿ ದಕ್ಷಿಣ ಆಫ್ರಿಕದ ಭಾರತೀಯರ ಸಮಸ್ಯೆಯನ್ನು ಪರಿಶೀಲಿಸುತ್ತಿದ್ದನು. ಮದ್ಯಪಾನ ನಿರೋಧಕ ಚಳವಳಿಯಲ್ಲೂ ಅಫೀಮು ವ್ಯಾಪಾರ ನಿರೋಧ ವಿಷಯದಲ್ಲೂ ತೀವ್ರವಾದ ಆಸಕ್ತಿಯನ್ನು ವಹಿಸುತ್ತಿದ್ದನು. ಅಲ್ಲದೆ ಚುನಾವಣೆಯ ಹೋರಾಟಕ್ಕೂ ನಿಂತಿದ್ದನು. ಅವನ ವಯಸ್ಸಿನಲ್ಲಿ ಇಷ್ಟೆಲ್ಲ ಕೆಲಸಗಳಲ್ಲಿ ತೊಡಗುವುದು ಸಾಹಸವೆ ಸರಿ. ದೇಶಬಾಂಧವರಿಗೆ ಅವನಲ್ಲಿ ಗೌರವ ಹೆಚ್ಚುತ್ತಿದ್ದುದು ಸಹಜವಾಗಿತ್ತು. ಅವನ ಜನ್ಮದಿನವನ್ನು 'ದಾದಾಭಾಯಿ ದಿನ'ವಾಗಿ ಇಂಡಿಯ ಇಂಗ್ಲೆಂಡ್ ಎರಡೂ ದೇಶಗಳಲ್ಲಿ ಆಚರಿಸಬೇಕೆಂದು ನಿರ್ಧರವಾಯಿತು. ೧೯೦೩ ರ ಸೆಪ್ಟಂಬರ್ ೪ ರಲ್ಲಿ ಮೊದಲನೆಯ ಜನ್ಮ ದಿನೋತ್ಸವ ನಡೆಯಿತು. ಅಂದಿನಿಂದ ಅವನ ಜೀವಮಾನವಿರುವವರೆಗೂ ಉತ್ಸವವನ್ನು ಉತ್ಸಾಹದಿಂದ ಆಚರಿಸುತ್ತಿದ್ದರು.

೧೯೦೦ ರ ನವೆಂಬರ್ ೨೮ ರಲ್ಲಿ ದಾದಾಭಾಯಿಯ ಭಾವಚಿತ್ರವನ್ನು ರಾನಡೆ ಅನಾವರಣ ಮಾಡಿದನು. ಆಸಂದರ್ಭದಲ್ಲಿ ಮಾತಾಡುತ್ತ ಅವನು ದಾದಾಭಾಯಿಯನ್ನು ಬ್ರಿಟಿಷ್ ಶಿಕ್ಷಣದ ಅತ್ಯುತ್ತಮ ಫಲವೆಂದು ವರ್ಣಿಸಿದನು. ಇಂಗ್ಲಿಷ್ ಜನರು ಅವನ ವಿಷಯದಲ್ಲಿ ಹೆಮ್ಮೆಪಡಬೇಕೆಂದನು. ದಾದಾಭಾಯಿಯ ಭಾಷಣಗಳಲ್ಲಾಗಲಿ ಮಾತುಗಳಲ್ಲಾಗಲಿ, ಇಲ್ಲದ ಒಡಕನ್ನು ಹುಟ್ಟಿಸಿತೆಂದು ಹೇಳಬಹುದಾದ ಒಂದು ವಾಕ್ಯವಾಗಲಿ ಪದವಾಗಲಿ ದೊರೆಯಲಾರದು ಎಂದು ತಿಳಿಸಿದನು. ಅದು ರಾನಡೆ ನಿರ್ವಹಿಸಿದ ಕೊನೆಯ ಸಾರ್ವಜನಿಕ ಸಭೆಯಾಗಿತ್ತು. ಅಕಾಲ ಮೃತ್ಯು ಆ ಪ್ರಾಜ್ಞನನ್ನು ಕೊಂಡೊಯ್ಯಲಿತ್ತು.

## ೨೯. ಸ್ವರಾಜ್ಯವೊಂದೇ ಪರಿಹಾರಕ

೧೯೦೫ರ ಆದಿಭಾಗದಲ್ಲಿ ಲಾರ್ಡ್ ಕರ್ಜನ್ ತನ್ನ ಜೀವಮಾನದಲ್ಲೇ ದೊಡ್ಡದಾದ ಅವಿವೇಕವನ್ನು ಮಾಡಿದನು. ಕತ್ತಿಯ ಏಟಿಗಿಂತ ಮಾತಿನ ಏಟು ಜೋರು ಎಂಬ ನಾಣ್ಣುಡಿಯನ್ನು ಮರೆತು ಅವನು, ಕಲ್ಕತ್ತ ವಿಶ್ವವಿದ್ಯಾನಿಲಯದ ಘಟಿಕೋತ್ಸವ ಭಾಷಣದಲ್ಲಿ ಭಾರತೀಯರನ್ನು ಅನೃತ ಭಾಷಿಗಳೆಂದು ವರ್ಣಿಸಿದನು.

ಆಗ ಇಂಡಿಯಾದಲ್ಲಿ ಎಲ್ಲೆಲ್ಲೂ ಹೊಸಜೀವಕಳೆ ತುಂಬುತ್ತಿತ್ತು. ಶಿಕ್ಷಿತರಾದ ಭಾರತಪುತ್ರರು ದೇಶದ ಹಿಂದಿನ ವೈಭವವನ್ನು ನೆನೆದು ಪುನಃ ಇಂಡಿಯ ನಾಗರಿಕ ಪ್ರಪಂಚದಲ್ಲಿ ಮಹತ್ತ್ವದ ಸ್ಥಾನವನ್ನು ಹೊಂದುವ ಕಾಲವನ್ನು ಕಾತರದಿಂದ ನಿರೀಕ್ಷಿಸುತ್ತಿದ್ದರು. ಮಾನವಕುಲಕ್ಕೆ ಮಹಾತತ್ತ್ವ ಶಾಸ್ತ್ರಗಳನ್ನೂ ಕಲಾಸಾಹಿತ್ಯಗಳನ್ನೂ ನೀಡಿದ ದೇಶದ ಜನರನ್ನು ಇಂಥ ಸಂದರ್ಭದಲ್ಲಿ ಅವಮಾನಿಸಿದ್ದು, ದಾದಾಭಾಯಿ ಹೇಳಿದಂತೆ, ಬ್ರಿಟಿಷ್ ಸಾಮ್ರಾಜ್ಯದ ಕೇಂದ್ರದಲ್ಲಿ ಮದ್ದಿನ ಉಗ್ರಾಣವನ್ನು ಹೊತ್ತಿಸಿದಂತಾಯಿತು.

ನಿಂದಾಪರವಾದ ಆಭಾಷಣವನ್ನು ಪ್ರತಿಭಟಿಸಲು ಇಡೀದೇಶವೇ ಒಬ್ಬ ಮನುಷ್ಯನಂತೆ ಎದ್ದು ನಿಂತಿತು. ಅಧಿಕಾರಾವಧಿಯ ಆರಂಭದಲ್ಲಿ ಔದಾರ್ಯ, ಸಹಾನುಭೂತಿ, ರಾಜನೀತಿಜ್ಞತೆಗಳಿಗೆ ಹೆಸರಾದ ಆ ವೈಸರಾ

ಯನ್ನು ಎಲ್ಲ ವಿಧದಲ್ಲಿಯೂ ಜನ ಖಂಡಿಸಿದರು. ಕಲ್ಕತ್ತ, ಬೊಂಬಾಯಿ, ಮದರಾಸು, ಲಾಹೋರ್, ಅಲಹಾಬಾದ್ ಮೊದಲಾದ ಅನೇಕಸ್ಥಳಗಳಲ್ಲಿ ಭಾರೀಸಭೆಗಳು ಸೇರಿದವು. ರಾಜಕೀಯದಲ್ಲಿ ಎಂದೂ ಸೇರದವರೂ, ಕಾಂಗ್ರೆಸ್ ಚಳವಳಿಯನ್ನು ದ್ವೇಷಿಸುತ್ತಿದ್ದವರೂ, ಈಗ ಕಾಂಗ್ರೆಸ್ ಜನ ರೊಡನೆ ಸೇರಿ, ಭಾರತೀಯರ ಮೇಲೆ ಬಂದ ದೋಷಾರೋಪಣೆಯನ್ನು ಉಗ್ರವಾಗಿ ಪ್ರತಿಭಟಿಸಿದರು.

ದೇಶಬಾಂಧವರ ಅಸಮಾಧಾನದಲ್ಲಿ ದಾದಾಭಾಯಿಯೂ ಪಾಲುದಾರ ನಾದನು. ಆದರೆ ದೇಶದ ಚೈತನ್ಯ ಬುಗ್ಗೆಯಂತೆ ಏರಿದ್ದನ್ನು ಕಂಡು ಹರ್ಷಚಿತ್ತನಾದನು. ಇದುವರೆಗೆ ಅವನ ಕೂಗು ಅರಣ್ಯ ರೋದನವಾಗಿತ್ತು. ಕೆಲವು ಜನ ಮಾತ್ರ ಚಳವಳಿಗಳಲ್ಲಿ ಭಾಗವಹಿಸುತ್ತಿದ್ದರು. ಈಗ ಇಡೀ ದೇಶವೇ ಆಡಳಿತದ ರೀತಿ ನೀತಿಗಳಿಗೆ ವಿರುದ್ಧವಾಗಿ ನಿಂತಿತ್ತು. ಬ್ರಿಟಿಷ್ ಇಂಡಿಯಾದ ಚರಿತ್ರೆಯಲ್ಲಿ ಇಂಥ ಘಟನೆ ಹಿಂದೆ ಸಂಭವಿಸಿರಲಿಲ್ಲ. ಅವನು ಚೆಲ್ಲಿದ ದೇಶಾಭಿಮಾನದ ಬೀಜ ಮೊಳೆತು ಗಿಡವಾಗಿ ಫಲ ಬಿಡುತ್ತಿತ್ತು: ನವಭಾರತ ಉದಯವಾಗುತ್ತಿತ್ತು. ತನ್ನ ಹಕ್ಕುಗಳ ಅರಿವಾಗಿತ್ತು ಭಾರ ತಕ್ಕೆ. ಭಾರತದ ಧಮನಿಯಲ್ಲಿ ನೂತನ ಸ್ವತಂತ್ರ ಭಾವ ಮಿಡಿಯುತ್ತಿತ್ತು. ಕರ್ಜನ್ನನ ಆಡಳಿತದಲ್ಲಿ ಸಾರ್ವಜನಿಕ ಅಸಮಾಧಾನ ಅಪಾಯ ಸ್ಥಿತಿಯನ್ನು ಮುಟ್ಟಿತ್ತು. ಜನ ವೈಸ್‌ರಾಯನನ್ನು ಹಿಂದಕ್ಕೆ ಕರೆಸಿಕೊಳ್ಳಬೇಕೆಂದು ತಗಾದೆ ಮಾಡಿದರು. ಅದಕ್ಕೆ ದಾದಾಭಾಯಿಯ ನೆರವು ಇದ್ದಂತೆ ತೋರ ಲಿಲ್ಲ. ವ್ಯಕ್ತಿಗಳ ಬಗೆಗೆ ಅವನಿಗೆ ದ್ವೇಷವಿರಲಿಲ್ಲ. ಕೆಟ್ಟ ಆಡಳಿತಕ್ಕೆ ದಾರಿ ಮಾಡುವ ಪದ್ಧತಿಯನ್ನು ನಿರ್ಮೂಲ ಮಾಡುವುದು ಅವನ ಗುರಿ ಯಾಗಿತ್ತು. ಆದ್ದರಿಂದ, ಮೂಲ ತತ್ತ್ವವನ್ನು ಗಮನಿಸಬೇಕಾಗಿಯೂ ಆಡಳಿತ ಪದ್ಧತಿಯನ್ನು ಕೂಡಲೆ ಬದಲಾಯಿಸುವಂತೆ ಕೇಳಬೇಕಾಗಿಯೂ ದೇಶ ಬಾಂಧವರಿಗೆ ಸಲಹೆ ಮಾಡಿದನು. ಜನಗಳ ಮತ್ತು ಆಡಳಿತಗಾರರ ಮುಂದೆ ಎರಡೇ ದಾರಿಗಳಿದ್ದವು—ದೇಶದ ಆಡಳಿತವನ್ನು ಶಾಂತ ರೀತಿಯಲ್ಲಿ ಬದಲಾವಣೆ ಮಾಡುವುದು, ಅಥವಾ ಕ್ರಾಂತಿಯ ರೀತಿಯನ್ನು ಅನುಸರಿಸು ವುದು.

೧೯೦೪ ರ ಮಾರ್ಚಿ ೧೮ ರಲ್ಲಿ ಪೆಂಗ್ ಮತ್ತು ಬೆಕೆನ್‌ಹ್ಯಾಮ್ ಸಹ

ಕಾರ ಸಂಘದ ಸದಸ್ಯರನ್ನುದ್ದೇಶಿಸಿ ದಾದಾಭಾಯಿ "ಇಂಡಿಯಾ ದೇಶದಲ್ಲಿ ಕೆಟ್ಟ ಆಡಳಿತ" ಎಂಬ ವಿಷಯವಾಗಿ ಮಾತಾಡುತ್ತ ಹೀಗೆ ಹೇಳಿದನು. ಭಾರತೀಯ ಸಮಾಜದಲ್ಲಿ ಒಂದು ಕಡೆ ಯೂರೋಪಿನ ಸಾಹಿತ್ಯ ನಾಗರಿಕತೆ ಪ್ರಗತಿಗಳನ್ನು ಪ್ರವೇಶ ಮಾಡಿಸುವುದೂ ಇನ್ನೊಂದು ಕಡೆ ಯೂರೋಪಿಯನ್ ಆಡಳಿತಗಾರರನ್ನು ನಿರ್ಮೂಲ ಮಾಡಿದಲ್ಲದೆ, ನಿಮ್ಮ ದೇಶದ ಆಡಳಿತದಲ್ಲಿ ನೀವು ಪಾಲುಗೊಳ್ಳುವ ಸಂಭವವಿಲ್ಲವೆಂದು ಹೇಳುವುದೂ ವಿವೇಕದ ಮಾರ್ಗವಲ್ಲ. ಇಂಗ್ಲೆಂಡು ತನ್ನ ಸಾಮ್ರಾಜ್ಯವನ್ನು ವಿಸ್ತರಿಸುವ ಯೋಚನೆಯಲ್ಲಿರುವಾಗ, ಅದಕ್ಕೆ ಸಾಮ್ರಾಜ್ಯವೆಂಬ ಹೆಸರನ್ನು ತಂದ ಭೂಭಾಗದಲ್ಲಿಯೇ ಕ್ರಾಂತಿಯೇಳಬಹುದು.

ಜೂನ್ ೧ ರಲ್ಲಿ ಲಂಡನ್ ಇಂಡಿಯನ್ ಸೊಸೈಟಿಯ ಆಶ್ರಯದಲ್ಲಿ ಮಾತಾಡುತ್ತ ಸ್ವರಾಜ್ಯದ ಕೇಳಿಕೆಯನ್ನು ಮುಂದಿಟ್ಟನು.

ಈಗಿನ ನಿಂದಾಸ್ಪದವಾದ, ಬೂಟಾಟಿಕೆಯ ಮತ್ತು ವಿನಾಶಕರವಾದ ಆಡಳಿತ ಪದ್ಧತಿಯನ್ನು ಕೂಡಲೆ ಶಾಂತಿಯುತವಾದ ಕ್ರಾಂತಿಯಿಂದ ಬದಲಾಯಿಸದಿದ್ದರೆ ಅದು ಸಾಮ್ರಾಜ್ಯವನ್ನೇ ಒಡೆಯುತ್ತದೆ. ಆ ವಿನಾಶಕ್ಕೆ ಒಂದೇ ಒಂದು ಪರಿಹಾರಕಮಾರ್ಗವಿದೆ. ಬ್ರಿಟಿಷ್‌ಸಾರ್ವಭೌಮತ್ವದ ಆಶ್ರಯದಲ್ಲಿ ಸ್ವರಾಜ್ಯ ಪದ್ಧತಿಯನ್ನು ಸ್ಥಾಪಿಸುವುದೇ ಆ ಪರಿಹಾರಮಾರ್ಗ. ತಮ್ಮ ಅಜನ್ಮ ಸಿದ್ಧವಾದ ಮತ್ತು ವಚನದತ್ತವಾದ ಬ್ರಿಟಿಷ್ ಪೌರತ್ವದ, ಸ್ವರಾಜ್ಯದ ಹಕ್ಕನ್ನು ಬಿಡದೆ ಕೇಳುತ್ತಲೇ ಇರಬೇಕೆಂದು ನಾನು ಭಾರತೀಯರನ್ನು ಶ್ರದ್ಧಾಪೂರ್ವಕವಾಗಿ ಒತ್ತಾಯಪಡಿಸುತ್ತೇನೆ.

ಇಂಡಿಯದ ಕುಂದುಕೊರತೆಗಳ ಕಡೆಗೆ ಬ್ರಿಟಿಷ್ ಜನರ ಗಮನವನ್ನು ಸೆಳೆಯುವುದಕ್ಕಾಗಿ ದಾದಾಭಾಯಿ ಶಾಶ್ವತವಾದ ಹೇಳಿಕೆಯೊಂದನ್ನು ತಯಾರಿಸಿ ಅದು ಸ್ನೇಹಪರವಾದ ಪತ್ರಿಕೆಗಳಲ್ಲಿ ಪ್ರಕಟವಾಗುವಂತೆ ವ್ಯವಸ್ಥೆ ಮಾಡಿದನು. 'ಇಂಡಿಯ' ಪತ್ರಿಕೆಯಲ್ಲಿ ಕೆಳಗಿನ ಹೇಳಿಕೆ ಬಿಡದೆ ಪ್ರಕಟವಾಗುತ್ತಿತ್ತು.

ಜನರ ಉತ್ಪನ್ನವನ್ನು ಸುಲಿಗೆಮಾಡುವುದರ ಮೂಲಕ ಇಂಡಿಯದಲ್ಲಿ ಸದ್ಯದಲ್ಲಿ ನಡೆಯುತ್ತಿರುವ ಬ್ರಿಟಿಷ್ ಆಡಳಿತ ಪದ್ಧತಿ ಸುಮಾರು ೨೦೦,೦೦೦,೦೦೦ ಜನರಲ್ಲಿ ಕ್ಷಾಮ, ಪ್ಲೇಗು, ಹೊಟ್ಟೆಗಿಲ್ಲದಿರುವಿಕೆ ಇವುಗಳನ್ನು ಉದ್ದೇಶ ಪೂರ್ವಕವಾಗಿಯೇ ಉಂಟುಮಾಡುತ್ತಿದೆ; ಅಲ್ಲದೆ ಸದ್ಯದ ಸರಕಾರ ಮರ್ಯಾದೆಯಿಲ್ಲದೆ, ಪಾರ್ಲಿಮೆಂಟಿನ ಪವಿತ್ರವಾದ ವಚನಗಳನ್ನೂ

ಬ್ರಿಟಿಷ್ ಜನರ ಪ್ರಾಮಾಣಿಕವಾದ ನೀತಿಯನ್ನೂ ಮುರಿಯುತ್ತಿದೆ.

ಆದ್ದರಿಂದ ಅನ್ಯಾಯವಾದ ಸದ್ಯದ ಆಡಳಿತ ಪದ್ಧತಿಯನ್ನು ಮುಕ್ತಾಯ ಮಾಡಿ, ವಸಾಹತುಗಳಲ್ಲಿರುವಂತೆ ಬ್ರಿಟಿಷ್ ಸಾರ್ವಭೌಮತ್ವದ ಆಶ್ರಯದಲ್ಲಿ, ಸ್ವರಾಜ್ಯವನ್ನು ಸಾಧ್ಯವಾದಷ್ಟು ಶೀಘ್ರವಾಗಿ ಸ್ಥಾಪಿಸಲು, ಪ್ರಾಮಾಣಿಕವಾದ ಕಾರ್ಯಕ್ರಮಗಳನ್ನು ಕೈಕೊಳ್ಳುವಂತೆ ತಮ್ಮ ಸರಕಾರವನ್ನು ಒತ್ತಾಯಪಡಿಸುವುದು ಬ್ರಿಟಿಷ್ ಜನರ ಕರ್ತವ್ಯವಾಗಿದೆ. ಹಾಗೆ ಮಾಡುವುದು ಅವರ ಹಿತಕ್ಕಾಗಿಯೂ ಒಳ್ಳೆಯದೇ.

೧೯೦೪ ರ ಆಗಸ್ಟ್ ೧೪ ರಿಂದ ೨೦ ರ ವರೆಗೆ ಆಮ್‌ಸ್ಟರ್‌ಡಾಂನಲ್ಲಿ ಅಂತರರಾಷ್ಟ್ರೀಯ ಸಮಾಜಸ್ವಾಮ್ಯವಾದೀ ಕಾಂಗ್ರೆಸ್ಸು ಸೇರಿತು. ವಸಾಹತು ನೀತಿಯನ್ನು ಚರ್ಚಿಸುವುದಕ್ಕಾಗಿ ಪ್ರಪಂಚದ ನಾನಾ ಭಾಗಗಳಿಂದ ಪ್ರತಿನಿಧಿಗಳು ಬಂದಿದ್ದರು. ದಾದಾಭಾಯಿಯನ್ನು ಬ್ರಿಟಿಷ್ ಇಂಡಿಯದ ಪ್ರತಿನಿಧಿಯನ್ನಾಗಿ ಗೌರವದಿಂದ ಸ್ವಾಗತಿಸಿದರು. ಆಗಸ್ಟ್ ೧೭ ರಲ್ಲಿ ನಡೆದ ಅಧಿವೇಶನದಲ್ಲಿ ಬ್ರಿಟಿಷ್ ಪ್ರತಿನಿಧಿಯು ಇಂಡಿಯಾ ಪ್ರಶ್ನೆಯನ್ನು ಎತ್ತಿದನು. ಇಂಡಿಯಾದಲ್ಲಿನ ಆಡಳಿತ ಪದ್ಧತಿಯನ್ನು ಖಂಡಿಸಿ ಆತನು ಸೂಚಿಸಿದ ನಿರ್ಣಯ ದಾದಾಭಾಯಿ ಅನೇಕ ಸಭೆಗಳಲ್ಲಿ ಸೂಚಿಸುತ್ತಿದ್ದ ನಿರ್ಣಯದಂತೆಯೆ ಇತ್ತು. ಆ ನಿರ್ಣಯದಲ್ಲಿ ಭಾರತೀಯರ ಸುಲಿಗೆ, ಇಂಡಿಯದಿಂದ ಐಶ್ವರ್ಯ ಪರದೇಶಕ್ಕೆ ಹರಿದುಹೋಗುತ್ತಿರುವುದು, ದೇಶದ ಜನರ ಬಡತನ, ಸ್ವರಾಜ್ಯ ಸ್ಥಾಪನೆಗೆ ಒತ್ತಾಯ ಈ ವಿಷಯಗಳೆಲ್ಲ ಸೂಚಿತವಾಗಿದ್ದವು.

ಅಧಿವೇಶನದ ಅಧ್ಯಕ್ಷನು ದಾದಾಭಾಯಿಯನ್ನು ಸಭೆಗೆ ಪರಿಚಯ ಮಾಡಿಕೊಟ್ಟನು. ದಾದಾಭಾಯಿ ಭಾಷಣಮಾಡುವುದಕ್ಕೆ ಮುಂಚೆ, ದುಃಖಪಡುತ್ತಿರುವ ಕೋಟ್ಯಂತರ ಜನರ ಗೌರವಾರ್ಥವಾಗಿ ಮತ್ತು ಅವರಲ್ಲಿ ಸಹಾನುಭೂತಿ ತೋರಿಸುವುದಕ್ಕಾಗಿ, ಸಭೆ ಮೌನವಾಗಿ ಎದ್ದು ನಿಲ್ಲಬೇಕಾಗಿ ಅಧ್ಯಕ್ಷನು ತಿಳಿಸಿದನು. ದಾದಾಭಾಯಿ ನಿಧಾನವಾಗಿ ವೇದಿಕೆಯ ಕಡೆಗೆ ಹೋಗುತ್ತಿದ್ದಂತೆ, ಅಲ್ಲಿದ್ದ ಸುಮಾರು ಸಾವಿರ ಮಂದಿ ಪ್ರತಿನಿಧಿಗಳು ಎದ್ದು ನಿಂತು ತಮ್ಮ ಗೌರವವನ್ನು ಸೂಚಿಸಿ, ಜಯಕಾರಗಳಿಂದ ಅವನಿಗೆ ಅದ್ಭುತ ಸ್ವಾಗತ ನೀಡಿದರು. ಯೂರೋಪಿನ ದೀನ ಸ್ತ್ರೀಪುರುಷರು ಇಂಡಿಯದ ದುಃಖಪೂರ್ಣ ಜನರಿಗಾಗಿ ತೋರಿದ ಅನುಕಂಪದ ಆ ದೃಶ್ಯ

ಭವ್ಯವಾಗಿ ಹೃದಯಸ್ಪರ್ಶಿಯಾಗಿತ್ತು.

ಅನುವಾದವಾಗುವುದಕ್ಕೆ ಮುಂಚೆ ದಾದಾಭಾಯಿಯ ಭಾಷಣ ಸಭೆಗೆ ಅರ್ಥವಾಗಲಿಲ್ಲ. ಆದರ ಸಭಿಕರ ಮೇಲೆ ಅವನ ಸೂಕ್ಷ್ಮವಾದ ರೂಪ ಲಕ್ಷಣಗಳೂ, ತೇಜಸ್ವಿಯಾದ ಮುಖವೂ, ನರೆಗೂದಲೂ, ಗಂಭೀರವಾದ ಆಕಾರವೂ ವಿಶೇಷಪರಿಣಾಮವನ್ನುಂಟುಮಾಡಿದವು. ಅವನ ಭಾಷಣವನ್ನು ಜರ್ಮನ್ ಫ್ರೆಂಚ್ ಭಾಷೆಗಳಿಗೆ ತರ್ಜುಮೆಮಾಡಿ ತಿಳಿಸಲು ಪ್ರತಿನಿಧಿಗಳು ಅವನ ಅಭಿಪ್ರಾಯಗಳನ್ನು ಹೃತ್ಪೂರ್ವಕವಾಗಿ ಅನುಮೋದಿಸಿದರು. ಅವನ ಭಾಷಣದ ವಿಷಯ 'ಇಂಡಿಯದ ಸುಲಿಗೆ ಮತ್ತು ಭಾರತೀಯರ ಬಡತನ' ವಾಗಿತ್ತು. ಪರಿಹಾರ ಮಾರ್ಗವನ್ನು ಸೂಚಿಸುತ್ತ ದಾದಾಭಾಯಿ:

ಅದು ಕೂಲಿಕಾರರ ಕೈಯಲ್ಲಿದೆ. ಇಂಡಿಯದ ಪ್ರಜಾಸಂಖ್ಯೆಯಲ್ಲಿ ಕೂಲಿಕಾರರು ಅಧಿಕಾಂಶದಲ್ಲಿ ಇದ್ದಾರೆ. ಅವರು ಇಡೀ ಪ್ರಪಂಚದ ಕೂಲಿಕಾರರಲ್ಲಿ ಮನವಿಮಾಡಿಕೊಳ್ಳುತ್ತಾರೆ; ಮತ್ತು ಅವರ ಸಹಾನುಭೂತಿಯನ್ನೂ ಸಹಾಯವನ್ನೂ ಕೋರುತ್ತಾರೆ. ಇಂಡಿಯದಲ್ಲಿ ನಡೆದಿರುವ ಅನ್ಯಾಯಗಳನ್ನು ಅವರು ಖಂಡಿಸಲಿ. ಪರಿಹಾರ ಬ್ರಿಟಿಷ್ ಜನರ ಕೈಯಲ್ಲಿದೆ. ಇಂಡಿಯಕ್ಕೆ ಕೊಟ್ಟಿರುವ ವಚನಗಳನ್ನು ಪಾಲಿಸುವಂತೆ ಅವರು ತಮ್ಮ ಸರಕಾರವನ್ನು ಒತ್ತಾಯಪಡಿಸಬೇಕು. ಇಂಡಿಯಕ್ಕೆ ಸ್ವರಾಜ್ಯವನ್ನು ಕೊಡುವುದೊಂದೇ ಪರಿಹಾರ.

ನಿರ್ಣಯ ವಿರೋಧವಿಲ್ಲದೆ ಅಂಗೀಕೃತವಾಯಿತು. ತಮ್ಮ ಎದುರಿಗಿರುವ ಗೌರವಸ್ಥನಾದ ವ್ಯಕ್ತಿಯಂತೆ ಭಾರತೀಯನು ಸಂಸ್ಕೃತನೂ ಚಿತ್ತಾಕರ್ಷಕನೂ ಆಗಿರಬಹುದೆಂದು ಸಭಿಕರು ತಿಳಿದಿರಲಿಲ್ಲ.

ದಾದಾಭಾಯಿ ಸಮಾಜಸ್ವಾಮ್ಯವಾದಿಗಳ ಸಭೆಯಲ್ಲಿ ಭಾಗವಹಿಸಿದ್ದರಿಂದ ಇಂಡಿಯದಲ್ಲಿ ಕೊಂಚ ಕೋಲಾಹಲವಾಯಿತು. ಕೂಲಿಕಾರರ ಬಲ ದಿನೇ ದಿನೇ ಹೆಚ್ಚುತ್ತಿತ್ತು. ಇಂಡಿಯದ ಜನರು ಆ ಶಕ್ತಿಯನ್ನು ತಮ್ಮ ಕಡೆಗೆ ಒಲಿಸಿಕೊಳ್ಳುವುದು ಅಗತ್ಯವಾಗಿತ್ತು. ಈ ಯೋಚನೆ ಯಾವುದೂ ಹಾಗಿರಲಿ, ದಾದಾಭಾಯಿಗೆ ಕೂಲಿಕಾರರಲ್ಲಿ ಇದ್ದ ಸಹಜವಾದ ಸಹಾನುಭೂತಿ ಅವನನ್ನು ಅವರ ಕಡೆಗೆ ಎಳೆದಿತ್ತು.

ದಾದಾಭಾಯಿ ಕ್ರಮೇಣ ಖಂಡಿತವಾದಿಯಾಗುತ್ತಿದ್ದನು. ಬ್ರಿಟಿಷ್ ಆಡಳಿತ ದೋಷವನ್ನು ಕುರಿತ ಅವನ ವಿಮರ್ಶೆ ಕಟುವಾಗಿತ್ತು. ಅದು

ನಿರಾಶೆಯ ಫಲ. ಆದರೂ ಬ್ರಿಟಿಷರ ನ್ಯಾಯ ಪಕ್ಷಪಾತ ಬುದ್ಧಿಯಲ್ಲಿ ಅವನಿಗೆ ನಂಬಿಕೆ ತಪ್ಪಿರಲಿಲ್ಲ; ಕಾಂಗ್ರೆಸಿನ ನೀತಿಯಾದ ವ್ಯವಸ್ಥಾ ಬದ್ಧ ಚಳವಳಿಯಲ್ಲಿ ವಿಶ್ವಾಸವಿತ್ತು. ವೆಡ್ಡರ್‌ಬರ್ನ್ ದಾದಾಭಾಯಿಗೆ ಬರೆದ ಪತ್ರವೊಂದರಲ್ಲಿ, ತರುಣರಲ್ಲಿ ಹೆಚ್ಚುತ್ತಿರುವ ಅಸಹನೆಯ ವಿಷಯದಲ್ಲಿ ಕಾತರ ವನ್ನು ವ್ಯಕ್ತಪಡಿಸಿದ್ದನು. ಕ್ರಾಂತಿಯಿಲ್ಲದೆ ಬ್ರಿಟಿಷರಿಂದ ನ್ಯಾಯ ದೊರೆಯು ವುದೆಂಬ ಭಾವ ಅವರಿಗೆ ಹಾಸ್ಯಾಸ್ಪದವಾಗಿತ್ತು. ಉತ್ತರವಾಗಿ ದಾದಾ ಭಾಯಿ ಹೇಳಿದನು: 'ಹಿರಿಯರಾದವರು ಬ್ರಿಟಿಷ್ ಸಂಸ್ಥೆಗಳ ಉದಾತ್ತ ಗುಣಗಳನ್ನು ಕಂಡು ಅವುಗಳಲ್ಲಿ ಮಮತೆಯುಳ್ಳವರಾಗಿದ್ದರು. ಆ ಮೊದಲ ಪ್ರೇಮವನ್ನು ಅವರು ಈಗ ಕೂಡಲೆ ತೊರೆಯಲಾರರು. ಹೊಸ ತಲೆ ಮೊರೆಯ ಜನಕ್ಕೆ ಆ ಬಗೆಯ ಮಮತೆಯೇನೂ ಇಲ್ಲ." ದಾದಾಭಾಯಿ ಆ ಜೀವಪರ್ಯಂತ ಮೊದಲ ಪ್ರೇಮದಲ್ಲಿ ನಿಷ್ಠೆಯುಳ್ಳವನಾಗಿದ್ದನು.

ಲಾರ್ಡ್ ಕರ್ಜನ್ ಹೆಚ್ಚು ಹೆಚ್ಚು ಅಪ್ರಿಯನಾಗುತ್ತಿದ್ದನು. ಬಂಗಾಳ ಪ್ರಾಂತವನ್ನು ಎರಡು ಭಾಗವಾಗಿ ಒಡೆದಿದ್ದರಿಂದ ಇಡೀ ಜನಾಂಗವೇ ಅವ ನಿಗೆ ವಿರೋಧವಾಗಿತ್ತು. ಭಾರತೀಯರ ಭಾರೀ ಪ್ರತಿಭಟನಾ ಸಭೆಯೊಂದು ಲಂಡನ್ನಿನಲ್ಲಿ ಸೇರಿತು. ದಾದಾಭಾಯಿ ಅದರ ಅಧ್ಯಕ್ಷತೆ ವಹಿಸಿ ನುಡಿದನು.

ಭಾರತೀಯರು ಈಗ ಅವರು ಅನುಭವಿಸುತ್ತಿರುವ ಆಡಳಿತ ಪದ್ಧತಿ ಕೊನೆಗೊಳ್ಳಬೇಕೆಂದು ಒಮ್ಮತದಿಂದ, ಮನಃಪೂರ್ವಕವಾಗಿ, ಸ್ಪಷ್ಟವಾಗಿ, ಪ್ರಕಟಿಸಿದ್ದಾರೆ. ಅದರ ಅರ್ಥವೇನೆಂಬುದನ್ನು ನೋಡೋಣ: ನಮ್ಮ ಆಡಳಿತಗಾರರು—ಅಧಿಕಾರಿಗಳು—ನಮ್ಮದು ಸ್ವಾಡಳಿತವುಳ್ಳ ದೇಶವಾಗುವ ಸಂಭವ ಇಲ್ಲನೆಂದು ಹೇಳುತ್ತಾರೆ; ಅದಕ್ಕೆ ಸಿದ್ಧರಾಗುವುದಕ್ಕೂ ಅವರು ನಮಗೆ ಅವಕಾಶ ಕೊಡುವುದಿಲ್ಲವಂತೆ. ಭಾರತೀಯರಾದರೋ ಈಗ, ಮೊದಲಬಾರಿಗೆ, ಎಚ್ಚತ್ತು, ಹಾಗೆ ಆಗಲಾರದೆಂದು ಘೋಷಿಸಿದ್ದಾರೆ.

ಹೀಗೆ ಆಳುವವರ ಮತ್ತು ಜನರ ಮಧ್ಯೆ ಬಹಿರಂಗವಾಗಿ ಯುದ್ಧ ಘೋಷಣೆಯಾದರೆ ಪರಿಣಾಮವೇನು? ಜಾನ್ ಮ್ಯಾಲ್ಕೊಮ್ ಕೆಡುಕಿ ನಲ್ಲಿಯೇ ಸಾಮ್ರಾಜ್ಯದ ವಿನಾಶದ ಬೀಜಗಳು ಹುದುಗಿವೆ—ಎಂದು ಭವಿಷ್ಯ ನುಡಿದಿದ್ದನು.

ಭಾರತೀಯರ ಮೇಲೆ ಕರ್ತವ್ಯ ಭಾರವೊಂದಿದೆ (ಎಂದು ದಾದಾಭಾಯಿ ಹೇಳಿದನು.) ಗುಲಾಮರಂತೆ ತಾವು ಆಳಲ್ಪಡುವುದಿಲ್ಲವೆಂದು ಅವರು ಘೋಷಿ

ಸಿದ್ದಾರೆ; ಈಗ ಅವರು ತಮ್ಮ ದೃಢತೆಯನ್ನು ತೋರಿಸಲಿ. ಇಂಡಿಯಾ ಸ್ವರಾಜ್ಯವನ್ನು ಹೊಂದಲು ನಿರ್ಧರಿಸಿದೆಯೆಂದು ಬ್ರಿಟಿಷರಿಗೆ ಮನವರಿಕೆಯಾದರೆ ಅವರು ಬಿಟ್ಟುಕೊಡುತ್ತಾರೆ ಎಂಬುದರಲ್ಲಿ ನನಗೆ ಸ್ವಲ್ಪವೂ ಸಂಶಯವಿಲ್ಲ. ಆ ಪವಿತ್ರವಾದ ದಿನವನ್ನು ನೋಡಲು ನಾನು ಬದುಕಿಲ್ಲದಿರಬಹುದು, ಆದರೆ ಆ ಕಾರ್ಯಸಿದ್ಧಿಯಾಗುವುದೆಂಬ ವಿಷಯದಲ್ಲಿ ನಾನು ಆಸೆಯನ್ನು ತೊರೆದಿಲ್ಲ.

ಇಂಗ್ಲೆಂಡಿನಲ್ಲಿದ್ದ ಭಾರತೀಯರು ನವೆಂಬರ್ ೧೦ ನೆಯ ತಾರೀಕಿನ ದಿನ ದಾದಾಭಾಯಿ ಮತ್ತು ಗೋಖಲೆ ಅವರುಗಳಿಗೆ ಔತಣವಿತ್ತರು. ಗೋಖಲೆ ದಾದಾಭಾಯಿಯ ವಿಷಯವಾಗಿ ಪ್ರಸ್ತಾವಿಸುತ್ತ ಹೇಳಿದನು:

ಇಂಡಿಯಾ ದೇಶದ ಜನರ ಅಂತಃಕರಣದಲ್ಲಿ ಅಷ್ಟುದೊಡ್ಡ ಸ್ಥಳವನ್ನಾಕ್ರಮಿಸುವುದು, ಅದೂ ಅರ್ಧಶತಮಾನಕ್ಕಿಂತ ಹೆಚ್ಚುಕಾಲ, ಮತ್ತೊಬ್ಬರಿಗೆ, ಕಡೆಯ ಪಕ್ಷ ಕೆಲವು ಕಾಲವಾದರೂ—ಸಾಧ್ಯವಾಗಲಾರದು.

## ೩೦. ಬಿಡುವಿಲ್ಲದ ಬರೆಹ

ಬಾಯಿಗೆ ಹೇಗೆ ಬಿಡುವಿರಲಿಲ್ಲವೋ ಹಾಗೆಯೇ ದಾದಾಭಾಯಿಯ ಲೇಖಣಿಗೂ ಬಿಡುವಿರಲಿಲ್ಲ. ದೇಶದ ಹಿತಕ್ಕಾಗಿ ಜನಗಳಲ್ಲಿ ಅಥವಾ ಸಂಸ್ಥೆಗಳಲ್ಲಿ ಆಸಕ್ತಿ ಹುಟ್ಟಿಸುವ, ಅಥವಾ ಅವರ ಮೇಲೆ ಪ್ರಭಾವ ಬೀರುವ ಒಂದು ಅವಕಾಶವನ್ನೂ ಅವನು ಕಳೆದುಕೊಳ್ಳುತ್ತಿರಲಿಲ್ಲ. ಅವನು ಸರಕಾರದ ಯಾವುದಾದರೂ ದಬ್ಬಾಳಿಕೆಯ ಕಾರ್ಯವನ್ನು ಖಂಡಿಸುವದಕ್ಕಾಗಿಯೋ, ಅನ್ಯಾಯವನ್ನು ಬಹಿರಂಗಪಡಿಸುವುದಕ್ಕಾಗಿಯೋ, ಅಥವಾ ತಪ್ಪು ಅಭಿಪ್ರಾಯವನ್ನು ತಿದ್ದುವುದಕ್ಕಾಗಿಯೋ—ಪತ್ರಿಕೆಗಳಿಗೆ ಬರೆಯದ ದಿನವಿರಲಿಲ್ಲ. ಈ ಕಾಲಾವಧಿಯಲ್ಲಿ ಬರೆದ ಪತ್ರಗಳಲ್ಲಿ ಕೆಲವನ್ನು ನಿದರ್ಶನವಾಗಿ ಕೊಡಬಹುದು.

ಮಾರ್ಟಿನ್ ವುಡ್‌ಗೆ

ಏಪ್ರಿಲ್ ೪, ೧೯೯೭.

ನಮಗೆ ಇರುವ ಕುಂದು ಕೊರತೆಗಳು ಅಥವಾ ಅದರಲ್ಲಿ ಹತ್ತರಲ್ಲಿ ಒಂದು ಭಾಗ, ಇಂಗ್ಲಿಷರಿಗೆ ಇದ್ದಿದ್ದರೆ, ನಮಗಿಂತ ನೂರು ಪಾಲು ಹೆಚ್ಚಾಗಿ ಕಠಿನತರವಾದ ಮಾತುಗಳನ್ನು ಆಡುತ್ತಿದ್ದರಲ್ಲದೆ.... ಉಗ್ರವಾದ ಕಾರ್ಯಗಳಿಗೂ ನುಗ್ಗುತ್ತಿದ್ದರು.

ವಾಚಾನಿಗೆ

ಜುಲೈ ೨೭, ೧೯೦೫.

ಆಡಳಿತದ ಕೆಡುಕು ತೀರ ತೀವ್ರವಾಗಿ ಜನ ಎಲ್ಲವನ್ನೂ ತಿರಸ್ಕರಿಸುವಂತೆ ಆಗುವವರೆಗೆ ನಾವು ಕಚ್ಚುವುದಕ್ಕೆ ಸಿದ್ಧವಿಲ್ಲ, ನಿಜ. ಆದರೆ ಸದ್ಯಕ್ಕೆ ನಮ್ಮ ಆಯುಧ, ಆದಷ್ಟು ಗಟ್ಟಿಯಾಗಿ, ಮತ್ತು ಮೇಲಿಂದ ಮೇಲೆ ಬಗುಳುವುದು. ಸ್ವರಾಜ್ಯ ಬೇಕೇ ಬೇಕೆಂಬ ತಗಾದೆ ಯಾವಾಗಲೂ ನಡೆಯುತ್ತಿರಬೇಕು; ಅದರ ಕೂಗು ಇಂಡಿಯಾದಲ್ಲೆಲ್ಲ ಕೇಳುತ್ತಿರಬೇಕು.

ಹೈಂಡ್‌ಮನ್‌ಗೆ

ಅಕ್ಟೋಬರ್ ೧, ೧೯೦೪.

ನಮ್ಮ ಕೆಲಸದಲ್ಲಿ ಒಂದು ಅಂಶ ಅಗತ್ಯ—ಇಂಗ್ಲಿಷರೇ ಈಗಿನ ಪದ್ಧತಿಯ ಕೆಡುಕುಗಳನ್ನು ಹಳಿಯುತ್ತಿರ ಬೇಕು. ನಿನ್ನಂಥ ಒಬ್ಬ ಆಂಗ್ಲನು ರಾಜ್ಯ ವ್ಯವಸ್ಥೆಯನ್ನು ಹಳಿಯುವುದರಿಂದ ಬ್ರಿಟಿಷ್ ಜನರ ಮನಸ್ಸಿನ ಮೇಲೆ ಹೆಚ್ಚು ಪರಿಣಾಮವನ್ನು ಉಂಟುಮಾಡುತ್ತದೆ.

ಸರ್ ಜಾರ್ಜ್ ಬರ್ಡ್‌ವುಡ್‌ಗೆ

ಡಿಸೆಂಬರ್ ೩೦, ೧೯೦೪.

ನಾವು ಬಾಲ್ಯದಲ್ಲಿ ಸಂಗಾತಿಗಳಾಗಿ ಇದ್ದಿದ್ದರೆ, ನನ್ನನ್ನು ಕನ್ಸರ್ವೆಟಿವ್ ಆಗಿ ಮಾಡಬಹುದಾಗಿತ್ತು ಎಂದು ಯೋಚಿಸುತ್ತಿದ್ದೀಯಲ್ಲವೆ? ಪ್ರಾಯಶಃ ಸ್ಥಿತಿ ಬೇರೆ ರೀತಿಯಾಗುತ್ತಿತ್ತೇನೊ, ನಾನು ನಿನ್ನನ್ನು ರ್‍ಯಾಡಿಕಲ್ ಆಗಿ ಮಾಡಬಹುದಾಗಿತ್ತು!

ಬಿಷಪ್ ಆಫ್ ನ್ಯೂಯಾರ್ಕ್ ದಾದಾಭಾಯಿಗೆ

ಮೇ ೨೮, ೧೯೦೦.

ಇಂಗ್ಲಿಷರು ಇಂಡಿಯಾದೇಶವನ್ನು ಆಕ್ರಮಿಸಿ ಕೊಂಡಿರುವ ವಿಷಯದಲ್ಲಿ ನೀನು ಸಮರ್ಥಿಸುವ ಅಭಿಪ್ರಾಯವನ್ನು ನಾನು ಒಪ್ಪಲಾರೆ. ಇಂಗ್ಲಿಷರು ಬರುವವರೆಗೆ ಇಂಡಿಯಾದಲ್ಲಿ ಒಂದು ವ್ಯವಸ್ಥೆ ಇರಲಿಲ್ಲ, ಜೀವಕ್ಕಾಗಲಿ ಆಸ್ತಿಗಾಗಲಿ ರಕ್ಷಣೆ ಇರಲಿಲ್ಲ, ವ್ಯಕ್ತಿಸ್ವಾತಂತ್ರ್ಯವಿರಲಿಲ್ಲ. ದೊಡ್ಡ ಪದವಿಯಲ್ಲಿರುವ ದೇಶೀಯನೊಬ್ಬನು ಇತ್ತೀಚೆಗೆ ಮದರಾಸಿನಲ್ಲಿ ಹೇಳಿದಂತೆ: 'ನೀವು ಅಮೆರಿಕನರು ಯಾವುದಕ್ಕೆ ಹೋರಾಡಿದರೋ ಅವೆಲ್ಲ—ನೆಮ್ಮದಿಯಾದ ಜೀವ, ಸ್ವಾತಂತ್ರ್ಯ ಮತ್ತು ಸುಖಾನ್ವೇಷಣೆ,—ನಮಗೆ ದೊರೆತಿವೆ; ಬ್ರಿಟಿಷ್ ಅಧಿಕಾರ ವರ್ಗ ನಾಳೆಯೇ ಇಲ್ಲಿಂದ ಹೊರಟು ಬಿಡುವುದಾದರೆ ನಮ್ಮಲ್ಲಿ ನಾನಾ ಬಗೆಯಲ್ಲಿ ರಕ್ತಪಾತ ಅನಾಯಕತ್ವ ಅಂತರ್ಯುದ್ಧ ಆರಂಭವಾಗುತ್ತವೆ.' ನನ್ನ

ಅಭಿಪ್ರಾಯದಲ್ಲಿ ಈ ಬಾಧೆಗಳಿಂದ ರಕ್ಷಿತರಾದ ಜನ ಅವುಗಳ ವೆಚ್ಚವಹಿಸಲೇ ಬೇಕು.

ದಾದಾಭಾಯಿ ಬಿಷಪ್ ಆಫ್ ನ್ಯೂಯಾರ್ಕಿಗೆ

ಜೂನ್ ೧೦, ೧೯೦೦

ನೀನಾಗಲಿ ಮದರಾಸಿನ ಗೃಹಸ್ಥನಾಗಲಿ ಇನ್ನೊಂದು ವಿಚಾರವನ್ನು ಯೋಚಿಸಿರುವಂತಿಲ್ಲ. 'ನಾವು ವೆಚ್ಚ ವಹಿಸಬೇಕು' ಎಂದು ನೀನು ಹೇಳಿದ ವಿಚಾರದಲ್ಲಿ ಕೆಲವು ವಾಸ್ತವ ಸಂಗತಿಗಳನ್ನು ನಾನು ತಿಳಿಸಲೇ ಬೇಕಾಗಿದೆ. ಇಂಗ್ಲಿಷರ ಸಂಬಂಧ ಆರಂಭವಾದಾಗಿನಿಂದ, ಪೂರ್ತಿಯಾಗಿ ನಮ್ಮ ಖರ್ಚಿ ನಿಂದಲೇ, ಮುಖ್ಯವಾಗಿ ನಮ್ಮ ರಕ್ತಪಾತದಿಂದಲೇ, ಬ್ರಿಟಿಷ್ ಇಂಡಿಯಾ ಸಾಮ್ರಾಜ್ಯವನ್ನು ಕಟ್ಟನಿಲ್ಲಿಸಲು ಎಸಗಬೇಕಾದ ಎಲ್ಲ ಯುದ್ಧಗಳಿಗೆ ಮತ್ತು ಇತರ ಸಂದರ್ಭಗಳಿಗೆ ನಾವೇತೆರುವಂತೆ ಮಾಡಿದರಲ್ಲ ಅದಕ್ಕಾಗಿ ವೆಚ್ಚವಹಿಸ ಬೇಕಲ್ಲವೆ! ಅದಕ್ಕೆ ಬಂದ ಬಹುಮಾನವೇನು ?—ಗುಲಾಮಗಿರಿ, ಬಡತನ. ನಮ್ಮನ್ನು ಸುಲಿಗೆ ಮಾಡಿದ್ದಕ್ಕೆ ನಾವು ಕೊಡಬೇಕು, ನಮ್ಮ ದೇಶ ದಿಂದ ಕೋಟ್ಯಂತರ ವಸ್ತುಗಳನ್ನು ಬಿಡದೆ ಸಾಗಿಸಿದ್ದಕ್ಕೆ ನಾವು ತೆರಬೇಕು, ಈವೊತ್ತಿಗೂ ಬಿಡುವಿಲ್ಲದೆ ನಮ್ಮ ಐಶ್ವರ್ಯವನ್ನು ಬರಿದು ಮಾಡುತ್ತಿರುವುದಕ್ಕೆ ನಾವು ದಂಡ ಕೊಡಬೇಕು; ಇಲ್ಲವೆ ವೈಸ್‌ರಾಯರುಗಳೂ ಕ್ಷಾಮಾಧಿಕಾರಿಗಳೂ ಅಪ್ಪಣೆ ಮಾಡಿದ್ದಕ್ಕೆಲ್ಲ ಹಣ ಕೊಡಬೇಕು .......ಬೇರೆ ಯಾವ ಜನಾಂಗವೂ ಇನ್ನೊಂದು ಜನಾಂಗವನ್ನು ಇಷ್ಟು ಮಟ್ಟನ ಬಡತನಕ್ಕೆ ಇಳಿಸದ ರೀತಿಯಲ್ಲಿ ನಮ್ಮನ್ನು ಇಳಿಸಿರುವುದಕ್ಕೆ ನಾವು ಅವರಿಗೆ ಕೊಡಬೇಕು! ಕ್ಷಾಮ, ಪ್ಲೇಗು, ಹೊಟ್ಟೆಗೇ ಇಲ್ಲದಿರುವಿಕೆ ಇಂಥ ಅಭಿವೃದ್ಧಿ ಕಾರ್ಯಗಳ ಫಲಕ್ಕೆಲ್ಲ ನಾವು ತೆರ ಬೇಕು! ನಮಗೆ ಕಾಣದಂತೆಯೇ ನಮ್ಮ ರಕ್ಷಕರು ಬಹುಜಾಣತನದಿಂದ ಶಾಸ್ತ್ರೀ ಯವಾಗಿ ನಮ್ಮಿಂದ ಸಾಗಿಸುತ್ತಿರುವ ನಮ್ಮ ಆಸ್ತಿಗಳ ಭದ್ರತೆಗೆ ನಾವು ತೆರ ಬೇಕು! ಕ್ಷಾಮ, ಉಪವಾಸ, ಉಪದ್ರವಗಳಿಂದ ಬಾಳುವೆಗೇ ಯೋಗ್ಯವಲ್ಲದ ಜೀವದ ಭದ್ರತೆಗಾಗಿ ತೆರಬೇಕು! ಹೊಟ್ಟೆಗಿಲ್ಲದೇ ಸಾಯುವ ಸುಖದ ಈ ಪೂರ್ಣ ಸ್ವಾತಂತ್ರ್ಯಕ್ಕಾಗಿ ನಾವು ತೆರಬೇಕು! ಯೂರೋಪಿಯನ್ ಅಧಿ ಕಾರೇತರರು ನಮ್ಮ ಭೂಮಿ ಕೂಲಿ ಪ್ರಕೃತಿ ಸಾಧನಗಳನ್ನು ಸ್ವಪ್ರಯೋಜನ ಕ್ಕಾಗಿ ಉಪಯೋಗಿಸಿಕೊಳ್ಳುತ್ತಿರುವುದಕ್ಕಾಗಿ ನಾವು ತೆರಬೇಕು ...! ಒಟ್ಟ ನಲ್ಲಿ, ಪಾರ್ಲಿಮೆಂಟಿನ ಕಾನೂನುಗಳನ್ನೂ, ಒಂದು ದೇಶದ ಜನ ಇನ್ನೊಂದು ಜನಕ್ಕೆ ಕೊಟ್ಟ ವಚನಗಳನ್ನೂ ಮುರಿಯುತ್ತಿರುವ ವಿನಾಶಕಾರಿಯಾದ, ಮರ್‍ಯಾ ದೆಯಿಲ್ಲದ ಈ ಸರಕಾರ ಪದ್ಧತಿಗೆ ನಾವು ತೆರಬೇಕು !....

ಮೈಸೂರಿನ ದಿವಾನರಾದ ಸರ್. ಕೆ. ಶೇಷಾದ್ರಿ ಅಯ್ಯರಿಗೆ

ಡಿಸೆಂಬರ್ ೨೦, ೧೯೦೦

'ಹಿಂದೂ' ಪತ್ರಿಕೆಯಲ್ಲಿ ಒಂದು ಲೇಖನವನ್ನೋದಿದೆ. ಅದರಲ್ಲಿ,

ದೇಶೀಯ ಸಂಸ್ಥಾನಕ್ಕೆ ನೈಜವಾದ ನೀತಿಯ ಮೂಲತತ್ತ್ವವನ್ನೇ ಮೈಸೂರು ಸಂಸ್ಥಾನವು ಬಿಟ್ಟು ಹೋಗುತ್ತಿದೆಯೆಂದು ಓದಿ, ವಿಷಾದವಾಯಿತು. ಆ ಮೂಲತತ್ತ್ವವೇನೆಂದರೆ, ದೇಶೀಯ ಸಂಸ್ಥಾನವು ತಳದಿಂದ ಮೇಲಿನವರೆಗೂ ದೇಶೀಯರಿಂದಲೇ ಆಳಲ್ಪಡಬೇಕು. ಬ್ರಿಟಿಷ್ ಸರಕಾರವೂ ಸಹ ಈ ತತ್ತ್ವವನ್ನು ಒಪ್ಪಿಕೊಂಡಿದೆ. ಆದ್ದರಿಂದಲೆ, ಹಿಂದಿನ ಮಹಾರಾಜನು ಅಪ್ರಾಪ್ತವಯಸ್ಕನಾಗಿರುವಾಗ, ಇಂಡಿಯಾ ಸರಕಾರವು ವಿದೇಶೀ ಅಧಿಕಾರಿಗಳನ್ನು ಕ್ರಮೇಣ ಕಡಮೆ ಮಾಡಲು ವಿಶೇಷ ಪ್ರಯತ್ನ ನಡಸಿತು. ಮಹಾರಾಜನು ಗಾದಿಯನ್ನೇರುವಾಗ ಸಾಧ್ಯವಾದ ಮಟ್ಟಿಗೂ ದೇಶೀಯ ಆಡಳಿತವಿರಲೆಂದು ಹಾಗೆ ಮಾಡಲಾಯಿತು. ಮೈಸೂರಿನ ಆಡಳಿತದಲ್ಲಿ ಯೂರೋಪಿಯನ್ನರನ್ನು ನೇಮಿಸುವುದರಿಂದ ಮೂರುಬಗೆಯ ಕೇಡುಂಟಾಗುತ್ತದೆ: (೧) ಬ್ರಿಟಿಷ್ ಇಂಡಿಯಾದಂತೆಯೇ ಮೈಸೂರೂ ಆರ್ಥಿಕವಾದ ಸುಲಿಗೆಗೆ ಸಿಕ್ಕುತ್ತದೆ. (೨) ಭಾರತೀಯರು ಯೂರೋಪಿಯನರ ಸಹಾಯವಿಲ್ಲದೆ ಆಡಳಿತ ನಡಸಲು ಅಸಮರ್ಥರೆಂದು ತೋರಿಸಿದಂತಾಗುತ್ತದೆ. ಭಾರತೀಯರಿಗೆ ಅದಕ್ಕಿಂತ ದೊಡ್ಡಪೆಟ್ಟು ಬೀಳಲಾರದು. (೩) ಮೂವತ್ತು ವರ್ಷಗಳಿಗೂ ಮೇಲ್ಪಟ್ಟು ದೇಶೀಯ ಆಡಳಿತದ ಪುನಃಸ್ಥಾಪನೆಯನ್ನು ಒಂದೇಸಮನಾಗಿ ವಿರೋಧಿಸಿದ ಆಂಗ್ಲೋ ಇಂಡಿಯನರ ಪಂಗಡಕ್ಕೆ ಅದರಿಂದ ಸಂತೋಷವಾಗುತ್ತದೆ. ನೇರವಾದ ಬ್ರಿಟಿಷ್ ಆಡಳಿತ ಮೈಸೂರಿಗೂ, ಸಾಧಾರಣವಾಗಿ ದೇಶೀಯ ಸಂಸ್ಥಾನಗಳೆಲ್ಲಕ್ಕೂ ಉತ್ತಮವಾದ್ದೆಂದು ಹೇಳಲು ಅವರಿಗೆ ನೆವದೊರೆಯುತ್ತದೆ.

ಮೈಸೂರಿನ ಚಿನ್ನದಗಣಿಗಳ ಅಥವಾ ಖನಿಜ ಸಂಪತ್ತಿನ ವಿಚಾರವಾಗಿ ಮೈಸೂರು ಸಂಸ್ಥಾನವಾಗಲಿ ಅಥವಾ ಮೈಸೂರಿನ ಪ್ರಜೆಗಳಾಗಲಿ, ಪ್ರಕೃತಿದತ್ತವಾದ ಆ ಸಂಪತ್ತನ್ನು ತಮಗೇ ಉಳಿಸಿಕೊಂಡು ದುಡಿಯುತ್ತಾರೆಂದು ಆಶಿಸುತ್ತೇನೆ. ವಿದೇಶೀ ಜನರು ಅದನ್ನು ಹೊತ್ತುಕೊಂಡು ಹೋಗಲು ಬಿಟ್ಟರೆ, ನಮಗೆ ಉಳಿಯುವುದು ಕೊಂಚ ಮೇಲುವರಿ ಹಣ ಮಾತ್ರ ಮತ್ತು ಜನರಿಗೆ ಕೂಲಿ ಮಾತ್ರ. ತನ್ನ ಪ್ರಜೆಗಳೇ ಆಡಳಿತವನ್ನು ನಡಸುವಂತೆ ಅವರನ್ನು ತರಬೇತುಮಾಡಲು ಮೈಸೂರು ಸರ್ವ ಪ್ರಯತ್ನವನ್ನೂ ಮಾಡಬೇಕು.

## ಜೆ ಎನ್. ಟಾಟಾನಿಗೆ

ಸೆಪ್ಟೆಂಬರ್ ೧೬, ೧೯೦೨

ನಿನಗೆ ಬೇಕಾದ ೧೦ ಲಕ್ಷವನ್ನು ಇಂಡಿಯಾದ ರಾಜರುಗಳಿಂದ ಎತ್ತಲು ಸಾಧ್ಯವಿಲ್ಲವೆ ? ವಿದೇಶೀಯರು ಭಾರತದ ಪ್ರಕೃತಿಸಂಪತ್ತನ್ನು ಹೊತ್ತು ಕೊಂಡು ಹೋಗಲು ನೀನು ಸಾಧನವಾಗುವುದು ನನಗೆ ದುಃಖವನ್ನುಂಟು ಮಾಡುತ್ತದೆ. ಅದರಿಂದ ನಮ್ಮ ಜನಕ್ಕೆ ಸಿಕ್ಕುವ ಪ್ರಯೋಜನ ಕೆಲವು ಸಾವಿರ

ಜನಕ್ಕೆ ದೊರೆಯುವ ಕೂಲಿಮಾತ್ರ. ಹಾಗೆಮಾಡುವುದು ಇಂಡಿಯಕ್ಕೆ ದೊಡ್ಡನಷ್ಟ. ವಿದೇಶೀಯರು ಈ ಸಂಪತ್ತನ್ನು ಹೊತ್ತುಕೊಂಡು ಹೋಗುವುದಕ್ಕಿಂತ ನಮ್ಮ ಭೂಮಿಯಲ್ಲಿ ಅದು ಹೂತುಬಿದ್ದಿರುವುದು ಲೇಸು. ನನ್ನ ಮಾತಿನ ಅರ್ಥವನ್ನು ನೀನು ಗ್ರಹಿಸುತ್ತೀಯೆಂದು ನಂಬುತ್ತೇನೆ.

೧೯೦೩ ರ ಫೆಬ್ರುವರಿ ೨೦ ರಲ್ಲಿ ತಾತಾ ದಾದಾಭಾಯಿಯ ನೆರವನ್ನು ಕೋರಿ ಬರೆದನು :

ಕಬ್ಬಿಣದ ಕಾರಖಾನೆಯನ್ನು ಸಾಧ್ಯವಾದ ಮಟ್ಟಿಗೂ ಇಂಡಿಯದ ಬಂಡವಾಳದಿಂದಲೇ ಆರಂಭಿಸಬೇಕೆಂದು ನೀವೂ ನಾನೂ ಇಷ್ಟಪಟ್ಟಿರುವುದು ಸರಿಯಷ್ಟೆ. ಅದನ್ನು ಸಾಧಿಸಲು, ದೇಶಕ್ಕೆ ಒಪ್ಪವಾದ ಸೇವೆಯನ್ನು ಸಲ್ಲಿಸಿ ಗಣ್ಯವಾದ ಸ್ಥಾನವನ್ನು ಹೊಂದಿರುವ ನಿಮ್ಮಂಥವರ ಬಲವಾದ ನೆರವು ನನಗೆ ಅಗತ್ಯ. ಕೆಲಸಗಳೆಲ್ಲ ಇನ್ನೂ ಪ್ರಯೋಗಸ್ಥಿತಿಯಲ್ಲಿವೆ. ಜಯಲಭಿಸುತ್ತದೆಂದು ಮನಸ್ಸಿಗೆ ಖಂಡಿತವಾಗುವವರೆಗೆ ಬಂಡವಾಳಕ್ಕಾಗಿ ಚಂದಾ ಕೇಳಬಾರದೆಂದು ನಿರ್ಧರಿಸಿದ್ದೇನೆ.

ಯೋಜನೆ ಇನ್ನೂ ಪ್ರಯೋಗಸ್ಥಿತಿಯಲ್ಲಿದ್ದಾಗಲೇ ತಾತಾ ತೀರಿಕೊಂಡನು. ಅದು ಕಾರ್ಯರೂಪಕ್ಕೆ ಬರುವವೇಳೆಗೆ ಆವಶ್ಯಕವಾದ ಬಂಡವಾಳವೆಲ್ಲ ಭಾರತೀಯರಿಂದಲೇ ದೊರೆಯಿತು.

ವಾಚಾಸಿಗೆ

ಅಕ್ಟೋಬರ್ ೧೯, ೧೯೦೫.

ಬಂಗಾಳಿಗಳು ಬಹಿಷ್ಕಾರ ಚಳವಳಿಯನ್ನು ನಡಸಿಕೊಂಡು ಹೋಗುವರೆಂದು ತಿಳಿದಿದ್ದೇನೆ. ತಮ್ಮ ಕೈಗಾರಿಕೆಗಳನ್ನು ತಮ್ಮ ಬಂಡವಾಳದಿಂದಲೇ ನಡಸುವುದು ಅಗತ್ಯವೆಂದು ಅವರಿಗೆ ಮನವರಿಕೆಯಾಗಬಹುದು. ಈ ಸ್ವದೇಶೀ ಚಳವಳಿಯಿಂದ ಬೊಂಬಾಯಿ ಮಿಲ್ಲುಗಳಿಗೆ ಬಹು ಪ್ರಯೋಜನವಾಗಿರಬೇಕು. ಇಂಡಿಯದ ಮಿಲ್ಲುಗಳು ತಯಾರಿಸುವ ವಸ್ತುಗಳಿಗೆ ಒಳದೇಶದ ಬಳಕೆಯಿಂದಲೇ ದೊಡ್ಡ ಪೇಟೆ ದೊರೆಯಬೇಕು. ಲಂಕಾಷೈರನ್ನು ಬಹಿಷ್ಕರಿಸುವುದರಿಂದ ಅದು ಇಂಡಿಯಾಕ್ಕೆ ಬೇಕಾದ ಹೊಸಯಂತ್ರಗಳನ್ನೂ ಹಳೆಯ ಯಂತ್ರಗಳ ರಿಪೇರಿಗೆ ಬೇಕಾದ ವಸ್ತುಗಳನ್ನೂ ಒದಗಿಸದೇ ಹೋಗಬಹುದು. ಯಂತ್ರಗಳನ್ನು ತಯಾರಿಸುವ ಕಾರಖಾನೆಗಳನ್ನು ಇಂಡಿಯಾ ಸ್ಥಾಪಿಸಬಲ್ಲುದೆ ?

ಸುರೇಂದ್ರನಾಥ ಬಾನರ್ಜಿಗೆ

ಆಗಸ್ಟ್ ೨೩, ೧೯೦೦

'ಪತ್ರಿಕಾ' ಮತ್ತು 'ಬಂಗಾಳೀ'ಗಳ ನಡುವೆ ಮನಸ್ತಾಪ ಹುಟ್ಟಿದೆಯೆಂದು

ಕೇಳಿ ವ್ಯಥೆಯಾಯಿತು. ನಮ್ಮ ನಮ್ಮಲ್ಲಿ ಆ ರೀತಿ ಜಗಳವಾಡುವುದಕ್ಕೆ ಇದು ಸಮಯವಲ್ಲ.

## ೩೧. ದಕ್ಷಿಣ ಆಫ್ರಿಕದ ಭಾರತೀಯರು

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ಯೂರೋಪಿನ ವಲಸೆಗಾರರಿಗೆ ದಕ್ಷಿಣ ಆಫ್ರಿಕ ಚಿನ್ನದ ನಾಡಾಗಿತ್ತು. ಅವರಿಗೆ ಬೇಕಾದದ್ದೆಲ್ಲ ಅಲ್ಲಿ ದೊರೆಯುತ್ತಿತ್ತು, ಆದರೆ ಸ್ಥಳದಲ್ಲಿ ಸರಿಯಾದ ಕೆಲಸಗಾರರು ಇರಲಿಲ್ಲ. ಆದ್ದರಿಂದ ನೆಟಾಲಿನ ತೋಟಗಾರರು ಇಂಡಿಯಾದಿಂದ ಕೂಲಿಗಳನ್ನು ಕರೆಸಿಕೊಳ್ಳಲು ಅನುಕೂಲಪಡಿಸಿಕೊಡುವಂತೆ ಇಂಡಿಯಾ ಸರಕಾರವನ್ನು ಕೇಳಿದರು. ಕಲ್ಕತ್ತ ಮದರಾಸುಗಳಿಂದ ಹೊರಟ ಕೂಲಿಕಾರರ ಮೊದಲನೆಯ ತಂಡ ೧೮೬೦ರ ನವೆಂಬರ್ ೧೬ರಲ್ಲಿ ನೆಟಾಲನ್ನು ತಲಪಿತು. ಕೂಲಿಕಾರರು ಕರಾರಿನಿಂದ ಬಂಧಿತರಾಗಿದ್ದರು.

ಕೂಲಿಕಾರರೊಡನೆ ಭಾರತದಿಂದ ಚಿಲ್ಲರೆ ವ್ಯಾಪಾರಿಗಳೂ ಅವರ ಜವಾನರೂ ನೆಟಾಲ್, ಟ್ರಾನ್ಸ್‌ವಾಲ್, ಆರೆಂಜ್ ಫ್ರೀಸ್ಟೇಟ್ ಮತ್ತು ಕೇಪ್ ಕಾಲೊನಿಗಳಿಗೆ ಹೋದರು. ಸರಳ ಜೀವನವನ್ನು ನಡಸುವ ಅವರು ಸಾಮಾನ್ಯವಾಗಿ ಏಳಿಗೆ ಹೊಂದುತ್ತಿದ್ದರು. ಕೂಲಿಕಾರರಲ್ಲಿ ಬಹುಮಂದಿ ತಮ್ಮ ಕರಾರಿನ ಅವಧಿ ಮುಗಿದ ಮೇಲೆ ಬೇಸಾಯಗಾರರಾಗಿಯೊ ಕಸಬುದಾರರಾಗಿಯೊ ಅಥವಾ ವರ್ತಕರಾಗಿಯೊ ನೆಲಸಿದರು. ಬಿಳಿಯ ವಲಸೆಗಾರರು ಇದನ್ನು ನಿರೀಕ್ಷಿಸಿರಲಿಲ್ಲ. ಅವರು ಕೂಲಿಕಾರರನ್ನು ಕರೆಸಿಕೊಂಡದ್ದು ತಮ್ಮ ಸೇವೆಗಾಗಿ. ಕೊನೆಯವರೆಗೂ ತಮ್ಮ ಸೇವೆ ಮಾಡಬೇಕು, ಇಲ್ಲವೆ, ಸೇವೆಯ ಅವಧಿ ಮುಗಿದ ಮೇಲೆ ದೇಶದಿಂದ ಹೊರಟುಹೋಗಬೇಕು. ಇಂಡಿಯಾ ಕಾಲೊನಿಗೆ ಪ್ರತಿವರ್ಷವೂ ಒಂದೆರಡು ಸಾವಿರ ಕೂಲಿಗಳನ್ನು ತಂದುತುಂಬಿದರೆ, ಕೆಲವು ವರ್ಷಗಳಲ್ಲೇ ತಮ್ಮ ಸ್ಥಿತಿಯೇನಾಗಬಹುದು? ಆದ್ದರಿಂದ 'ಏಷ್ಯನರನ್ನು ಹೊರಗೆ ಕಳಿಸಿ' ಎಂಬುದು ಅವರ ಸೂತ್ರವಾಯಿತು.

ಕರಾರಿನಂತೆ ಬಂದ ಕೂಲಿಕಾರರನ್ನು ಬಲಾತ್ಕಾರವಾಗಿ ಹಿಂದಕ್ಕೆ

ಕಳಿಸಬೇಕೆಂದು ಕೆಲವರು ಸಲಹೆ ಮಾಡಿದರು ; ಮೊದಲನೆಯ ಐದು ವರ್ಷಗಳ ಅವಧಿ ಮುಗಿದ ಕೂಡಲೆ, ಅವರನ್ನು ಅಟ್ಟುವುದಕ್ಕಾಗಿ ಹೊರೆಯಾದ ವಾರ್ಷಿಕ ತಲೆಗಂಡಾಯವನ್ನು ವಿಧಿಸಬೇಕೆಂದು ಇತರರು ಸೂಚಿಸಿದರು. ಇಂಡಿಯಾ ಸರಕಾರ ಈ ಸಲಹೆಗಳಿಗೆ ಒಪ್ಪಲಿಲ್ಲ. ನೆಟಾಲ್ ಕ್ರೌನ್ ಕಾಲೊನಿಯಾಗಿದ್ದುದರಿಂದ, ಬ್ರಿಟಿಷ್ ಪ್ರಜೆಗಳಾದ ಭಾರತೀಯರ ಹಕ್ಕುಗಳನ್ನು ಉಲ್ಲಂಘಿಸುವ ಸಲಹೆಗೆ, ಬ್ರಿಟಿಷ್ ಸರಕಾರದ ಅನುಮತಿಯನ್ನು ಪಡೆಯಬೇಕಾಗಿತ್ತು. ಅದು ಸುಲಭವಾಗಿ ಸಾಧ್ಯವಾಗುವಂತಿರಲಿಲ್ಲ. ಆದ್ದರಿಂದ ನೆಟಾಲಿಗೆ ಜವಾಬ್ದಾರಿ ಸರಕಾರವನ್ನು ಕೋರುವ ಚಳವಳಿ ಆರಂಭವಾಯಿತು.

ಟ್ರಾನ್ಸ್‌ವಾಲಿನಲ್ಲಿಯೂ ಭಾರತೀಯರನ್ನು ಹೊರಗಿಡಲು ಚಳವಳಿ ಆರಂಭವಾಗಿತ್ತು. ಅದು ಸ್ವತಂತ್ರ ರಿಪಬ್ಲಿಕ್ ಆದುದರಿಂದ ಭಾರತೀಯ ಪ್ರಮುಖರು ಕೆಲವರು ಅಧ್ಯಕ್ಷ ಕ್ರೂಗೆರ್‌ನನ್ನು ನೋಡಲು ಹೋದರು. ಅವನು ಅವರನ್ನು ತನ್ನ ಮನೆಗೂ ಸೇರಿಸನು. ಆ ರಿಪಬ್ಲಿಕ್‌ನಲ್ಲಿ ಬ್ರಿಟಿಷರ ಮತ್ತು ಬೋಅರರ ಮಧ್ಯೆ ಲಂಡನ್ ಕನ್ವೆನ್ಷನ್ ಎಂಬ ಒಪ್ಪಂದವಿತ್ತು. ಅದರ ಪ್ರಕಾರ, ರಿಪಬ್ಲಿಕ್ಕಿನಲ್ಲಿ ವಾಸವಾಗಿರುವ ಎಲ್ಲ ಜನರೂ—ಸ್ಥಳದ ನಿವಾಸಿಗಳು ಹೊರತಾಗಿ—ಕಾನೂನಿನ ದೃಷ್ಟಿಯಲ್ಲಿ ಸಮಾನವಾದ ಹಕ್ಕುಳ್ಳವರಾಗಿದ್ದರು. ಹೀಗಿದ್ದರೂ ೧೮೮೫ರಲ್ಲಿ ಒಂದು ಕಾನೂನನ್ನು ಅವಸರವಾಗಿ ಜಾರಿಗೆ ತಂದರು. ಅದರ ಪರಿಣಾಮವಾಗಿ ರಿಪಬ್ಲಿಕ್‌ನಲ್ಲಿ ವ್ಯಾಪಾರಕ್ಕಾಗಿ ನೆಲಸುವ ಭಾರತೀಯನು £ ೨೫ ಗಳನ್ನು ಕೊಟ್ಟು ರಿಜಿಸ್ಟರು ಮಾಡಿಸಿಕೊಳ್ಳ ಬೇಕಾಗಿತ್ತು; ಅಲ್ಲದೆ ಭಾರತೀಯನು ಭೂಮಿಯನ್ನು ಹೊಂದುವಂತಿರಲಿಲ್ಲ. ರಿಜಿಸ್ಟ್ರೇಷನ್ ರುಸುಮನ್ನು ಆ ಮೇಲೆ £ ೩ ಗಳಿಗೆ ಇಳಿಸಲಾಯಿತು; ಭೂಸ್ವಾಮ್ಯದ ಅನರ್ಹತೆಯನ್ನು ತೆಗೆದು ಹಾಕಲಾಯಿತು ; ಆದರೆ ಭಾರತೀಯರಿಗಾಗಿಯೇ ಸರಕಾರ ಗೊತ್ತು ಮಾಡಿದ್ದ ಸ್ಥಳದಲ್ಲಿ ಮಾತ್ರ ಸ್ಥಿರ ಸ್ವತ್ತನ್ನು ಪಡೆಯ ಬಹುದಾಗಿತ್ತು. ಈ 'ಅಸ್ಪೃಶ್ಯ'ರಿಗೆ ಗೊತ್ತು ಮಾಡಿದ ಸ್ಥಳ ನಗರದಿಂದ ದೂರವಾಗಿದ್ದು ಅಲ್ಲಿ ನೀರು ದೀಪಗಳ ಸೌಕರ್ಯವಾಗಲಿ ಪಾಕೀಜು ವ್ಯವಸ್ಥೆಯಾಗಲಿ ಇರಲಿಲ್ಲ.

ಆರೆಂಜ್ ಫ್ರೀ ಸ್ಟೇಟಿನಲ್ಲಿ ಭಾರತೀಯರನ್ನು ಕಾಣುತ್ತಿದ್ದ ರೀತಿ

ಇದಕ್ಕೂ ಕೇಡಾಗಿತ್ತು. ಕಠಿನವಾದ ಅಲ್ಲಿನ ಕಾನೂನಿನ ಪ್ರಕಾರ ಭಾರತೀಯನು ಯಾವ ಸಂದರ್ಭದಲ್ಲಿಯೂ ಸ್ಥಿರಾಸ್ತಿಗಳನ್ನು ಪಡೆಯುವಂತಿರಲಿಲ್ಲ; ವ್ಯಾಪಾರ ಮಾಡುವಂತಿರಲಿಲ್ಲ, ಬೇಸಾಯ ಮಾಡುವಂತಿರಲಿಲ್ಲ, ಪೌರತ್ವದ ಹಕ್ಕುಗಳನ್ನು ಚಲಾಯಿಸುವಂತಿರಲಿಲ್ಲ. ಕೆಲವು ಸಂದರ್ಭಗಳಲ್ಲಿ ಮಾತ್ರ, ಅಧಿಕಾರಿಗಳ ಕೃಪೆಯಿಂದ, ಕೂಲಿಕಾರನಾಗಿ ಅಥವಾ ಹೋಟಲು ಸೇವಕನಾಗಿ ಕೆಲಸಮಾಡಬಹುದಿತ್ತು.

ಕೇಪ್ ಕಾಲೊನಿಯಲ್ಲೂ ಭಾರತೀಯರಿಗೆ ಕೆಲವು ಅನರ್ಹತೆಗಳಿದ್ದವು. ಅವರ ಮಕ್ಕಳು ಸಾರ್ವಜನಿಕ ಶಾಲೆಗಳಿಗೆ ಹೋಗುವಂತಿರಲಿಲ್ಲ. ೧೮೫೨ರಲ್ಲಿ, ಬಣ್ಣದ ಜನರಿಗಿದ್ದ ಪೌರಹಕ್ಕುಗಳನ್ನು ರದ್ದುಪಡಿಸಿದರು.

ತಮ್ಮ ಹಕ್ಕುಗಳ ವಿಚಾರದಲ್ಲಿ ಭಾರತೀಯರನ್ನು ಎಚ್ಚರಿಸುವಂತಹ ರಾಜಕೀಯ ಚಳವಳಿಗಾರರು ಯಾರೂ ಆಗ್ಗೆ ಇರಲಿಲ್ಲ. ಆದರೆ ಆತ್ಮಗೌರವವುಳ್ಳ ಕೆಲ ಜನರು ಈ ಅತಿಕ್ರಮಗಳನ್ನು ಪ್ರತಿಭಟಿಸುತ್ತಿದ್ದರು. ಲಾರ್ಡ್ ರಿಪನ್ ಆಗ ವಸಾಹತು ಸೆಕ್ರೆಟರಿಯಾಗಿದ್ದನು. ದಾದಾಭಾಯಿ ವಿಷಯವನ್ನು ಅವನ ಗಮನಕ್ಕೆ ಒಯ್ದನು.

ನೆಟಾಲ್ ಮತ್ತು ಟ್ರಾನ್ಸ್‌ವಾಲ್‌ಗಳಲ್ಲಿದ್ದ ಭಾರತೀಯ ವರ್ತಕರು ದಾದಾಭಾಯಿಗೆ ತಂತಿಸಮಾಚಾರವನ್ನು ಕಳಿಸಿ, ಭಾರತೀಯ ಪ್ರಜೆಗಳ ಹಕ್ಕುಗಳನ್ನು ಕಾಪಾಡಿಕೊಡುವಂತೆ ರಾಣಿಯನ್ನು ಪ್ರಾರ್ಥಿಸಬೇಕಾಗಿ ಕೇಳಿಕೊಂಡರು. ದಕ್ಷಿಣ ಆಫ್ರಿಕ ರಿಪಬ್ಲಿಕ್ ಮತ್ತು ಆರೆಂಜ್ ಫ್ರೀಸ್ಟೇಟ್‌ಗಳಲ್ಲಿರುವ ಭಾರತೀಯ ಪ್ರಜೆಗಳ ಸ್ಥಾನಮಾನಗಳನ್ನು ಕುರಿತು ಅನೇಕ ಪತ್ರಗಳು ದಾದಾಭಾಯಿಗೆ ಬಂದವು. ಅವನು ಅವುಗಳೆಲ್ಲವನ್ನೂ ಲಾರ್ಡ್ ರಿಪನ್ನನ ಎಡೆಗೆ ಕಳಿಸಿದನು. ಆ ವಿಷಯದಲ್ಲಿ ಬಹುಸೂಕ್ಷ್ಮವಾಗಿ ವ್ಯವಹರಿಸಬೇಕಾಗಿತ್ತು. ಯಾಕೆಂದರೆ, ಟ್ರಾನ್ಸ್‌ವಾಲ್ ಬ್ರಿಟಿಷರಿಗೆ ಸೇರಿದ ಪ್ರದೇಶವಾಗಿರಲಿಲ್ಲ. ದಕ್ಷಿಣ ಆಫ್ರಿಕದ ರಿಪಬ್ಲಿಕ್ ಸ್ವತಂತ್ರ ರಾಜ್ಯವಾದುದರಿಂದ ಅದರೊಡನೆ ವಿಷಯವನ್ನು ಸಂಧಾನದ ಮೂಲಕ ಮಾತ್ರ ವ್ಯವಹರಿಸಬಹುದಾಗಿತ್ತು. ಲಾರ್ಡ್ ರಿಪನ್ ದಕ್ಷಿಣ ಆಫ್ರಿಕದ ಸರಕಾರದ ಮೇಲೆ ಪ್ರಭಾವಬೀರಲು ಸಾಧ್ಯವಿರುವ ರಾಯಭಾರ ಪ್ರಯತ್ನಗಳನ್ನೆಲ್ಲ ನಡಸುತ್ತಿದ್ದನು. ಯಾವುದೂ ಪ್ರಯೋಜನವಾಗದಿರಲು ವಿಷಯವನ್ನು

ಭಾರತೀಯ ಮುನವಿದಾರರಿಗೆ ತಿಳಿಸುವಂತೆ ರಿಪನ್ ದಾದಾಭಾಯಿಗೆ ಪತ್ರ ಬರೆದನು (ಫೆಬ್ರುವರಿ ೨೨). ಈ ಪರಿಸ್ಥಿತಿಯಲ್ಲಿ ದಕ್ಷಿಣ ಆಫ್ರಿಕದ ರಂಗ ಭೂಮಿಯ ಮೇಲೆ ಅಸದೃಶ ವಿವೇಚನಾ ಶಕ್ತಿಯುಳ್ಳ ನಾಯಕನೊಬ್ಬನು ಕಾಣಿಸಿಕೊಂಡನು. ದೂರದ ಆ ರಾಜ್ಯದಲ್ಲಿದ್ದ ತನ್ನ ದೇಶ ಬಾಂಧವರಿಗೆ ಅವನು ಆತ್ಮಬಲದ ಶಕ್ತಿಯನ್ನು ತೋರಿಸಿಕೊಟ್ಟನು; ಬಲಹೀನರಾದ ಅವ ರಿಗೆ, ಹಿಂಸಾಮಾರ್ಗದಲ್ಲಿ ನಡೆಯದೆ, ಸತ್ಯಕ್ಕಾಗಿ ಹೋರಾಡಿ ಜಯಗಳಿಸುವು ದನ್ನು ಕಲಿಸಿದನು.

೧೮೯೩ ರ ಏಪ್ರಿಲ್ ತಿಂಗಳಲ್ಲಿ ಗಾಂಧೀಜಿಯು ದಕ್ಷಿಣ ಆಫ್ರಿಕಕ್ಕೆ ತನ್ನ ಉದ್ಯೋಗದ ಕೆಲಸದ ಮೇಲೆ ಹೋದನು. ಅಲ್ಲಿ ಅವನ ಪ್ರಯಾಣ ಕಾಲದಲ್ಲಿ ರೈಲಿನಲ್ಲಿ ಪಟ್ಟ ಕಷ್ಟಗಳೂ, ಅನುಭವಿಸಿದ ಅವಮಾನಗಳೂ, ಆಮೇಲೆ ನೆಟಾಲ್ ಇಂಡಿಯನ್ ಕಾಂಗ್ರೆಸ್ಸನ್ನು ಸ್ಥಾಪಿಸಿದ್ದೂ, ಜನಗಳ ಪರವಾಗಿ ದಕ್ಷಿಣ ಆಫ್ರಿಕದ ಸರಕಾರದೊಡನೆ ಹೋರಾಟನಡೆಸಿದ್ದೂ, ಇವೇ ಮೊದಲಾದ ಸಂಗತಿಗಳು ಈಗ ಎಲ್ಲರಿಗೂ ತಿಳಿದಿವೆ. ಆಗ ವೆಡ್ಡರ್‌ಬರ್ನ್ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಬ್ರಿಟಿಷ್ ಸಮಿತಿಯ ಅಧ್ಯಕ್ಷನಾಗಿ ದ್ದನು, ದಾದಾಭಾಯಿ ಆ ಸಮಿತಿಯ ಸದಸ್ಯನಾಗಿದ್ದನು. ಪ್ರತಿ ವಾರವೂ ಗಾಂಧೀಜಿಯಿಂದ ಅವರುಗಳಿಗೆ ಪತ್ರಗಳು ಹೋಗುತ್ತಿದ್ದವು. ಗಾಂಧೀಜಿ ದಾದಾಭಾಯಿಗೆ ಬರೆದ (ಜುಲೈ ೫, ೧೮೯೪) ಮೊದಲನೆಯ ಪತ್ರ ಬಹು ವಿನಯದಿಂದ ತುಂಬಿದೆ:

ನನಗೆ ಏನೂ ಅನುಭವವಿಲ್ಲ, ನಾನು ಚಿಕ್ಕವನು, ಆದ್ದರಿಂದ ತಪ್ಪುಮಾಡಲುಳ್ಳ ವನು. ನಾನು ಕೈಕೊಂಡಿರುವ ಜವಾಬ್ದಾರಿ ನನ್ನ ಶಕ್ತಿಗೆ ಮೀರಿದ್ದಾಗಿದೆ. ನಾನು ಈ ಕೆಲಸವನ್ನು ಯಾವ ಸಂಭಾವನೆಯನ್ನೂ ತೆಗೆದುಕೊಳ್ಳದೆ ಮಾಡುತ್ತಿ ದೇನೆ. ಆದ್ದರಿಂದ ನನ್ನ ಶಕ್ತಿಗೆ ಮೀರಿದ ಈ ಕೆಲಸವನ್ನು ನಾನು, ಭಾರತೀಯ ರಿಂದ ಹಣ ತೆಗೆದುಕೊಂಡು ನನ್ನ ಜೇಬು ತುಂಬಿಕೊಳ್ಳುವುದಕ್ಕಾಗಿ, ಕೈಕೊಂಡಿಲ್ಲ. ಈ ಪ್ರಶ್ನೆಯನ್ನು ವ್ಯವಹರಿಸುವುದಕ್ಕೆ ನನ್ನನ್ನು ಬಿಟ್ಟರೆ, ಬೇರೆ ಯಾರೂ ದೊರೆಯು ವಂತಿರಲಿಲ್ಲ. ಆದ್ದರಿಂದ ನೀವು ಮಾರ್ಗದರ್ಶನ ಮಾಡಿ ನನ್ನನ್ನು ನಡಸಿದರೆ ನನಗೆ ನೀವು ತುಂಬ ಉಪಕಾರವಮಾಡಿದಂತಾಗುತ್ತದೆ; ಅವಶ್ಯಕವಾದ ಸಲಹೆಗಳನ್ನು ಮಾಡಿ ದರೆ ಅವುಗಳನ್ನು ತಂದೆ ಮಗುವಿಗೆ ಕೊಡುವ ಬುದ್ಧಿವಾದದಂತೆ ಸ್ವೀಕರಿಸುತ್ತೇನೆ.

ಅನೇಕ ಜನ ವರ್ತಕರೂ ವಕೀಲರುಗಳೂ ಕಷ್ಟತೋರಿದಾಗ ದಾದಾ

ಭಾಯಿಯ ಸಹಾಯವನ್ನು ಕೋರಿ ಕಾಗದ ಬರೆಯುತ್ತಿದ್ದರು. ಅವುಗಳ ನ್ನೆಲ್ಲ ಬಹು ಶ್ರದ್ಧೆಯಿಂದ ನೋಡುತ್ತಿದ್ದನು. ಇಂಡಿಯನ್ ನ್ಯಾಷನಲ್ ಕಾಂಗ್ರೆಸಿನ ಬ್ರಿಟಿಷ್ ಸಮಿತಿಯು ಏರ್ಪಡಿಸಿದ ಪ್ರತಿನಿಧಿ ಮಂಡಲವೊಂದು ವಸಾಹತು ಕಾರ್ಯದರ್ಶಿಯಾದ ಜೋಸೆಫ್ ಚೇಂಬರ್‌ಲೇನ್‌ನನ್ನು ೧೮೯೫ರ ಆಗಸ್ಟ್ ೨೮ ರಲ್ಲಿ ಭೇಟಿ ಮಾಡಿತು. ಆ ಸಂದರ್ಭದಲ್ಲಿ, ಕುಂದುಕೊರತೆ ಗಳ ಹೇಳಿಕೆಯನ್ನು ದಾದಾಭಾಯಿ ತಯಾರು ಮಾಡಿದ್ದನು. ಅವಶ್ಯ ಬಿದ್ದರೆ ಟ್ರಾನ್ಸ್‌ವಾಲ್ ಸರಕಾರಕ್ಕೆ ಮನವಿಗಳನ್ನು ಕಳಿಸಿ ಸಾಧ್ಯ ವಿರುವುದನ್ನೆಲ್ಲ ಮಾಡುವುದಾಗಿ ವಸಾಹತು ಸೆಕ್ರೆಟರಿ ಭರವಸೆ ಕೊಟ್ಟನು. ಎರಡು ವರ್ಷಗಳ ಕಾಲ ದಾದಾಭಾಯಿ ಅಧಿಕಾರಿ ಗಳೊಡನೆ ಬಿಡವೆ ಪತ್ರ ವ್ಯವಹಾರ ನಡಸುತ್ತಲೇ ಇದ್ದನು. ಏನೂ ಪ್ರಯೋಜನವಾಗಲಿಲ್ಲ. ೧೮೯೭ ರ ನವೆಂಬರ್ ೧೩ ರಲ್ಲಿ ಡೌನಿಂಗ್ ರಸ್ತೆ ಯಿಂದ ಬಂದ ಪತ್ರದಿಂದ ಪೌರ ಹಕ್ಕುಗಳಿಗೆ ಸಂಬಂಧಪಟ್ಟ ನೆಟಾಲ್ ಕಾನೂನುಗಳು ರದ್ದಾಗುವ ಸಂಭವವಿಲ್ಲವೆಂದೂ, ಆದರೆ ವಲಸೆ ಕಾನೂನು (Immigration Act) ಜಾರಿಗೆ ಬರುವ ವೇಳೆಗೆ ವಸಾಹತಿನಲ್ಲಿ ನೆಲ ಸಿದ್ದ ಭಾರತೀಯರ ಹಕ್ಕುಗಳನ್ನು ಕಾಪಾಡುವ ವಿಷಯದಲ್ಲಿ ನೆಟಾಲ್ ಸರ ಕಾರದೊಡನೆ ಚೇಂಬರ್‌ಲೇನ್ ಪತ್ರವ್ಯವಹಾರ ನಡಸುತ್ತಿರುವುದಾಗಿಯೂ ತಿಳಿಯಿತು. ಈ ವೇಳೆಗೆ ಗಾಂಧೀಜಿ ಇಂಡಿಯಾಕ್ಕೆ ಹಿಂದಿರುಗಿ, ದಕ್ಷಿಣ ಆಫ್ರಿಕದಲ್ಲಿರುವ ದೇಶಬಾಂಧವರ ಸ್ಥಿತಿಯನ್ನು ಜನರ ಗಮನಕ್ಕೆ ತಂದಿದ್ದನು. ಬೊಂಬಾಯಿ, ಪೂನಾ, ಮದರಾಸು ಮತ್ತು ಕಲ್ಕತ್ತಗಳಲ್ಲಿ ಗಾಂಧೀಜಿ ಮಾಡಿದ ಭಾಷಣಗಳೂ, ಅವನ ಲಘು ಪುಸ್ತಕಗಳೂ ಜನರ ಮನಸ್ಸಿನ ಮೇಲೆ ಭಾರಿಯಾದ ಪರಿಣಾಮವನ್ನುಂಟುಮಾಡಿದವು ಫಿರೋಜ್ ಷಾ ಮೆಹತಾ ಒಂದು ಜ್ಞಾಪಕ ಪತ್ರವನ್ನು ತಯಾರಿಸಿ ದಕ್ಷಿಣ ಆಫ್ರಿಕದ ಭಾರತೀಯರ ಪ್ರಶ್ನೆಯನ್ನು ಜಾರ್ಜ್ ಹ್ಯಾಮಿಲ್ಟನ್ನನ ಗಮನಕ್ಕೆತಂದನು. (ಡಿಸೆಂಬರ್ ೧೮೯೬).

ದಕ್ಷಿಣ ಆಫ್ರಿಕದ ಸರಕಾರ ಮಾತ್ರಕಾನೂನುಗಳ ಮೇಲೆ ಕಾನೂನು ಗಳನ್ನು ತರುತ್ತ ಭಾರತೀಯರ ಹಕ್ಕುಗಳನ್ನು ಕಡಮೆ ಮಾಡುತ್ತಿತ್ತು. ಪರಿ ಸ್ಥಿತಿ ಕೆಡುತ್ತ ಬಂದದ್ದರಿಂದ ಸ್ವಲ್ಪ ಕಾಲದನಂತರ, ಗಾಂಧೀಜಿ ಭಾರತೀ

ಯರ ಕರೆಯನ್ನು ಮನ್ನಿಸಿ ಟ್ರಾನ್ಸ್‌ವಾಲಿಗೆ ಹೋಗಬೇಕಾಗಿ ಬಂತು. ಜೊಹಾನೆಸ್‌ಬರ್ಗಿಗೆ ಹೋದವನೇ ಗಾಂಧೀಜಿ ಅಲ್ಲಿನ ಪರಿಸ್ಥಿತಿಯನ್ನು ಕುರಿತು ದಾದಾಭಾಯಿಗೆ ಅನೇಕ ಪತ್ರಗಳನ್ನು ಬರೆದನು. ದಾದಾಭಾಯಿ ಎಲ್ಲ ವಿಷಯಗಳನ್ನೂ ಲಾರ್ಡ್ ಎಲ್ಗಿನ್ನನ ಗಮನಕ್ಕೆ ತಂದು, ದಕ್ಷಿಣ ಆಫ್ರಿಕದ ಭಾರತೀಯರಿಗೆ ಸೂಕ್ತ ಪರಿಹಾರವನ್ನು ಒದಗಿಸಿ ಕೊಡುವಂತೆ ಪ್ರಾರ್ಥಿಸಿದನು. ಚೇಂಬರ್‌ಲೇನನ ತರುವಾಯ ಎಲ್ಗಿನ್ ವಸಾಹತುಗಳ ಕಾರ್ಯದರ್ಶಿಯಾಗಿದ್ದನು. ಈ ನಡುವೆ ದಕ್ಷಿಣ ಆಫ್ರಿಕದಲ್ಲಿ ಭಾರತೀಯರಿಗೆ ತೊಂದರೆಗಳು ಹೆಚ್ಚುತ್ತಿದ್ದವು. ಆಗಸ್ಟ್ ೨೨ರಲ್ಲಿ ಟ್ರಾನ್ಸ್‌ವಾಲ್ ಸರಕಾರದ ವಿಶೇಷ ಗೆಜೆಟ್ಟಿನಲ್ಲಿ ಏಷ್ಯಾಟಿಕ್‌ಲಾ ಅಮೆಂಡ್‌ಮೆಂಟ್ಸ್ ಆರ್ಡಿನೆನ್ಸ್ ಪ್ರಕಟವಾಯಿತು. ಅದರ ನಿಯಮದ ಪ್ರಕಾರ ಟ್ರಾನ್ಸ್‌ವಾಲಿನಲ್ಲಿ ವಾಸಮಾಡುವ ಪ್ರತಿಯೊಬ್ಬ ಭಾರತೀಯನೂ (ಎಂಟು ವರ್ಷದ ಅಥವಾ ಅದಕ್ಕೆ ಮೇಲ್ಪಟ್ಟ ಗಂಡಸು ಅಥವಾ ಹೆಂಗಸು) ತನ್ನ ಹೆಸರನ್ನು ರಿಜಿಸ್ಟರು ಮಾಡಿಸಿಕೊಂಡು, ಸರ್ಟಿಫಿಕೆಟ್ ಪಡೆಯಬೇಕಾಗಿತ್ತು; ಅಲ್ಲದೆ ಗುರುತುಹಿಡಿಯುವುದಕ್ಕಾಗಿ ದೇಹದ ಮೇಲಿನ ಮುಖ್ಯವಾದ ಗುರುತನ್ನು, ಬೆರಳು ಹೆಬ್ಬೆರಳುಗಳ ಗುರುತುಗಳನ್ನೂ ನಮೂದಿಸಬೇಕಾಗಿತ್ತು; ತಪ್ಪಿದರೆ ದಂಡ, ಕಾರಾಗೃಹವಾಸ, ಇಲ್ಲವೆ ಗಡೀಪಾರು ಶಿಕ್ಷೆಗೆ ಒಳಗಾಗ ಬೇಕಿತ್ತು.

ಈ ಮಸೂದೆ ಕಾನೂನಾಗಿ ಬಂದಲ್ಲಿ ಅದಕ್ಕೆ ಯಾರೂ ಮನ್ನಣೆಕೊಡ ಬಾರದೆಂದೂ, ಅದನ್ನು ಪ್ರತಿಭಟಿಸಲು ವ್ಯವಸ್ಥಾಬದ್ಧ ಕ್ರಮಗಳು ಪರಿಣಾಮಕಾರಿಯಾಗದಿದ್ದರೆ, ಸತ್ಯಾಗ್ರಹವನ್ನು ಕೈಕೊಳ್ಳಬೇಕೆಂದೂ ಭಾರತೀಯರ ಸಭೆಯಲ್ಲಿ ತೀರ್ಮಾನವಾಯಿತು. ಗಾಂಧೀಜಿ ಮತ್ತು ಎಚ್. ಓ. ಆಲಿ ಇವರಿಬ್ಬರನ್ನೊಳಗೊಂಡ ನಿಯೋಗವು ಇಂಗ್ಲೆಂಡಿಗೆ ಹೊರಟಿತು. ನಿಯೋಗದ ಸದಸ್ಯರು ದಾದಾಭಾಯಿಯನ್ನೂ ಅವನ ಮೂಲಕ ಕಾಂಗ್ರೆಸಿನ ಬ್ರಿಟಿಷ್ ಕಮಿಟಿಯನ್ನೂ ಭೇಟಿಮಾಡಿದರು.

ನಿಷ್ಫಲವಾದ ಅರ್ಜಿಗಳನ್ನು ಕೊಡುವುದಕ್ಕಿಂತ ಸತ್ಯಾಗ್ರಹವನ್ನು ಹೂಡುವುದು ಮೇಲೆಂಬ ಭಾರತೀಯರ ನಿರ್ಣಯವನ್ನು ದಾದಾಭಾಯಿ ಸ್ವಾಗತಿಸಿದನು. ಸಾಧ್ಯವಾದರೆ, ವ್ಯವಸ್ಥಾಬದ್ಧಕ್ರಮಗಳಿಂದ ಹೇಗೆ ಪರಿಹಾರ

ಪಡೆಯ ಬಹುದೆಂಬುದನ್ನು ದಾದಾಭಾಯಿ ಇಬ್ಬರು ಸದಸ್ಯರಿಗೂ ವಿವರಿಸಿದನು. ನಿಯೋಗದ ಸದಸ್ಯರು ಲಾರ್ಡ್ ಎಲ್ಗಿನ್ ಮತ್ತು ಲಾರ್ಡ್ ಮಾರ್ಲೆಯವರನ್ನು ಭೇಟಿಮಾಡಿದರು. ಭರವಸೆಗಳಿಗಿಂತ ಸಮಾಧಾನಕರವಾದ ಪರಿಹಾರಗಳನ್ನು ಕೊಡಲು ಅವರು ಸಮರ್ಥರಾಗಿರಲಿಲ್ಲ. ನಿಯೋಗದ ಸದಸ್ಯರು ಇಂಗ್ಲೆಂಡಿನಿಂದ ಹೊರಡುವ ಮುಂಚೆ, ತಮಗೆ ಸಹಾಯಕನಾಗಿ ಕೆಲಸಮಾಡಿದ ದಾದಾಭಾಯಿಯನ್ನು ಪತ್ರಮುಖೇನ ವಂದಿಸಿದರು.

ಏಷ್ಯಾಟಿಕ್ ರಿಜಿಸ್ಟ್ರೇಷನ್ ಕಾನೂನು ಟ್ರಾನ್ಸ್ವಾಲ್ ಪಾರ್ಲಿಮೆಂಟಿನಲ್ಲಿ ೧೯೦೭ ರ ಮಾರ್ಚಿ ೨೧ ರಲ್ಲಿ ತ್ವರಿತವಾಗಿ ಅಂಗೀಕೃತವಾಯಿತು. ೧೯೦೭ ರ ಜುಲೈ ೧ ರಿಂದ ಅದು ಜಾರಿಗೆ ಬರುತ್ತಿತ್ತು. ಅದರ ವಿಷಯದಲ್ಲಿ ಸತ್ಯಾಗ್ರಹವಲ್ಲದೆ ಬೇರೆ ಯಾವ ಕ್ರಮವನ್ನು ಯೋಚಿಸುವುದಕ್ಕೂ ಗಾಂಧೀಜಿಗೆ ಬಿಡುವಿರಲಿಲ್ಲ.

ದಕ್ಷಿಣ ಆಫ್ರಿಕದ ಭಾರತೀಯ ಸೋದರರ ಕಷ್ಟಗಳನ್ನು ಕೊನೆಗಾಣಿಸಲು ಕೈಲಾದ್ದನ್ನೆಲ್ಲ ಮಾಡಬೇಕಾಗಿ ದಾದಾಭಾಯಿ ಭಾರತೀಯರಲ್ಲಿ ಮನವಿ ಮಾಡಿಕೊಂಡನು. ಕಲ್ಕತ್ತ ಕಾಂಗ್ರೆಸಿನ ತನ್ನ ಅಧ್ಯಕ್ಷಭಾಷಣದಲ್ಲಿ ಭಾರತೀಯರು ಈ ಪ್ರಶ್ನೆಗೆ ತಮ್ಮ ಗಮನವನ್ನು ಕೊಡಬೇಕಾಗಿ ಪ್ರಾರ್ಥಿಸಿದನು. 'ಇಂಡಿಯ' ಪತ್ರಿಕೆಯಲ್ಲಿ ದಕ್ಷಿಣ ಆಫ್ರಿಕದ ಭಾರತೀಯರ ಪ್ರಶ್ನೆ ಬಹುಕಾಲದವರೆಗೆ ಪ್ರಮುಖವಿಷಯವಾಗಿರುತ್ತಿತ್ತು.

ದಕ್ಷಿಣ ಆಫ್ರಿಕದ ಭಾರತೀಯರಿಗೆ ಸಂಬಂಧಪಟ್ಟ ವಿಷಯದಲ್ಲಿ ದಾದಾಭಾಯಿ ಇಂಗ್ಲೆಂಡಿನಲ್ಲಿ ಬಹುವಾಗಿ ಶ್ರಮಿಸಿದ್ದನು. ಆದ್ದರಿಂದಲೇ ಟ್ರಾನ್ಸ್ವಾಲಿನ ಭಾರತೀಯರು ೧೯೦೯ ರ ಜುಲೈನಲ್ಲಿ, ವರ್ಸ್ಸೋವಾದಲ್ಲಿ ವಿಶ್ರಾಂತಿಪಡೆಯುತ್ತಿದ್ದ ದಾದಾಭಾಯಿಯನ್ನು ಕಂಡು, ಅವನಿಗೆ ಮನವಿಯನ್ನು ಅರ್ಪಿಸಿ, ಅವನ ಮೂಲಕ ತಮ್ಮ ಕಷ್ಟಗಳ ನಿವಾರಣೆಗಾಗಿ ಭಾರತೀಯರ ಸಹಾಯವನ್ನು ಕೋರಿದರು. ದಾದಾಭಾಯಿ ಪೋಲಕನನ್ನು ಭೇಟಿಮಾಡಿ ವಿಷಯವನ್ನು ಅವನೊಡನೆ ಚರ್ಚಿಸಿದನು. ಬೊಂಬಾಯಿನಲ್ಲಿ ೧೯೦೯ ರ ಸೆಪ್ಟೆಂಬರ್ ೧೪ ರಲ್ಲಿ ಸಾರ್ವಜನಿಕ ಸಭೆ ಏರ್ಪಾಡಾಯಿತು. ಸಭೆಗೆ ಬರಲು ದಾದಾಭಾಯಿಗೆ ಸಾಧ್ಯವಾಗಲಿಲ್ಲ; ಸಂದೇಶವನ್ನು ಮಾತ್ರ ಕಳಿಸಿದನು.

ದಕ್ಷಿಣ ಆಫ್ರಿಕದ ಭಾರತೀಯರ ಕಷ್ಟಗಳು ಅವನ ಮನಸ್ಸಿಗೆ ಬಹು ಸಂಕಟವನ್ನುಂಟುಮಾಡಿತ್ತು. ಅವನು ಸ್ನೇಹಿತರಿಗೆ ಬರೆಯುತ್ತಿದ್ದ ಪತ್ರಗಳಲ್ಲೂ ಸಾರ್ವಜನಿಕ ಸಂದೇಶಗಳಲ್ಲೂ ದಕ್ಷಿಣ ಆಫ್ರಿಕದ ಭಾರತೀಯರ ಪ್ರಶ್ನೆಯ ಪ್ರಸ್ತಾಪ ಇರುತ್ತಿತ್ತು. ತನ್ನ ೮೯ ನೆಯ ಜನ್ಮದಿನದ ಸಂದೇಶದಲ್ಲಿ ಬ್ರಿಟಿಷ್ ಸರಕಾರ ಈ ಪ್ರಶ್ನೆಯನ್ನು ಔದಾಸೀನ್ಯದಿಂದ ನೋಡುತ್ತಿರುವುದಕ್ಕಾಗಿ ಬಹು ಆತಂಕವನ್ನು ವ್ಯಕ್ತಪಡಿಸಿದ್ದನು.

ಈ ನಡುವೆ ಸತ್ಯಾಗ್ರಹದ ಚಳವಳಿ ಯಶಸ್ವಿಯಾಗಿ ನಡೆದು ಅಧಿಕಾರಿಗಳ ಮೆಚ್ಚುಗೆಗೂ ಪಾತ್ರವಾಯಿತು. ೧೯೧೪ ರಲ್ಲಿ ಸತ್ಯಾಗ್ರಹಿಗಳ ಮನಸ್ಸಿಗೆ ತೃಪ್ತಿಯಾಗುವಂತೆ ಸರಕಾರದೊಡನೆ ಒಪ್ಪಂದವಾಯಿತು. ಗಾಂಧೀಜಿ ಇಂಡಿಯಕ್ಕೆ ಹಿಂದಿರುಗಿದನು.

## ೩೨. ಉತ್ತರ ಲ್ಯಾಂಬೆತ್

ರಾಯಲ್ ಕಮಿಷನ್ನಿನ ಮುಂದೆ ಸಾಕ್ಷ್ಯ ನುಡಿದ ಮೇಲೆ ದಾದಾಭಾಯಿ ಚುನಾವಣಾ ಕ್ಷೇತ್ರವನ್ನು ಅರಸಲು ಆರಂಭಿಸಿದನು.

ಉತ್ತರ ಲ್ಯಾಂಬೆತ್ತಿನ ಲಿಬರಲ್ ಮತ್ತು ರ್‍ಯಾಡಿಕಲ್ ಸಂಘದ ಆಹ್ವಾನವನ್ನು ಮನ್ನಿಸಿ ದಾದಾಭಾಯಿ ೧೮೮೧ ರ ಜೂನ್ ತಿಂಗಳಲ್ಲಿ ಅಲ್ಲಿಗೆ ಹೋದನು. ಸಂಘದ ರಾಜಕೀಯ ಸಭೆ ಅವನನ್ನು ಉತ್ತರ ಲ್ಯಾಂಬೆತ್ತಿನ ಪರವಾಗಿ ಉಮೇದುವಾರನನ್ನಾಗಿ ತೆಗೆದುಕೊಂಡಿರುವುದಾಗಿ ಕಾರ್ಯದರ್ಶಿ ಆಗಸ್ಟ್ ೨೯ ರಲ್ಲಿ ತಿಳಿಸಿದನು. ಅದೇ ದಿನ ನ್ಯಾಷನಲ್ ಡೆಮೊಕ್ರಾಟಿಕ್ ಲೀಗಿನ ಉತ್ತರ ಲ್ಯಾಂಬೆತ್ತಿನ ಶಾಖೆಯ ಕಾರ್ಯದರ್ಶಿ ದಾದಾಭಾಯಿಯನ್ನು ತಾವು ಒಮ್ಮತದಿಂದ ತಮ್ಮ ಉಮೇದುವಾರನನ್ನಾಗಿ ತೆಗೆದುಕೊಂಡಿರುವುದಾಗಿ ತಿಳಿಸಿದನು. ಹತ್ತೊಂಭತ್ತು ಕೈಗಾರಿಕೆ ಸಂಸ್ಥೆಗಳ, ವೃತ್ತಿಸಂಘಗಳ ಮತ್ತು ಮತ್ತು ಮದ್ಯಪಾನ ನಿರೋಧಕ ಸಂಸ್ಥೆಗಳ ಪ್ರತಿನಿಧಿಗಳ ಸಮ್ಮೇಳನದಲ್ಲಿಯೂ ಉತ್ತರ ಲ್ಯಾಂಬೆತ್ ಕ್ಷೇತ್ರದ ಪರವಾಗಿ ದಾದಾಭಾಯಿಯನ್ನು ಪಾರ್ಲಿಮೆಂಟಿನ ಉಮೇದುವಾರನನ್ನಾಗಿ ತೆಗೆದುಕೊಳ್ಳಬೇಕೆಂದು ನಿರ್ಣಯವಾಯಿತು.

ಸೆಂಟ್ರಲ್ ಫಿನ್ಸ್‌ಬರಿ ಕ್ಷೇತ್ರದಲ್ಲಿ ತಲೆದೋರಿದ್ದ ಕಷ್ಟಗಳು ಇಲ್ಲಿಯೂ ಉದ್ಭವವಾದುವು. ಉತ್ತರ ಲ್ಯಾಂಬೆತ್ತಿನ ಲಿಬರಲ್ ಸಂಘದಲ್ಲಿ ಒಡಕು ತಲೆದೋರಿತ್ತು. ಕೆಲವರು ಸ್ಥಳೀಯ ಉಮೇದುವಾರನಾದ ವೈಟ್‌ಮನ್ ಎಂಬುವನನ್ನೂ ಇತರರು ದಾದಾಭಾಯಿಯನ್ನೂ ಉಮೇದುವಾರರನ್ನಾಗಿ ಮೆಚ್ಚಿದರು. ವೋಟು ತೆಗೆದುಕೊಳ್ಳಲಾಗಿ ದಾದಾಭಾಯಿಗೆ ೮೮ ವೋಟುಗಳೂ ವೈಟ್‌ಮನ್‌ಗೆ ೫೯ ವೋಟುಗಳೂ ಬಂದವು. ಆದರೆ ಅಲ್ಲಿಗೆ ಪ್ರಶ್ನೆ ಇತ್ಯರ್ಥವಾಗಲಿಲ್ಲ; ಮುಂದಿನ ಸಭೆಯಲ್ಲಿ ಅದು ತೀರ್ಮಾನವಾಗಬೇಕೆಂದೂ ಆಮೇಲೆ ಸಾರ್ವಜನಿಕ ಸಭೆಯೊಂದರಲ್ಲಿ ಊರ್ಜಿತವಾಗಬೇಕೆಂದೂ ಕಾರ್ಯದರ್ಶಿ ದಾದಾಭಾಯಿಗೆ ತಿಳಿಸಿದನು.

ಹದಿನೈದು ದಿನಗಳಲ್ಲಿ ಪರಿಸ್ಥಿತಿ ಬದಲಾವಣೆ ಹೊಂದಿತ್ತು. ಏಪ್ರಿಲ್ ೧೦ ರಲ್ಲಿ, ಕಾರ್ಯದರ್ಶಿ ಪ್ರಶ್ನೆಯನ್ನು ಪಂಚಾಯಿತಿಗೆ ಒಪ್ಪಿಸಲು ದಾದಾಭಾಯಿ ಒಪ್ಪುತ್ತಾನೆಯೇ ಎಂದು ವಿಚಾರಿಸಿದನು. ದಾದಾಭಾಯಿ ಸಮ್ಮತಿಸಲಿಲ್ಲ; ವಯಸ್ಸನ್ನೂ ಶ್ರಮವನ್ನೂ ಲೆಕ್ಕಿಸದೆ ಮನೆಮನೆಗೆ ಹೋಗಿ ವೋಟುಗಳನ್ನು ಬೇಡಿದನು.

ಚುನಾವಣೆಯ ಸಮಯ ಸಮೀಪಿಸಿದಾಗ ವೈಟ್‌ಮನ್ ತೀರಿಹೋದನು. ಆದರೂ ದಾದಾಭಾಯಿಯ ವಿಷಯದಲ್ಲಿ ಪ್ರತಿಭಟನೆ ತಪ್ಪಲಿಲ್ಲ. ವಿರೋಧಿಗಳು ವೈಟ್‌ಮನ್ನನ ಸ್ಥಾನದಲ್ಲಿ ಬೇರೊಬ್ಬ ಉಮೇದುವಾರನನ್ನು ನಿಲ್ಲಿಸಬೇಕೆಂದು ತವಕಿಸುತ್ತಿದ್ದರು. ಅನ್ಯಾಯವಾದ ಕಾರ್ಯಕ್ರಮಗಳು ಮುಂದುವರಿಯಲು ಅವಕಾಶಕೊಡಕೂಡದಾಗಿ ಮಾರ್ಟಿನ್‌ವುಡ್ ಲಿಬರಲ್ ಸಂಸ್ಥೆಯ ಕೇಂದ್ರ ಸಂಘಕ್ಕೆ ಮನವಿಮಾಡಿದನು. ವಿಷಯಗಳನ್ನು ತಿಳಿಸಲು ಕೇಂದ್ರ ಸಂಘಕ್ಕೆ ಒಂದು ನಿಯೋಗವೂ ಹೋಯಿತು. ಕೇಂದ್ರ ಸಂಘ ದಾದಾಭಾಯಿಯನ್ನೇ ಏಕಮಾತ್ರ ಉಮೇದುವಾರನನ್ನಾಗಿ ಅಂಗೀಕರಿಸಬೇಕಾಗಿ ಲ್ಯಾಂಬೆತ್ ಸಂಘಕ್ಕೆ ತಿಳಿಸಿದಾಗ್ಯೂ, ವಿರೋಧಿಗಳು ಹೊರೋಷಿಯೊ ಮೈಯರ್ ಎಂಬ ಸ್ಥಳೀಯನನ್ನು ಉಮೇದುವಾರನನ್ನಾಗಿ ನಿಲ್ಲಿಸಿದರು. ಚುನಾವಣೆಯಲ್ಲಿ ಮತದಾರರು ಸ್ಥಳೀಯನನ್ನೇ ಆರಿಸಿದರು. ಮೈಯರಿಗೆ ೨೧೮೨ ವೋಟುಗಳೂ ದಾದಾಭಾಯಿಗೆ ೭೩೩ ವೋಟುಗಳೂ ಬಂದವು.

'ಸೌತ್ ಲಂಡನ್ ಪ್ರೆಸ್' ಎಂಬ ಪತ್ರಿಕೆ ಚುನಾವಣೆಯ ವಿಷಯವಾಗಿ ಜನವರಿ ೨೦ ರಲ್ಲಿ ಬರೆಯುತ್ತ ದಾದಾಭಾಯಿಯ ಔದಾರ್ಯವನ್ನು ಹೊಗಳಿತು :

ಮಿ। ನವರೋಜಿ ಬಹು ಉದಾರ ಗುಣವುಳ್ಳವನು. ಉತ್ತರ ಲ್ಯಾಂಬೆತ್ ಚುನಾವಣೆಯ ವಿಷಯವನ್ನು ಪ್ರಸ್ತಾಪಿಸಿದಾಗ ಅವನು ಅದರ ವಿಷಯದಲ್ಲಿ ತಾನು ಹೇಳತಕ್ಕದ್ದೇನೂ ಇಲ್ಲ, ಲಿಬರಲ್ ಅಭ್ಯರ್ಥಿ ಜಯಶಾಲಿಯಾಗಿ ಬಂದನೆಂಬುದೇ ನನಗೆ ಸಂತೋಷವೆಂದು ತಿಳಿಸಿದನು.

# ೩೩. ಕಲ್ಕತ್ತ ಕಾಂಗ್ರೆಸ್

ಕಾಂಗ್ರೆಸಿನ ೨೨ ನೆಯ ಅಧಿವೇಶನದ ಸಮಯ ಹತ್ತಿರಕ್ಕೆ ಬರುತ್ತಿತ್ತು. ರಾಷ್ಟ್ರ ಸಂಸ್ಥೆಗೆ ಪ್ರಾಪ್ತ ವಯಸ್ಸಾಗಿತ್ತು, ಆದರೆ ಭಾರತಕ್ಕೆ ಅದರ ಆಜನ್ಮ ಹಕ್ಕು ದೊರೆತಿತ್ತೆ? ದೊರೆಯದಿದ್ದರೆ, ಅದು ಹಿರಿಯರ 'ಬೇಡುವ ನೀತಿ'ಯ ದೋಷವಲ್ಲವೆ? ತರುಣ ಭಾರತದ ಅಭಿಪ್ರಾಯ ಹೀಗೆ ತಿರುಗುತ್ತಿತ್ತು. ಅದರಿಂದ ಆದರ್ಶಗಳ ವಿಷಯದಲ್ಲೂ ಕಾರ್ಯವಿಧಾನದ ವಿಷಯದಲ್ಲೂ ಭಿನ್ನಾಭಿಪ್ರಾಯಗಳು ತಲೆದೋರಿದವು. ಕಾಂಗ್ರೆಸ್ಸನ್ನು ಪುನರುಜ್ಜೀವನಗೊಳಿಸುವ ಕಾರ್ಯಕ್ರಮ ಅಗತ್ಯವೆಂದರು ತರುಣರು. ಹಳೆಯ ಕಾಲದ ರಾಜನೀತಿಜ್ಞರು ಅದಕ್ಕೆ ಗಮನಕೊಡಲಿಲ್ಲ. ಬ್ರಿಟಿಷ್ ಸಾರ್ವಭೌಮತ್ವದ ಆಶ್ರಯದಲ್ಲಿ ಸ್ವರಾಜ್ಯ ಸ್ಥಾಪಿಸುವುದು ಹಳೆಯವರ ಗುರಿಯಾಗಿತ್ತು; ನೂತನರ ಗುರಿ ರಾಷ್ಟ್ರೀಯ ಸ್ವಯಮಾಡಳಿತ, ವಿದೇಶೀ ಪ್ರಭುತ್ವದಿಂದ ಸಂಪೂರ್ಣ ಬಿಡುಗಡೆ.

ಈ ಅಭಿಪ್ರಾಯ ಭೇದ ಜನರ ಮನಸ್ಸಿನಲ್ಲಿ ಉದ್ಭವಿಸಿದ್ದ ಕ್ರಾಂತಿಕಾರಕವಾದ ಬದಲಾವಣೆಯನ್ನು ಸೂಚಿಸುತ್ತಿತ್ತು. ಆಡಳಿತಗಾರರ ದೃಷ್ಟಿಯಿಂದ ಜನರ ರಾಜಕೀಯ ಶಿಕ್ಷಣ ಅಪಾಯಕಾರಿಯಾದ ಮಜಲನ್ನು ಮುಟ್ಟಿತ್ತು. ಬಹುಕಾಲದವರೆಗೆ ಬ್ರಿಟಿಷರೂ ಆಂಗ್ಲೋ ಇಂಡಿಯನ್ನರೂ ದೇಶದ ರಾಜಕೀಯ ಅಸಮಾಧಾನದ ವಿಷಯದಲ್ಲಿ ಉದಾಸೀನಭಾವದಿಂದ ಇದ್ದರು; ಈಗ ದೇಶದಲ್ಲಿ ಕಾಣಿಸಿಕೊಳ್ಳುತ್ತಿದ್ದ ಗಮನಾರ್ಹವಾದ ಬದಲಾವಣೆಗಳನ್ನು ಅವರು ಅಲಕ್ಷಿಸುವಂತಿರಲಿಲ್ಲ. ರಾಷ್ಟ್ರೀಯ ಸಂಸ್ಥೆಯಲ್ಲಿ

ನವಚೈತನ್ಯವನ್ನು ತುಂಬುತ್ತಿದ್ದ ಯುವಕರ ಪುನೋಭಾವದ ವಿಷಯದಲ್ಲಿ ಯಾವ ಸಂಶಯಕ್ಕೂ ಎಡೆಯಿರಲಿಲ್ಲ. ಈವರೆಗಿನ ಕಾಂಗ್ರೆಸಿನ ಆರ್ಭಟಗಳು ಕೊಂಚ ರೇಗಿಸುವಂತಿದ್ದರೂ ಅಪಾಯರಹಿತವಾಗಿದ್ದವು. ೨೧ ವರ್ಷಗಳ ಕಾಲ ರಾಷ್ಟ್ರ ಸಂಸ್ಥೆಯ ನಾಯಕರು ಬಹುವಾಗಿ ಶ್ರಮಿಸಿದ್ದರೂ, ರಾಜಭಕ್ತಿ ಮತ್ತು ವ್ಯವಸ್ಥಾ ಬದ್ಧ ಕ್ರಮಗಳೆಂಬ ತತ್ತ್ವಗಳಲ್ಲಿ ಸಿಕ್ಕಿ ಬಿದ್ದಿದ್ದರು. ಆ ಬಗೆಯ ಚಳವಳಿಯಲ್ಲಿ ಬ್ರಿಟಿಷ್ ಸಾರ್ವಭೌಮತ್ವಕ್ಕೆ ಯಾವ ಅಪಾಯವೂ ಇರಲಿಲ್ಲ. ಆದರೆ ತರುಣ ದಂಗೆಕಾರರು ಆ ಸಾರ್ವಭೌಮತ್ವಕ್ಕೆ ಪೆಟ್ಟು ಕೊಡಲು ನಿರ್ಧರಿಸಿದ್ದರು.

ಹಾಗಿದ್ದರೂ ತರುಣರಲ್ಲಿ ಕೆಲವರನ್ನುಳಿದರೆ ಬಹುಮಂದಿ ಇನ್ನೂ ಹಿಂಸಾ ಮಾರ್ಗವನ್ನು ತುಳಿಯಲು ಸಿದ್ಧರಿರಲಿಲ್ಲ. ಆ ಮಾರ್ಗ ಆತ್ಮಘಾತಕವಾಗುತ್ತಿತ್ತು. ತರುಣೋತ್ಸಾಹಿಗಳ ಕೈಯಲ್ಲಿ ಬಹಿಷ್ಕಾರವೆಂಬ ಆಯುಧವಿತ್ತು. ಅದನ್ನು ಅವರು ಸುರಕ್ಷಿತವಾಗಿ ಉಪಯೋಗಿಸಬಹುದಿತ್ತು: ಬ್ರಿಟಿಷ್ ವಸ್ತುಗಳ ಬಹಿಷ್ಕಾರ, ಅಗತ್ಯ ಬಿದ್ದರೆ ಶಾಸನ ಸಭೆಗಳ ಬಹಿಷ್ಕಾರ. ಕಾನೂನನ್ನೂ ರಾಜ್ಯ ವ್ಯವಸ್ಥೆಯನ್ನೂ ಉಲ್ಲಂಘಿಸದೆ, ಸರಕಾರದೊಡನೆ ಸಹಕರಿಸಲು ನಿರಾಕರಿಸಿ, ಅದನ್ನು ಬಗ್ಗಿಸ ಬಹುದಾಗಿತ್ತು. ತಮ್ಮ ಗುರಿ ನ್ಯಾಯವಲ್ಲವೆಂದೂ, ತಮ್ಮ ಕ್ರಮ ವ್ಯವಸ್ಥಾಬದ್ಧವಲ್ಲವೆಂದೂ ಯಾರು ಹೇಳ ಬಲ್ಲರು?

೧೯೦೬ ರಲ್ಲಿ ಕಾಂಗ್ರೆಸಿನ ಎರಡು ಶಾಖೆಗಳಲ್ಲಿ—ಉಪಾಯವಾದಿಗಳು (Moderates) ಮತ್ತು ಖಂಡಿತವಾದಿಗಳ (Extremists)ಲ್ಲಿ ಭಿನ್ನತೆ ಈ ಬಗೆಯಾಗಿತ್ತು. ಕಾಂಗ್ರೆಸಿನ ಅಧ್ಯಕ್ಷರು ಯಾರಾಗಿರಬೇಕು ಎಂಬ ಪ್ರಶ್ನೆ ಜನರ ಮನಸ್ಸನ್ನು ಕಲಕಿತ್ತು. ಬಂಗಾಳದ ತರುಣರು ಹಳೆಯ ತಲೆಗಳನ್ನು ಮುಳುಗಿಸುವ ಪ್ರಬಲ ಸ್ಥಿತಿಯಲ್ಲಿದ್ದರು. ಸ್ವಾತಂತ್ರ್ಯದ ಹೋರಾಟದಲ್ಲಿ ಕಾರಾಗೃಹವಾಸವನ್ನು ಅನುಭವಿಸಿದ್ದ ಬಾಲಗಂಗಾಧರ ತಿಲಕನನ್ನು ಅವರು ಅಧ್ಯಕ್ಷಪದವಿಗೆ ಚುನಾಯಿಸುವವರಾಗಿದ್ದರು. ಬಂಗಾಳದ ನಾಯಕರಾದ ಸುರೇಂದ್ರನಾಥ ಬಾನರ್ಜಿ ಮತ್ತು ಭೂಪೇಂದ್ರ ನಾಥಬಸು ಇವರು ವಿಷಯವನ್ನು ಮೊದಲೇ ಅರಿತು, ಅಧ್ಯಕ್ಷನನ್ನಾಗಿ ಚುನಾಯಿಸಿದರ ಒಪ್ಪಿಕೊಳ್ಳಬಹುದೇ ಎಂದು ದಾದಾಭಾಯಿಯನ್ನು ಕಡಲ ತಂತಿಯ

ಮೂಲಕ ವಿಚಾರಿಸಿದರು. ಸನ್ಮಾನ್ಯನಾದ ದಾದಾಭಾಯಿಯನ್ನು ದೇಶ ದಲ್ಲಿ ಯಾರೂ ವಿರೋಧಿಸಲಾರರೆಂಬ ಭರವಸೆ ಅವರಿಗಿತ್ತು. ೮೧ ವರ್ಷ ಗಳ ಆ ವೃದ್ಧನು ಪ್ರಯಾಣದ ಕಷ್ಟಗಳನ್ನಾಗಲಿ, ತನ್ನ ಆರೋಗ್ಯ ಸ್ಥಿತಿಯ ನ್ನಾಗಲಿ ಅಥವಾ ಒಂದಲ್ಲ ಒಂದು ಪಕ್ಷದ ಮನಸ್ಸನ್ನು ನೋಯಿಸುವ ಪರಿ ಸ್ಥಿತಿ ಒದಗಬಹುದೆಂಬ ವಿಷಯವನ್ನಾಗಲಿ, ಅದರಿಂದ ತನ್ನ ಕೀರ್ತಿಗೆ ಅಪಾಯ ಒದಗಬಹುದೆಂಬುದನ್ನಾಗಲಿ ಲೆಕ್ಕಿಸವೆ, ತರುಣರಿಗೆ ಸಹಜವಾದ ಉತ್ಸಾಹದಿಂದ ಅಧ್ಯಕ್ಷತೆಗೆ ಒಪ್ಪುವುದಾಗಿ ತಿಳಿಸಿದನು.

ದಾದಾಭಾಯಿ ಉಪಾಯವಾದಿ ಪಕ್ಷದವನೂ ಆಗಿರಲಿಲ್ಲ ; ಖಂಡಿತ ವಾದಿ ಪಕ್ಷದವನೂ ಆಗಿರಲಿಲ್ಲ. ತನ್ನ ಹೃದಯದಲ್ಲಿರುವುದನ್ನು ಹೇಳಲು ಅವನು ಎಂದೂ ಹಿಂಪೆಗೆದವನಲ್ಲ. ಒಂದು ಪಕ್ಷವನ್ನಾಗಲಿ ಇನ್ನೊಂದ ನ್ನಾಗಲಿ ತೃಪ್ತಿಪಡಿಸುವುದಕ್ಕಾಗಿ ತನ್ನ ಮಟ್ಟದಿಂದ ಇಳಿಯುವವನಲ್ಲ. ಲಾರ್ಡ್ ಕರ್ಜನ್ನನ ದಬ್ಬಾಳಿಕೆಯ ತರುವಾಯ ಅವನ ಮಾತುಗಳಲ್ಲಿ ಉಗ್ರತೆ ಕಾಣಬರುತ್ತಿತ್ತು. ಅವನಿನ್ನೂ ವ್ಯವಸ್ಥಾಬದ್ಧವಾದ ಕ್ರಮಗಳಿಂದ ಸ್ವಾತಂತ್ರ್ಯವನ್ನು ಪಡೆಯಬಹುದೆಂದು ನಂಬಿದ್ದನು, ನಿಜ. ಆದರೆ ಈಗ ಅವನು ಹಿಂದಿನಂತೆ ಬ್ರಿಟಿಷ್ ಸಾರ್ವಜನಿಕಾಭಿಪ್ರಾಯವೆಂಬ ನ್ಯಾಯಾ ಲಯದ ಮುಂದೆ ಬೇಡುವವನಾಗಿರಲಿಲ್ಲ.

ಮೋತೀಲಾಲ್ ಘೋಷ್ ದಾದಾಭಾಯಿಯ ಅಧ್ಯಕ್ಷತೆಯನ್ನು ಸ್ವಾಗ ತಿಸಿ ಅವನಿಗೆ ಪತ್ರ ಬರೆದಿದ್ದನು. ಅದರಲ್ಲಿ ಬಂಗಾಳದ ದುಃಖ ಪರಂಪರೆ ಗಳನ್ನೂ ಜನರ ಉದ್ರಿಕ್ತವಾದ ಮನಃಸ್ಥಿತಿಯನ್ನೂ ವರ್ಣಿಸಿದ್ದನು. ಕಾಂಗ್ರೆಸಿನ ಎರಡು ಶಾಖೆಗಳಲ್ಲಿ ತಲೆದೋರಿದ್ದ ಬಿರುಕನ್ನು ಮುಚ್ಚುವುದು ಬಹು ಕಷ್ಟವೆಂದು ತಿಳಿಸಿದ್ದನು. ಆದರೆ ದಾದಾಭಾಯಿ ಯುದ್ಧರಂಗವನ್ನು ಪ್ರವೇಶಿಸಲು ಆಗಲೆ ಸಮ್ಮತಿಸಿದ್ದನು. ನವೆಂಬರ್ ೨೯ ರಲ್ಲಿ ಅವನು ಇಂಗ್ಲೆಂಡಿನಿಂದ ಹೊರಡುವವನಾಗಿದ್ದನು.

ಕಲ್ಕತ್ತೆಯ ಕಾಂಗ್ರೆಸ್ ಅಧಿವೇಶನದಲ್ಲಿ ಸೇರಿದಷ್ಟು ಜನ ಯಾವ ರಾಜಕೀಯ ಸಭೆ ಸಮ್ಮೇಳನಗಳಲ್ಲೂ ಸೇರಿರಲಿಲ್ಲ. ಸ್ವಾಗತ ಸಮಿತಿಯ ಅಧ್ಯಕ್ಷನಾದ ರಾಷ್ ಬಿಹಾರಿ ಘೋಷನ ಭಾಷಣದ ಮುಖ್ಯ ಸೂತ್ರಗಳು ಸ್ವದೇಶಿ ಮತ್ತು ಬಹಿಷ್ಕಾರ. ದಾದಾಭಾಯಿಯ ಭಾಷಣದ ಸೂತ್ರ ಸ್ವರಾಜ್ಯ.

ಕೆಲವು ವರ್ಷಗಳಿಂದ ಅವನು ಸ್ವರಾಜ್ಯವೇ ಭಾರತದ ಕಷ್ಟಗಳಿಗೆ ಮದ್ದು ಎಂದು ಹೇಳುತ್ತಿದ್ದನು: ಆದರ ಕಾಂಗ್ರೆಸ್ ವೇದಿಕೆಯಿಂದ ಸ್ವರಾಜ್ಯದ ಹಕ್ಕನ್ನು ಪ್ರತಿಪಾದಿಸುವುದಕ್ಕೆ ಇದೇ ಮೊದಲು. ಸಭಿಕರು ಅವನ ಭಾಷಣ ದಿಂದ ರೋಮಾಂಚಿತರಾದರು :

ನಾವು ಬ್ರಿಟಿಷ್ ಪ್ರಜೆಗಳು ಹೌದೊ ಅಲ್ಲವೊ? ಬ್ರಿಟಿಷ್ ಧ್ವಜದ ಕೆಳಗೆ ಬಂದೊಡನೆಯೆ, ನಾವು ಸ್ವತಂತ್ರ ಬ್ರಿಟಿಷ್ ಪ್ರಜೆಗಳಾದೆವು. ಆದ್ದ ರಿಂದ ನಮ್ಮ ಹಕ್ಕನ್ನು ಯಾರೂ ಪ್ರಶ್ನಿಸಲಾರರು. ಬ್ರಿಟಿಷರಿಗಿರುವ ಹಕ್ಕು ಗಳಿಲ್ಲ, ಅವರು ವಚನವಿತ್ತಿರುವ ಹಕ್ಕುಗಳಿಲ್ಲ, ನಮ್ಮ ಅಜನ್ಮಸಿದ್ಧವಾದ ಹಕ್ಕುಗಳೆಂದು ಕೇಳಲು ಕಾರಣವಿದೆ. ಬ್ರಿಟನ್ನಿನ ರಾಜ್ಯಾಡಳಿತ ಎಲ್ಲಾ ವಿಷಯಗಳಲ್ಲಿ—ಅಂದರೆ ಎಲ್ಲ ಉದ್ಯೋಗಗಳಲ್ಲಿ, ಇಲಾಖೆಗಳಲ್ಲಿ, ಇತರ ವಿವರಗಳಲ್ಲಿ, ಆ ದೇಶದ ಜನರ ಕೈಯುಲ್ಲಿರುವಂತೆಯೇ, ಇಂಡಿಯಾದಲ್ಲೂ ನಮ್ಮವರ ಕೈಯಲ್ಲಿರಬೇಕು. ಬ್ರಿಟನ್ನಿನಲ್ಲಿಯೂ ಕಾಲೊನಿಗಳಲ್ಲಿಯೂ ತೆರಿಗೆ ಎತ್ತುವುದೂ ಶಾಸನ ಮಾಡುವುದೂ, ತೆರಿಗೆಯನ್ನು ಖರ್ಚು ಮಾಡುವ ಹಕ್ಕೂ, ಜನರ ಪ್ರತಿನಿಧಿಗಳ ಕೈಯಲ್ಲೇ ಇರುವಂತೆ, ಇಂಡಿಯಾದಲ್ಲೂ ಇರಬೇಕು; ಮತ್ತು ಇಂಗ್ಲೆಂಡ್ ಇಂಡಿಯಾಗಳ ನಡುವಣ ಹಣಕಾಸಿನ ಸಂಬಂಧಗಳು ಸಮಾನರಲ್ಲಿ ನಡೆಯುವಂತೆ ತೀರ್ಮಾನವಾಗಬೇಕು.

ನಾವು ಅನುಗ್ರಹಕ್ಕಾಗಿ ಬೇಡುತ್ತಿಲ್ಲ. ನ್ಯಾಯವನ್ನು ಮಾತ್ರ ಕೇಳು ತ್ತೇವೆ. ನಾವು ಕೇಳುವುದನ್ನೆಲ್ಲ ಒಂದು ಮಾತಿನಲ್ಲಿ ಸಂಗ್ರಹಿಸಬಹುದು— ಬ್ರಿಟನ್ನಿನಲ್ಲಿ ಅಥವಾ ಕಾಲೊನಿಗಳಲ್ಲಿ ಇರುವಂಥ— 'ಸ್ವಯಮಾಡಳಿತ' ಅಥವಾ **ಸ್ವರಾಜ್ಯ.**

* * * *

ನಾನು ಚಳವಳಿಯನ್ನು ಆರಂಭಿಸಿದಂದಿನಿಂದ ಇದುವರೆಗೆ ಆಗಿರುವ ನಿರಾಶೆಗಳು ಎಂಥ ಹೃದಯವನ್ನಾದರೂ ಒಡೆಯಲು ಸಾಕು, ನಿರಾಶೆಯಿಂದ ದಂಗೆಗೆ ಒಯ್ಯಲೂ ಸಾಕು ... ಆದರೆ ನಾನು ಹತಾಶನಾಗಿಲ್ಲ ನನ್ನ ಪಾಲಿಗೆ ಉಳಿದಿರಬಹುದಾದ ಅಲ್ಪ ದಿನಗಳಲ್ಲಿ.... ಇಂಡಿಯಾ ವಿಷಯದಲ್ಲಿ ಸ್ವಯ ಮಾಡಳಿತ ನೀತಿಯನ್ನು ಪ್ರಾಮಾಣಿಕವಾಗಿ ಅನುಸರಿಸುವುದನ್ನು ನೋಡುವ ಭರವಸೆ ಇಟ್ಟುಕೊಂಡಿದೇನೆ, ಮತ್ತು ಈ ಕೂಡಲೆ ಆ ಗುರಿಯ ಸಾಧನೆಗೆ ಬೇಕಾದ ಆರಂಭ ಕಾರ್ಯ ನಡೆಯುವುದಾಗಿ ಆಸೆಯಿಟ್ಟುಕೊಂಡಿದೇನೆ.

ಸದ್ಯದ ಸ್ಥಿತಿಯಲ್ಲಿ ಜನರ ಮನಸ್ಸನ್ನು ಕಲಕಿದ್ದ ವಿಷಯಗಳನ್ನು ಪ್ರಸ್ತಾವಿಸಿ ಬಂಗಾಳದ ವಿಭಜನೆಯನ್ನು 'ಒಂದು ದೊಡ್ಡ ಅವಿವೇಕ'ವೆಂದು ವಿವರಿಸಿದನು. 'ಸ್ವದೇಶಿ' ನಮಗೆ ಹೊಸತಲ್ಲವೆಂದನು. ಅನೇಕ ವರ್ಷ

ಗಳಿಂದ ಸ್ವದೇಶಿ ಚಳವಳಿ ಬೊಂಬಾಯಿಯಲ್ಲಿ ಜಾರಿಯಲ್ಲಿದೆಯೆಂದು ತಿಳಿಸಿ "ಇಪ್ಪತ್ತು ವರ್ಷಗಳಿಂದ ನಾನು ಕಾಬ್ಡೆನ್ ಕ್ಲಬ್ಬಿನ ಸದಸ್ಯನಾಗಿದೇನೆ. ಅದರ ಕಾರ್ಯಕಾರೀ ಸಮಿತಿಯಲ್ಲಿಯೂ ಇದೇನೆ; ಆದರೂ ಸ್ವದೇಶಿ—ಇಂಡಿಯಾದ ಅಸ್ವಾಭಾವಿಕವಾದ ಆರ್ಥಿಕವಾದ ಅವ್ಯವಸ್ಥೆಯ ಸ್ಥಿತಿಯಲ್ಲಿ–ಬಿಡಲಾರದ ಅಗತ್ಯವಾಗಿದೆ" ಎಂದು ನುಡಿದನು. ಇಂಡಿಯದ ಜನರೆಲ್ಲ ಜಾತಿಮತ ಪಂಗಡಗಳ ಭೇದವನ್ನು ತೊರೆದು ಒಗ್ಗಟ್ಟಿನಿಂದ ವರ್ತಿಸಬೇಕೆಂದು ಮನವಿಮಾಡಿದನು.

ಭಾಷಣ ಸಮಾಧಾನ ರೀತಿಯದಾಗಿತ್ತು. ಅದರಲ್ಲಿ ಉಗ್ರವಾದುದೇನೂ ಇರಲಿಲ್ಲಿ. ಚರ್ಚಾಸ್ಪದವಾದ ಸ್ವದೇಶಿ ಮೊದಲಾದ ವಿಷಯಗಳನ್ನು ಒಂದೆರಡು ವಾಕ್ಯಗಳಲ್ಲಿ ಪೂರೈಸಿದ್ದನು. ಬಹಿಷ್ಕಾರ ಎಂಬ ಪದ ಸಹ ಭಾಷಣದಲ್ಲಿ ಬರಲಿಲ್ಲ. ದಾದಾಭಾಯಿಯ ನಿಲವು ಏನೆಂದು ಜನ ಚರ್ಚಿಸಲಾರಂಭಿಸಿದರು. ಕಾಂಗ್ರೆಸಿನಲ್ಲಿ ತೋರಿದ ಬಿರುಕನ್ನು ಮುಚ್ಚುವ ಪ್ರಯತ್ನ ಅದರಲ್ಲಿ ಕಂಡುಬರಲಿಲ್ಲ. ಬ್ರಿಟಿಷರ ನ್ಯಾಯಪಕ್ಷಪಾತ ಬುದ್ಧಿಯಲ್ಲಿ ಅದೇ ಹಿಂದಿನ ನಂಬಿಕೆ ಭಾಷಣದಲ್ಲಿ ವ್ಯಕ್ತವಾಗಿತ್ತು. ಹೋರಾಟದ ಕ್ರಮದಲ್ಲಿ, ವಿಧಾನದಲ್ಲಿ, ಯಾವ ಬದಲಾವಣೆಯೂ ವ್ಯಕ್ತವಾಗಿರಲಿಲ್ಲ. ಅವನ ಭಾಷಣದಲ್ಲಿ ತರುಣರಿಗೆ ಮುಂದುಗಾಣ್ಕೆಯೇನೂ ತೋರಿಬರಲಿಲ್ಲ; ಉಪಾಯವಾದಿ (Moderates) ಗಳಿಗೆ ಮಾತ್ರ ಭಾಷಣದಿಂದ ತೃಪ್ತಿಯಾಯಿತು.

ವಿಷಯ ನಿರ್ಧಾರಕ ಸಮಿತಿಯಲ್ಲಿ, ದೇಶದಾದ್ಯಂತ ಬಹಿಷ್ಕಾರ ಚಳವಳಿಯನ್ನು ಹೂಡಬೇಕೆಂಬ ಸೂಚನೆಗೆ ಅವಕಾಶ ಕೊಡದಿದ್ದುದರಿಂದ, ಗಲಭೆಗಳಾಯಿತು. ಬಿಪಿನ್ ಚಂದ್ರಪಾಲ್, ಖಪರ್ದೆ ಮೊದಲಾದ ಖಂಡಿತವಾದಿಗಳು ಸಭಾತ್ಯಾಗ ಮಾಡಿದರು. ಆದರೆ ಕಾಂಗ್ರೆಸ್ ಅಧಿವೇಶನದಲ್ಲಿ ಮಾತ್ರ ಒಂದು ರೀತಿಯ ಒಗ್ಗಟ್ಟು ಕಂಡು ಬಂತು. ಬಂಗಾಳದ ವಿಭಜನೆಯನ್ನು ಪ್ರತಿಭಟಿಸಲು ಬಂಗಾಳದಲ್ಲಿ ಆರಂಭವಾದ ಬಹಿಷ್ಕಾರ ಚಳವಳಿ ನ್ಯಾಯವಾಗಿದೆ, ಎಂಬ ಸೂಚನೆಯನ್ನು ಕುರಿತು ಉಗ್ರವಾದ ಚರ್ಚೆಯೇನೊ ನಡೆಯಿತು. ಖಂಡಿತವಾದಿಗಳು ಆ ನಿರ್ಣಯ ಇಡೀ ದೇಶಕ್ಕೆ ಅನ್ವಯವಾಗುತ್ತದೆ ಎಂದು ಅರ್ಥ ಮಾಡಿದರು. ಉಪಾಯವಾದಿಗಳು ಬಂಗಾಳ

ದೇಶಕ್ಕೆ ಮಾತ್ರ ಅನ್ವಯವಾಗುತ್ತದೆ ಎಂದು ನಿರ್ಣಯದ ಅರ್ಥವೆಂದು ವಾದಿಸಿದರು.

ಒಮ್ಮತದಿಂದ ಕೆಲಸಗಳನ್ನು ನಿರ್ವಹಿಸಬೇಕಾಗಿತ್ತು. ಅದನ್ನು ಅರಿಯುವ ದೇಶಾಭಿಮಾನವೂ ರಾಜನೀತಿ ಕೌಶಲವೂ ತಿಲಕನಲ್ಲಿತ್ತು. ತನಗೆ ನಿರಾಶೆಯುಂಟಾಗಿದ್ದರೂ ಅವನು ಒಮ್ಮತದ ಧ್ವನಿಯನ್ನೆತ್ತಿದನು. ಸ್ವದೇಶೀ ನಿರ್ಣಯವನ್ನು ಸಮರ್ಥಿಸಿ ಮಾತಾಡುತ್ತ ತೃಪ್ತಿಕರವಾದ ಪರಿಹಾರವನ್ನು ಕಂಡುಹಿಡಿದುದಕ್ಕಾಗಿ ಸಂತೋಷವನ್ನು ವ್ಯಕ್ತಪಡಿಸಿದನು. ಆಂಗ್ಲೊ ಇಂಡಿಯನ್ ಮಿತ್ರರು–ಕಾಂಗ್ರೆಸ್ಸು ಪ್ರಾಪ್ತ ವಯಸ್ಸಿಗೆ ಬಂದೊಡನೆಯೆ ಕಲ್ಕತ್ತೆಯಲ್ಲಿ ಕೊನೆಗಾಣುವುದೆಂದು ಭವಿಷ್ಯ ನುಡಿದಿದ್ದರು. ದಕ್ಷನೂ ನ್ಯಾಯಪರನೂ ಆದ ಅಧ್ಯಕ್ಷನ ನೇತೃತ್ವದಲ್ಲಿ ನೇರಿ, ಕಾಂಗ್ರೆಸ್ ಆ ಭವಿಷ್ಯವನ್ನು ಸುಳ್ಳು ಮಾಡಿದೆ, ಎಂದು ತಿಲಕ್ ನುಡಿದನು : ಭಿನ್ನತೆಗಳನ್ನು ಸರಿಪಡಿಸಿಕೊಂಡಿದ್ದೇವೆ; ಎರಡು ಪಕ್ಷದವರೂ ಪ್ರಶ್ನೆಯನ್ನು ಒಡಂಬಡಿಕೆಯ ದೃಷ್ಟಿಯಿಂದ ವೀಕ್ಷಿಸಿ, ಇಬ್ಬರೂ ಅರ್ಧ ದಾರಿ ನಡೆದು ಬಂದು ನೇರಿದ್ದೇವೆ.

## ೩೪. ಸ್ವದೇಶಕ್ಕೆ ಮರಳಿದ್ದು

ಕಾಂಗ್ರೆಸ್ ಶಿಬಿರದಲ್ಲಿ ಉಂಟಾಗಿದ್ದ ಒಡಕನ್ನು ತಾತ್ಕಾಲಿಕವಾಗಿ ಸರಿಪಡಿಸಿ, ಕಾಂಗ್ರೆಸ್ ಅಧಿವೇಶನವನ್ನು ಶಾಂತಿಯುತವಾಗಿ ಪರಿಸಮಾಪ್ತಿಗೊಳಿಸಲಾಯಿತು. ಕಷ್ಟ ಸಾಧ್ಯವಾದ ಆ ಕೆಲಸವನ್ನು ದಾದಾಭಾಯಿ ಧೈರ್ಯದಿಂದ ಕೈಕೊಂಡು ಗೌರವಯುತವಾಗಿ ಸಾಧಿಸಿದನೆಂಬುದು ಸರ್ವರ ಅಭಿಪ್ರಾಯವಾಗಿತ್ತು. ಅದರಿಂದ ತೃಪ್ತಿಗೊಂಡು, ಸ್ವಾತಂತ್ರ್ಯದ ಹೋರಾಟವನ್ನು ಮುಂದುವರಿಸಲು, ಫೆಬ್ರುವರಿ ೭ರಲ್ಲಿ ಲಂಡನ್ನಿಗೆ ಹಿಂದಿರುಗಿದನು. ಆದರೆ ಐವತ್ತು ವರ್ಷಗಳಿಗೂ ಮೇಲ್ಪಟ್ಟ ಸತತೋತ್ಸಾಹದ ಸಾರ್ವಜನಿಕ ಜೀವನದಿಂದ ಜೀರ್ಣವಾದ ಶರೀರಕ್ಕೆ ಶ್ರಮ ಅತಿಯಾಯಿತು. ೮೧ ವರ್ಷಗಳ ಆ ವಯಸ್ಸಿನಲ್ಲಿ ಆತನು ಹಿಂದಿನ ಯುವಕನಾಗಿರಲಿಲ್ಲ.

ಆದರೂ ಅವನ ಜನ್ಮದಿನವಾದ ೧೯೦೭ರ ಸೆಪ್ಟೆಂಬರ್ ೪ನೆಯ ತಾರೀಕಿನ ದಿವಸ ಸಂದರ್ಶಿಸಲು ಬಂದ 'ಟ್ರಿಬ್ಯೂನ್' ಪತ್ರಿಕೆಯ ಪ್ರತಿನಿಧಿ

ಕೇಳಿದ ಪ್ರಶ್ನೆಗೆ ಉತ್ತರವಾಗಿ "ನನ್ನ ದೇಹಸ್ಥಿತಿ ಅತ್ಯುತ್ತಮವಾಗಿದೆ" ಎಂದು ಹೇಳಿ, ಮಸ್ಲಿನ್ ಜಾಕೀಟಿನ ಬದಲು ಕಾರ್ಡ್ ಕೋಟನ್ನು ಹಾಕಿರುವುದರಿಂದ ಕೊಂಚ ಅಹಿತವಾಗಿದೆ ಎಂದು ತಿಳಿಸಿದನು.

"ಈ ಉತ್ತಮ ಸ್ಥಿತಿಯನ್ನು ಹೇಗೆ ಕಾಪಾಡಿಕೊಂಡು ಬಂದಿರಿ ?"

"ಭೋಗದ ವರ್ಜನೆ, ಹೊಗೆಸೊಪ್ಪನ್ನು ಸೇವಿಸದಿರುವುದು, ಮಸಾಲೆ ಪದಾರ್ಥಗಳನ್ನು ಬಿಟ್ಟಿರುವುದು ಮತ್ತು ಕಷ್ಟಪಟ್ಟು ಕೆಲಸ ಮಾಡುವುದು—ಇವುಗಳಿಂದ ಆರೋಗ ದೃಢಕಾಯನಾಗಿದೇನೆ. ಬೆಳಗ್ಗೆ ೮-೩೦ಕ್ಕೆ ಹೊತ್ತರೆಯು ಊಟಮಾಡಿ, ಆಫೀಸಿಗೆ ಹೋಗುವವರೆಗೂ ಮನೆಯಲ್ಲಿ ಕುಳಿತು ಬರೆವಣಿಗೆ ಕೆಲಸಮಾಡುತ್ತೇನೆ. ೧೧ ರಿಂದ ೬-೪೫ ರವರೆಗೆ ಅಲ್ಲಿ ಕೆಲಸ ಮಾಡುತ್ತೇನೆ. ಆಮೇಲೆ ಊಟ ಮಾಡುತ್ತೇನೆ. ಸುಮಾರು ಒಂದು ಗಂಟೆ ಕಾಲ ಸಂಚಾರ ಹೋಗಿ ಬಂದು ಮಧ್ಯರಾತ್ರಿಯ ವರೆಗೆ ಕೆಲಸಗಳನ್ನು ಮುಂದುವರಿಸುತ್ತೇನೆ. ಇಂಡಿಯಾ ದೇಶದೊಡನೆ ನನ್ನ ಪತ್ರವ್ಯವಹಾರ ಅಪಾರವಾಗಿರುತ್ತದೆ."

ಆದರ ಯೌವನದ ಆ ಹುರುಪೂ ಶಕ್ತಿಯೂ ಮಾಯವಾಗಿದ್ದವು, ತಿರುಗಿ ಬರುವಂತಿರಲಿಲ್ಲ. ಲಂಡನ್ನಿಗೆ ಹಿಂದಿರುಗಿದ ತರುಣದಲ್ಲಿಯೇ ಬ್ರಾಂಕೈಟಿಸ್ (ಶ್ವಾಸನಾಳಗಳ ಒಳಚರ್ಮದ ಊತ) ಕಾಯಿಲೆಯಿಂದ ಹಾಸಿಗೆ ಹಿಡಿದನು; ಸ್ನೇಹಿತರಿಗೆಲ್ಲ ಬಹುವಾಗಿ ಗಾಬರಿಯಾಯಿತು. ಮಾರ್ಚಿಯ ಮೊದಲ ವಾರದಲ್ಲಿ ಕೊಂಚ ಗುಣ ತೋರಿತು; ಏಪ್ರಿಲ್ ೨೬ ರಲ್ಲಿ, ರೋಗಿ ಬಹುಮಟ್ಟಿಗೆ ಸುಧಾರಿಸಿರುವ ಸಂತೋಷದ ಸುದ್ದಿಯನ್ನು 'ಇಂಡಿಯ' ಪತ್ರಿಕೆ ಪ್ರಕಟಿಸಿತು. ಬೆಕ್ಸ್‌ಹಿಲ್ ಆನ್‌ಸಿ ಎಂಬ ಸ್ಥಳದಲ್ಲಿ ಹವಾ ಬದಲಾವಣೆ ಪಡೆದದ್ದರಿಂದ ದೇಹಸ್ಥಿತಿ ಇನ್ನೂ ಉತ್ತಮಗೊಂಡಿತು. ಆದರೆ ಡಾಕ್ಟರುಗಳೂ ಬ್ರಿಟಿಷ್ ಸ್ನೇಹಿತರೂ ಅವನು ಸಾರ್ವಜನಿಕ ಜೀವನದಿಂದ ನಿವೃತ್ತನಾಗಿ ಸ್ವದೇಶಕ್ಕೆ ಮರಳಿ, ಅಲ್ಲಿ ಹಿತವರಿಂದ ಪ್ರೀತಿಯ ಶುಶ್ರೂಷೆಗೊಳ್ಳುತ್ತ, ದೇಶಬಾಂಧವರ ಪ್ರೀತ್ಯಾದರಗಳಿಂದ ಸಂತಸಗೊಳ್ಳುತ್ತ. ಕೊನೆಯ ದಿವಸಗಳನ್ನು ಕಳೆಯಬೇಕೆಂದು ಸಲಹೆ ಮಾಡಿದರು.

ಆದರೆ ಸ್ವದೇಶಕ್ಕಾಗಿ ತಾನು ಮಾಡಬೇಕಾದ ಕೆಲಸವಿನ್ನೂ ಪೂರೈಸಿಲ್ಲವೆಂದು ದಾದಾಭಾಯಿಯ ಮನಸ್ಸಿಗೆ ತೋರಿತು, ಸ್ವಯಂ ರಾಜ್ಯಾಡಳಿತದ ಹಕ್ಕನ್ನು ಸಂಪಾದಿಸುವುದಕ್ಕಾಗಿ ಆಗತಾನೆ ಹೊಸ ಚಳವಳಿಯನ್ನು ಹೂಡಿ

ದ್ದನು. ಅದರಲ್ಲಿ ನಿರ್ಣಾಯಕವಾದ ಒಂದು ಜಯವನ್ನಾದರೂ ಸಂಪಾದಿಸುವುದಕ್ಕೆ ಮೊದಲೇ ಯುದ್ಧ ಪಂಕ್ತಿಯಿಂದ ಹಿಂದಿರುಗುವುದು ಉಚಿತವೆನಿಸಲಿಲ್ಲ.

ದಾದಾಭಾಯಿಯನ್ನು ದಕ್ಷಿಣ ನಾರ್ವುಡ್ಡಿನ ರೋಗೋಪಚಾರ ಗೃಹವೊಂದಕ್ಕೆ ಸಾಗಿಸಿದರು. ಅಲ್ಲಿ ಕ್ರಮೇಣ ಶಕ್ತಿಯನ್ನು ಹೊಂದಿ, ತನ್ನ ದೀರ್ಘ ಪ್ರಯಾಣಕ್ಕೆ ಅಗತ್ಯವಾದ ಕಸುವನ್ನು ತಕ್ಕ ಮಟ್ಟಿಗೆ ಸಂಪಾದಿಸಿದನು. ಹೋರಾಟದ ಸಮಯಗಳಲ್ಲಿ ಅವನು ತೋರುತ್ತಿದ್ದ ದೃಢವಾದ ಮನಃಶಕ್ತಿ, ಪ್ರಶಾಂತವಾದ ಚಿತ್ತವೃತ್ತಿ, ಉಲ್ಲಾಸಶೀಲ ಪ್ರವೃತ್ತಿ, ಈ ಗುಣಗಳೆಲ್ಲ, ಈ ಕಾಯಿಲೆಯ ಸಮಯದಲ್ಲಿ ತಾವಾಗಿ ಪ್ರಕಾಶಕ್ಕೆ ಬಂದವು. ಅಕ್ಟೋಬರ್ ೧೧ ನೆಯ ತಾರೀಕಿನ ದಿವಸ—ಅದು ಪ್ರಯಾಣಕ್ಕೆ ಗೊತ್ತಾದ ದಿವಸ—ಸೂರ್ಯನು ಮಧ್ಯ ಸೆಪ್ಟೆಂಬರಿನ ಕಾವಿನಿಂದ ಪ್ರಕಾಶವಾಗಿ ಮೆರೆಯುತ್ತಿದ್ದನು. ಹಾಯಾಗಿ ಓಡುವ ಮೋಟರು ಕಾರಿನಲ್ಲಿ ದಾದಾಭಾಯಿಯನ್ನು ಟಿಲ್ಬರಿಗೆ ಒಯ್ದರು. ಅಲ್ಲಿಂದ ಎಸ್. ಎಸ್. ಮಾಲ್ವೀನಿಯ ಎಂಬ ಜಹಜಿನಲ್ಲಿ ಅವನಿಗೆ ಗೊತ್ತುಮಾಡಿದ ಸ್ಥಳಕ್ಕೆ ಸಾಗಿಸಿದರು ಲಂಡನ್ ಇಂಡಿಯಾ ಸೊಸೈಟಿಯ ಸದಸ್ಯರು ಅವನಿಗೆ ಬೀಳ್ಕೊಡುಗೆಯ ಪತ್ರವನ್ನು ಅರ್ಪಿಸುವುದಕ್ಕಾಗಿ ಅಲ್ಲಿ ಸೇರಿದ್ದರು. ಆ ವರೆಗಿನ ಪ್ರಯಾಣದ ಶ್ರಮವನ್ನು ದಾದಾಭಾಯಿ ಚೆನ್ನಾಗಿಯೇ ಸಹಿಸಿಕೊಂಡಿದ್ದರೂ, ಬಿನ್ನಹ ಪತ್ರವನ್ನು ಸ್ವೀಕರಿಸುವುದೂ ಅದಕ್ಕೆ ಉತ್ತರ ಹೇಳುವುದೂ ಕಠಿನ ಪರೀಕ್ಷೆಗಳಾಗುತ್ತಿದ್ದವು. ಆದ್ದರಿಂದ ಅವನ ಮಗ ಜಾಲ್ ನವರೋಜಿಯು ತಂದೆಯ ಪರವಾಗಿ ಅದನ್ನು ಸ್ವೀಕರಿಸಿದನು.

ದಾದಾಭಾಯಿ ಇಂಗ್ಲೆಂಡನ್ನು ಬಿಟ್ಟು ಹೋಗುತ್ತಿದ್ದರೂ ಸೊಸೈಟಿಯ ಸದಸ್ಯರು ಅವನೇ ಅದರ ಅಧ್ಯಕ್ಷನಾಗಿರಬೇಕೆಂದು ಬಯಸಿದರು. ಅವನು ಒಪ್ಪಲಿಲ್ಲ. ಗೌರವ ಅಧ್ಯಕ್ಷನಾಗಿರುವುದರ ಮೂಲಕವಾದರೂ ಸೊಸೈಟಿಯೊಡನೆ ಸಂಬಂಧವನ್ನು ಉಳಿಸಿಕೊಡಬೇಕೆಂದು ಕೇಳಲಾಗಿ ಅದಕ್ಕೆ ಸ್ವಲ್ಪ ಅನುಮಾನಿಸಿ ಒಪ್ಪಿದನು. ಇಂಗ್ಲೆಂಡಿನಲ್ಲಿದ್ದ ತರುಣ ಭಾರತೀಯರು ದಂಗೆಯ ಮನೋಭಾವಕ್ಕೆ ತಿರುಗುತ್ತಿರುವುದನ್ನು ಕಂಡಿದ್ದನು. ಹಿಂಸಾತತ್ತ್ವವನ್ನು ಸಾರುವ ಹಲವು ಮಂದಿ ಉತ್ಸಾಹೀ ತರುಣರನ್ನು ಅವನು

ಕಲ್ಕತ್ತದಲ್ಲಿ ಸಂಧಿಸಿದ್ದನು. ರಾಜಕೀಯ ಪ್ರತಿಭಟನೆಗೆ ಹಿಂಸೆಯೊಂದೇ ಪರಿಣಾಮಕಾರಿಯಾದ ಆಯುಧವೆಂದು ಅವರು ತಿಳಿದಿದ್ದರು. ಆ ತತ್ತ್ವ ಇಂಡಿಯದಲ್ಲೆಲ್ಲ ಹಬ್ಬಿ ಕ್ರಮೇಣ ಇಂಗ್ಲೆಂಡಿನಲ್ಲಿ ನೆಲಸಿದ್ದ ಭಾರತೀಯ ರನ್ನೂ ಸೆಳೆಯಬಹುದೆಂದು ದಾದಾಭಾಯಿ ಭಯಪಟ್ಟನು. ತಾನು ಯಾವಾ ಗಲೂ ಪ್ರತಿಪಾದಿಸಿದ ಅಹಿಂಸೆಗೆ ವಿರುದ್ಧವಾದ ನೂತನ ತತ್ತ್ವಗಳಿಂದ ಯುವಕರು ಸಂಚಲಿತರಾಗಿ ಸೊಸೈಟಿಯನ್ನು ವಶಪಡಿಸಿಕೊಳ್ಳಬಹುದು. ಹೀಗೆ ತನ್ನ ಮನಸ್ಸಿನ ಭಾರವನ್ನು ಉತ್ತರಾಧಿಕಾರಿಯಾದ ಜೆ. ಎ. ಪರೀಖನ ಎದುರಲ್ಲಿ ಇಳುಹುತ್ತ, ಸೊಸೈಟಿಯು ಹಿಂಸಾತತ್ತ್ವಕ್ಕೆ ಬೆಂಬಲಕೊಡುವ ಕ್ಷಣದಲ್ಲಿಯೇ ತನ್ನ ಹೆಸರನ್ನು ಅದರ ಸದಸ್ಯಪಟ್ಟಿಯಿಂದ ತೆಗೆದುಹಾಕ ಬೇಕೆಂದು ಆತನಿಗೆ ತಿಳಿಸಿ 'ನನ್ನ ಮಾನ ನಿನ್ನ ಕೈಯಲ್ಲಿದೆ' ಎಂದು ಹೇಳಿದನು.

ಹೀಗೆ ಬೀಳ್ಕೊಡುಗೆಯ ಮಾತುಗಳನ್ನಾಡಿ ಸ್ವದೇಶ ಸೇವೆಗಾಗಿ ವಿದೇಶದಲ್ಲಿ ತನ್ನ ಜೀವವನ್ನು ಸವೆಸಿದ ಆ ವಿಖ್ಯಾತ ಭಾರತಪುತ್ರನು ಇಂಗ್ಲಿಷ್ ಸಾರ್ವಜನಿಕ ಜೀವನದಿಂದ ಗಲಭೆಯಿಲ್ಲದೆ ಮರೆಯಾದನು. ತನ್ನ ದೇಶದ ದುಃಸ್ಥಿತಿಗೆ ಸಂಬಂಧಿಸಿದ ಕಠಿನವಾದ ಅಂಕಿ ಅಂಶಗಳನ್ನು ಅರ್ಧಶತಮಾನಕಾಲ ನಿರಂತರವಾಗಿ ಶೇಖರಿಸುತ್ತ, ಹಿಂದೆ ಯಾರೂ ಎಸಗದ ರೀತಿಯಲ್ಲಿ ಅವುಗಳನ್ನು ಬ್ರಿಟಿಷ್ ಜನರ ಎದುರಿಗಿಟ್ಟು ವಿವರಿಸಿ, ಇಂಗ್ಲೆಂಡ್ ಮತ್ತು ಇಂಡಿಯಾ ದೇಶಗಳನ್ನು ಒಟ್ಟುಗೂಡಿಸಲು ಸಾಧ್ಯವಿದ್ದದ್ದನ್ನೆಲ್ಲ ಮಾಡಿದ್ದನು.

ಸುಖ ಪ್ರಯಾಣ ಮಾಡುತ್ತ ದಾದಾಭಾಯಿ ನವೆಂಬರ್ ೮ ನೆಯ ತಾರೀಕಿನ ದಿವಸ ಏಡನ್ನನ್ನು ತಲಪಿ, ಅಲ್ಲಿನ ಪುರ ಪ್ರಮುಖರೊಡನೆ ಸಂಭಾಷಣೆ ನಡಸಿದನು. ಆದರೆ ಏಡನ್ನಿನಿಂದ ಬೊಂಬಾಯಿಗೆ ಬರುವ ವೇಳೆಗೆ ಅವನ ಆರೋಗ್ಯ ಸ್ಥಿತಿ ಸಡಿಲವಾದ್ದರಿಂದ, ಅಪೊಲೊ ಬಂದರಿನಲ್ಲಿ ಅವನನ್ನು ಎದುರುಗೊಳ್ಳಲು ಮಾಡಿದ್ದ ಏರ್ಪಾಡುಗಳೆಲ್ಲವನ್ನೂ ಕೈ ಬಿಡ ಬೇಕಾಯಿತು. ಯಾವ ಗಲಭೆಯೂ ಇಲ್ಲದೆ ಅವನನ್ನು ಹಡಗು ಕಟ್ಟೆಯಿಂದ ವರ್ಸೋವಾದಲ್ಲಿನ ಅವನ ಮನೆಗೆ ಕರೆದೊಯ್ಯಲಾಯಿತು.

ಜಹಜು ಬೊಂಬಾಯಿ ಬಂದರನ್ನು ಪ್ರವೇಶಿಸಿದ ಕೂಡಲೆ, ಬೊಂಬಾ

ಯಿನ ಗವರ್ನರಾದ ಸರ್ ಜಾರ್ಜ್ ಕ್ಲಾರ್ಕನು (ಆ ಮೇಲೆ ಲಾರ್ಡ್ ಸಿಡೆನ್‌ಹ್ಯಾಂ) ದಾದಾಭಾಯಿಯನ್ನು ಮೊದಲು ಎದುರುಗೊಂಡನು. ಅದ ರಿಂದ ದಾದಾಭಾಯಿಗೆ ಹರ್ಷವಾಯಿತು. ಜನವರಿಯ ಎರಡನೆಯ ವಾರದ ವೇಳೆಗೆ ಅವನು ಸಂಪೂರ್ಣವಾಗಿ ಗುಣಹೊಂದಿದನು. ಆ ಸಮಾಚಾರ ವನ್ನು ತಿಳಿದು ಭಾರತೀಯ ಜನವೃಂದಕ್ಕೆಲ್ಲ ಸಂತೋಷವಾಯಿತು. ದೇಹ ದಲ್ಲಿ ಶಕ್ತಿ ಕುದುರುತ್ತಲೆ ಅವನ ಮನಸ್ಸು ಮೊದಲಿನಂತೆಯೆ ಚಟುವಟಿಕೆ ಯಾಗಿ ಜಾಗ್ರತವಾಯಿತು. ದಿನವೆಲ್ಲ ಬೇಕಾದಷ್ಟು ಓದುತ್ತಿದ್ದನು. ಪತ್ರ ವ್ಯವಹಾರವನ್ನೆಲ್ಲ ಹಟ ಹಿಡಿದು ತಾನೇ ನೋಡಲಾರಂಭಿಸಿದನು; ಪ್ರಪಂಚ ದಲ್ಲಿ, ವಿಶೇಷವಾಗಿ ಇಂಡಿಯಾದಲ್ಲಿ, ಜರುಗುತ್ತಿರುವ ವಿದ್ಯಮಾನಗಳನ್ನು ಅರಿತುಕೊಳ್ಳಲು ಗಂಟೆಗಟ್ಟಲೆ ವಾರ್ತಾ ಪತ್ರಿಕೆಗಳನ್ನು ನೋಡುತ್ತಿದ್ದನು.

ಮಹಾಕುಲವೃದ್ಧನ ೮೪ ನೆಯ ವರುಷ ವಿಶೇಷವಾದ ಧನ್ಯವಾದ ಸಮರ್ಪಣೆಯ ಸಮಯವಾಯಿತು. ಕಾಯಿಲೆಯ ವಿಷಮ ಸ್ಥಿತಿಯಿಂದ ಪಾರಾಗಿ ವೃದ್ಧ ನಾಯಕನು ಸ್ವದೇಶಕ್ಕೆ ಮರಳಿ, ತನ್ನ ಕೊನೆಯ ದಿನಗಳನ್ನು ಕಳೆಯುತ್ತಿದ್ದನು. ಅವನ ಆರೋಗ್ಯಸ್ಥಿತಿ ಈಗ ಉತ್ತಮವಾಗಿತ್ತು. ಮಧ್ಯಾಹ್ನದ ಮೇಲೆ ಭೇಟಿಕಾರರನ್ನು ನೋಡುತ್ತಿದ್ದನು. ಪ್ರತಿ ಸಂಜೆ ಕಾರಿನಲ್ಲಿ ಸಂಚಾರ ಹೋಗುತ್ತಿದ್ದನು, ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಓದುತ್ತಿದ್ದನು. ಇಂಡಿಯಾದಲ್ಲಿ ಮತ್ತು ಇಂಗ್ಲೆಂಡಿನಲ್ಲಿ ಇರುವ ಮಿತ್ರರಿಗೆ ಪತ್ರಗಳನ್ನು ಬರೆಯುತ್ತಿದ್ದನು. ಆದ್ದರಿಂದ 'ದಾದಾಭಾಯಿ ದಿನ'ವನ್ನು ಇಂಡಿಯದ ಎಲ್ಲ ಭಾಗಗಳಲ್ಲೂ ಎಂದಿಗಿಂತ ಹೆಚ್ಚಿನ ಉತ್ಸಾ ಹದಿಂದ ಆಚರಿಸಿದರು. ಈ ಸಂದರ್ಭದಲ್ಲೂ ಸರ್ ಜಾರ್ಜ್‌ಕ್ಲಾರ್ಕ್ ಎಲ್ಲ ರಿಗಿಂತ ಮೊದಲು ಕುಶಲ ಪ್ರಶ್ನೆಯನ್ನು ಕಳಿಸಿದನು. "ಜನತೆಯ ಶಾಂತಿ ಯುತವಾದ ಪ್ರಗತಿಯನ್ನು ವಿರೋಧಿಸುತ್ತ ಭಾರತದ ಆಗಸವನ್ನು ಕವಿದಿ ರುವ ಹಲವು ಮೋಡಗಳು ಚೆದರುವವರೆಗೂ ನೀವು ನಮ್ಮೊಡನೆ ಇರುವಿ ರೆಂದು ನಂಬುತ್ತೇನೆ" ಎಂದು ಬರೆದನು. ಅದಕ್ಕೆ ಉತ್ತರವಾಗಿ ದಾದಾ ಭಾಯಿ—ಅಗತ್ಯವಾದ ಸುಧಾರಣೆಗಳನ್ನು ಸಕಾಲದಲ್ಲಿ ಜಾರಿಗೆ ತಂದು, ಬ್ರಿಟಿಷ್ ನ್ಯಾಯಪಕ್ಷಪಾತತೆಯಲ್ಲಿ ತನಗೆ ಯಾವಾಗಲೂ ಇದ್ದ, ಮತ್ತು ಭಾರತವು ಸದಾ ಸ್ಮರಿಸುತ್ತಿರಲೆಂದು ತಾನು ಹಾರೈಸುವ, ನಂಬಿಕೆಯನ್ನು

ಪುನಃ ಸ್ಥಾಪಿಸಿದರೆ ಮೋಡಗಳು ಚೆದರುವುವೆಂದೂ ಉತ್ತಮಸ್ಥಿತಿ ಬರುವು ದೆಂದೂ ತನಗೆ ನಂಬಿಕೆಯಿದೆಯೆಂದು— ತಿಳಿಸಿದನು.

## ೩೫. ವಿಶ್ರಾಂತಿಸಮಯ

೧೯೦೮ನೆಯ ಇಸವಿಯ ಉದ್ದಕ್ಕೂ ಭಾರತದ ರಾಜಕೀಯ ನೌಕೆಯು ಕ್ಷುಬ್ಧಸಾಗರದಲ್ಲಿ ಕೊಚ್ಚಿಕೊಂಡು ಹೋಗುತ್ತಿತ್ತು. ಕಾಂಗ್ರೆಸ್ ಶಿಬಿರದಲ್ಲಿ ಖಚಿತವಾದ ಒಡಕು ತಲೆದೋರಿತ್ತು. ರಾಷ್ಟ್ರೀಯ ಸಂಸ್ಥೆಯು ಸಂಪೂರ್ಣ ವಾಗಿ ಖಂಡಿತವಾದಿಗಳ (Extremists) ವಶವಾಗುವ ಅಪಾಯ ಸನ್ನಿ ಹಿತವಾಗಿತ್ತು. ಎರಡು ಬೇರೆ ಬೇರೆ ಬಗೆಯ ಅಶಾಂತಿಯಿಂದ ಅಧಿಕಾರಿ ಗಳು ಭಯಕ್ಕೊಳಗಾದರು: ಒಂದು, ಜನರ ಬಗ್ಗೆ ತಮ್ಮ ಜವಾಬ್ದಾರಿ ಗಳನ್ನು ನಿರ್ವಹಿಸಲು ತಪ್ಪಿದ ಸರಕಾರದ ವಿಷಯದಲ್ಲಿ ಅತೃಪ್ತಿಗೊಂಡ ರಾಜಭಕ್ತಿಯುತರಾದ ಪ್ರಜೆಗಳ ಅಶಾಂತಿ; ಎರಡು, ಅಧಿಕಾರವನ್ನು ಬುಡ ಮೇಲು ಮಾಡುವ ತತ್ತ್ವಗಳಿಂದ ಉದ್ದೀಪನಗೊಂಡು ವ್ಯವಸ್ಥಾಬದ್ಧವಾದ ಸಮಾಜದ ತಳಹದಿಯನ್ನು ಸಡಿಲಗೊಳಿಸುವ ಕ್ಷೋಭೆ. ಈ ಸಂದರ್ಭದಲ್ಲಿ ನಡೆದ ಹಿಂಸಾಕೃತ್ಯಗಳನ್ನು ವಿವರಿಸುವುದು ಅನಾವಶ್ಯಕ. ತರುಣ ದಂಗೆ ಕಾರರ ಹಿಂಸಾಕೃತ್ಯಗಳನ್ನು ಸರಕಾರ ದಬ್ಬಾಳಿಕೆಯಿಂದ ನಿಗ್ರಹಿಸುವ ಪ್ರಯತ್ನ ಮಾಡಿತು. ದಬ್ಬಾಳಿಕೆಯಿಂದ ದಂಗೆ ಅಡಗಲಿಲ್ಲ; ಅಶಾಂತಿಯ ನೂತನ ಶಕ್ತಿಗಳು ಹುಟ್ಟಿಕೊಂಡವು. ಅನಾಯಕತೆಯ ಭೀಕರ ರಾಕ್ಷಸ ತಲೆ ದೋರಿ ಸರಕಾರ ಹೆಚ್ಚಿನ ದಬ್ಬಾಳಿಕೆಯ ಕ್ರಮಗಳನ್ನು ಅನುಸರಿಸಿತು.

ಒಂದು ತಲೆಮೊರೆಯ ತೀವ್ರಗಾಮಿ ಪಕ್ಷದವನು ಮುಂದಿನ ಕಾಲದ ವರ ದೃಷ್ಟಿಯಲ್ಲಿ ಮಂದಗಾಮಿಯಾಗಿ ಪರಿಣಮಿಸುತ್ತಾನೆ. ದಾದಾ ಭಾಯಿಯ ವಿಷಯದಲ್ಲಿ ಈ ರೀತಿಯಾಗಿ ಆಡುವಂತಿರಲಿಲ್ಲ. ಇತರ ರಾಜ ಕೀಯ ನಾಯಕರು ಮುನ್ನುಗ್ಗುತ್ತಿರುವ ಯುವಕರನ್ನು ದೂರಿ ನಿರಾಕರಿಸು ವಾಗ ದಾದಾಭಾಯಿ ಅವರನ್ನು ಸಹಾನುಭೂತಿಯಿಂದ ಕಾಣುತ್ತಿದ್ದನು. ಅವನ ಆಸೆಗಳು ತನ್ನ ಹತ್ತಿರದ ಅನುಯಾಯಿಗಳಿಗಿಂತ ಹೆಚ್ಚಾಗಿ, ರಾಷ್ಟ್ರೀಯ ಜಾಗ್ರತಿಯಿಂದಲೂ ದೇಶಾಭಿಮಾನದ ಹುರುಪಿನಿಂದಲೂ

ಉದ್ದೀಪ್ತರಾದ ಯುವಕರಲ್ಲಿ ನೆಟ್ಟಿದ್ದವು. ಆದರೆ ಅವನು ಹಿಂಸಾಕೃತ್ಯಗಳನ್ನು ದೃಢವಾಗಿ ನಿಷೇಧಿಸುತ್ತಿದ್ದನು. ದೇಶಬಾಂಧವರ ಪ್ರೀತ್ಯಾದರಗಳಿಗೆ ಪ್ರತಿಯಾಗಿ ಬಿನ್ನವಿಸಿದ ಕೃತಜ್ಞತಾಪೂರ್ವಕವಾದ ಸಂದೇಶದಲ್ಲಿ ಹೀಗೆ ಹೇಳಿದ್ದಾನೆ :

ಹಿಂಸಾ ಕೃತ್ಯದಲ್ಲಿ ತೊಡಗವುದನ್ನು ಸರ್ವವಿಧದಲ್ಲಿಯೂ ಬಿಡಬೇಕೆಂದು ಈ ಸಂದರ್ಭದಲ್ಲಿ ನಾನು ಪ್ರಾರ್ಥಿಸುತ್ತೇನೆ. ನಮ್ಮ ಕುಂದುಕೊರತೆಗಳು ಅನೇಕವಾಗಿವೆ. ಅಗತ್ಯವಾದ ಸುಧಾರಣೆಗಳಿಗಾಗಿ ಅವಶ್ಯವಾದ ಪ್ರಯತ್ನಗಳನ್ನೂ ತ್ಯಾಗವನ್ನೂ ನಡಸುತ್ತ, ಹೋರಾಟವನ್ನು ಶಾಂತಿಯುತವಾಗಿಯೂ ತಾಳ್ಮೆಯಿಂದಲೂ, ಪಟ್ಟು ಹಿಡಿದು ನಡಸುತ್ತ, ಬ್ರಿಟಿಷ್ ಜನಾಂಗದ ಅಂತಃಸಾಕ್ಷಿಗೂ ನ್ಯಾಯ ಪಕ್ಷಪಾತ ಬುದ್ಧಿಗೂ ತಾಗುವಂತೆ ಮನವಿಮಾಡಿ.

ಈ ಸಂದೇಶ ದಾದಾಭಾಯಿಯ ಜೀವನ ಕಥೆಯಲ್ಲಿ ಒಂದು ಹೊಸ ಅಧ್ಯಾಯವನ್ನು ಆರಂಭಿಸಿತೆನ್ನಬೇಕು. ಅದು ಅವನ ರಾಜಕೀಯ ಜೀವನದ ಪುನರ್ಜನ್ಮದ ಸೂಚನೆಯೆನ್ನಬೇಕು ಈಗ ದೇಹದಲ್ಲೂ ಮನಸ್ಸಿನಲ್ಲೂ ತಕ್ಕಷ್ಟು ಶಕ್ತಿಕೂಡಿ ಬಂದು, ಮೊದಲಿನಂತೆಯೆ ಅವನು ತೀವ್ರವಾದ ಆಸಕ್ತಿಯಿಂದ ದೇಶದ ವಿದ್ಯಮಾನಗಳನ್ನು ಅರಿತು, ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ, ಅವುಗಳ ಮೇಲೆ ಪ್ರಭಾವ ಬೀರುವಷ್ಟು ಚೈತನ್ಯಶಾಲಿಯಾಗಿದ್ದನು. ಮಾರ್ಲೆ–ಮಿಂಟೊ ಸುಧಾರಣೆಗಳ ಪ್ರಕಟನೆಯಿಂದ ಮಾರ್ಲೆಯ ಮಾತುಗಳು ನೆನಪಿಗೆ ಬಂದವು: "ಶಾಸನ ಸಭೆಯು ಮಾಡುವ ಪ್ರತಿಯೊಂದು ಒಳ್ಳೆಯ ಕೆಲಸವೂ, ಅದರ ವ್ಯಾಪ್ತಿಕ್ಷೇತ್ರ ಎಷ್ಟೇ ಚಿಕ್ಕದಾಗಿರಲಿ, ಪ್ರತಿಯೊಂದು ಒಳ್ಳೆಯ ಕೆಲಸವೂ ನಾವು ಕಾಣದೆ ಇರುವ ಅನೇಕ ಒಳ್ಳೆಯ ಕೆಲಸ ಮಾಡಲು ದಾರಿ ತೋರಿ ಕೊಡುತ್ತದೆ.

'ಇದುವರೆಗೆ ಸಾಧಿಸಿರುವುದೂ, ಅದನ್ನನುಸರಿಸಿ ಮುಂದೆ ಅಗತ್ಯವಾಗಿ ಆಗತಕ್ಕದ್ದೂ, ನಿರಂತರವಾದ ವ್ಯವಸ್ಥಾಬದ್ಧ ಪ್ರಯತ್ನಗಳ ಫಲವೆನ್ನಬೇಕು' ಎಂದು ವೆಡ್ಡರ್‌ಬರ್ನ್ ದಾದಾಭಾಯಿಗೆ ಬರೆದನು. 'ಕತ್ತಲೆ ಕವಿದ ಈ ವರ್ಷಗಳಲ್ಲಿ, ನಿನ್ನ ದೇಶಬಾಂಧವರನ್ನು ಈ ಬಗೆಯ ಸುರಕ್ಷಿತವಾದ ಪ್ರಗತಿಪಥದಲ್ಲಿ ನಡೆಸಲು ನಿನ್ನಷ್ಟು ಶ್ರಮಿಸಿದವರು ಬೇರೊಬ್ಬರಿಲ್ಲ ... ನಮ್ಮ ಅಲ್ಪ ಸಂಖ್ಯೆಯ ವರದಿಯನ್ನು ಈಗ ಜ್ಞಾಪಿಸಿಕೊಳ್ಳುವುದೂ ನಮ್ಮ ಶಿಫಾರಸುಗಳಲ್ಲಿ ಎಷ್ಟೊಂದು (ಅವುಗಳನ್ನು ನೋಡುವುದಕ್ಕೂ ಲಾರ್ಡ್ ಜಾರ್ಜ್ ಹ್ಯಾಮಿಲ್ಟನ್ ಸಮ್ಮತಿಸ

ಲಿಲ್ಲವಲ್ಲ !) ಅಂಗೀಕೃತವಾಗಿವೆಯೆಂದು ತಿಳಿಯುವುದೂ ಸ್ವಾರಸ್ಯದ ವಿಷಯ ಗಳಾಗಿವೆ.'

ಸುಧಾರಣೆಗಳನ್ನು, ನ್ಯಾಯಪಥದಲ್ಲಿ ಅಧಿಕಾರಿಗಳಿಟ್ಟ ಮೊದಲನೆಯ ಹೆಜ್ಜೆಯೆಂದು ಹೇಳಬಹುದು. ಹಾಗೆ ಧೈರ್ಯವಾಗಿ ಹೆಜ್ಜೆಯಿಟ್ಟ ರಾಜ ನೀತಿಜ್ಞರನ್ನು ಪ್ರೋತ್ಸಾಹಿಸುವುದೇ ಪ್ರಗತಿಯ ಗತಿಯನ್ನು ತ್ವರಿತಗೊಳಿ ಸುವ ಉತ್ತಮಮಾರ್ಗವೆಂದು ದಾದಾಭಾಯಿ ಯೋಚಿಸಿ, ಲಾರ್ಡ್ ಮಾರ್ಲೆಗೂ ಲಾರ್ಡ್ ಮಿಂಟೋಗೂ ವೈಯಕ್ತಿಕವಾಗಿ ಪತ್ರ ಬರೆದು ಬ್ರಿಟಿಷರ ಶೀಲದಲ್ಲಿ ತನಗಿದ್ದ ನಂಬಿಕೆ ಅನೇಕ ಬಾರಿ ಕ್ರೂರವಾಗಿ ಭಂಗ ವಾಗಿದ್ದರೂ ಸುಧಾರಣೆಗಳ ಪ್ರಕಟನೆಯಿಂದ ಪುನಃ ಬಲಗೊಂಡಿದೆಯೆಂದು ತಿಳಿಸಿದನು.

ಸಿವಿಲ್ ಸರ್ವಿಸ್ಸಿನ ಪ್ರವೇಶಕ್ಕೆ ಅಗತ್ಯವಾದ ಪರೀಕ್ಷೆಗಳನ್ನು ಇಂಗ್ಲೆಂಡಿ ನಲ್ಲೂ ಇಂಡಿಯಾದಲ್ಲೂ ಏಕಕಾಲದಲ್ಲಿ ನಡಸುವ ಏರ್ಪಾಡಿನ ಮೂಲ ಭೂತವಾದ ಸುಧಾರಣೆಯನ್ನು ಉಪೇಕ್ಷೆಮಾಡಿದ್ದರು. ಆದರಿಂದ ದಾದಾ ಭಾಯಿ ತನ್ನ ಪತ್ರದಲ್ಲಿ 'ಅತ್ಯಗತ್ಯವಾದ ಯಾವ ಸುಧಾರಣೆಯಿಲ್ಲನೆ ಇತರ ಸುಧಾರಣೆಗಳೆಲ್ಲ ಹೆಚ್ಚು ಕಡಮೆ ವಿಫಲವಾಗುತ್ತವೆಯೊ' ಅದು ಮಾತ್ರ ಇಂಡಿಯಾಕ್ಕೆ ಇನ್ನೂ ದೊರೆಯಲಿಲ್ಲವೆಂದು ತಿಳಿಸಿದನು. ತನ್ನ ವಾದವನ್ನು ಸಮರ್ಥಿಸಲು ೧೭೬೪ರಿಂದ ೧೯೦೩ರ ವರೆಗಿನ ಬ್ರಿಟಿಷ್ ರಾಜನೀತಿಜ್ಞರ ಮತ್ತು ಆಡಳಿತಗಾರರ ಭಾಷಣ ಲೇಖನಗಳಿಂದ ಹಲವು ಭಾಗಗಳನ್ನು ಪತ್ರಕ್ಕೆ ಪರಿಶಿಷ್ಟವಾಗಿ ಉದ್ಧರಿಸಿಕೊಟ್ಟು ಹಾಲಿ ಜಾರಿಯಲ್ಲಿದ್ದ ಆಡಳಿತ ಪದ್ಧತಿಯಿಂದ ಅನಿವಾರ್ಯವಾಗಿ ಉಂಟಾಗುವ ಕೆಡುಕುಗಳನ್ನು ವಿವರಿಸಿದನು.

ಪತ್ರವೂ ಪರಿಶಿಷ್ಟವೂ ಸೇರಿ ೮೦ ಟೈಪು ಮಾಡಿದ ಪುಟಗಳಾದವು. ಕೆಲಸ ಅಲ್ಲಿಗೆ ಮುಗಿಯಲಿಲ್ಲ ಮುಂದಿನ ವರುಷ (೧೯೧೦ರ ಏಪ್ರಿಲ್ ೨೩ ರಲ್ಲಿ) ಆ ರಾಜಕೀಯ ಏಕಾಂತವಾಸಿಯ ಗೃಹದಿಂದ ಇನ್ನೊಂದು ಪತ್ರ ಹೊರಟಿತು. ಆದರಲ್ಲಿ, ವಿಷಯವನ್ನು ಸಮರ್ಥಿಸಲು ಅಧಿಕಾರೀ ದಾಖಲೆ ಗಳಿಂದ ತಯಾರಿಸಿದ ಪಟ್ಟಿಗಳನ್ನು ಕೊಟ್ಟು ಸಮಸ್ಯೆಯ ಆರ್ಥಿಕ ವಿಚಾರ ಗಳನ್ನು ತಿಳಿಸಲಾಗಿತ್ತು. ವಿದೇಶೀ ಪ್ರಭುತ್ವದಿಂದ ಇಂಡಿಯಾ ದೇಶದ ಸ್ಥಿತಿ ಏನಾಗಿದೆಯೆಂಬ ಚಿತ್ರವನ್ನು ಪೂರೈಸಿಕೊಡಲು, ಮೂರು ತಿಂಗಳ

ನಂತರ, ವ್ಯಾಪಾರ ವಾಣಿಜ್ಯಗಳಿಗೆ ಸಂಬಂಧಪಟ್ಟ ಅಂಕಿ ಅಂಶಗಳನ್ನೂ ಇತರ ವಿವರಗಳನ್ನೂ ಒಳಗೊಂಡ ಇನ್ನೊಂದು ಪತ್ರ ಹೊರಟಿತು. ಈ ಕಾಗದಗಳ ಪರಿಶಿಷ್ಟಗಳೂ ಸೇರಿದರೆ, ಇಂಡಿಯಾ ದೇಶದ ದಾರಿದ್ರ್ಯ ಮತ್ತು ಬ್ರಿಟಿಷರಿಗೆ ಅಯೋಗ್ಯವಾದ ಆಡಳಿತ' (Povery and un British Rule in India) ಎಂಬ ಗ್ರಂಥದ, ಆವರೆಗೆ ಪರಿಷ್ಕರಿಸಿ ವ್ಯಾಖ್ಯೆಮಾಡಿದ, ಸಂಗ್ರಹ ಪ್ರತಿಯಾಗುತ್ತಿತ್ತು.

ಚರ್ಚಾಸ್ಪದವಾದ ರಾಜಕೀಯ ವಿಚಾರಗಳಿಗೆ ಹೀಗೆ ಒಮ್ಮೊಮ್ಮೆ ಪ್ರವೇಶಿದರೂ ದಾದಾಭಾಯಿಯ ಜೀವನ ಈ ಕಾಲ ಒಟ್ಟಿನಲ್ಲಿ ಶಾಂತಿಯುತವಾಗಿತ್ತೆಂದು ಹೇಳಬಹುದು.

ಖಂಡಿತವಾದಿಗಳು ಸುಧಾರಣೆಗಳನ್ನು ತಮ್ಮ ಹಿಂಸಾಕೃತ್ಯಕ್ಕೆ ಫಲವಾಗಿ ದೊರೆತ ರಿಯಾಯಿತಿ ಎಂದು ತಿಳಿದರು. ಇಷ್ಟವಿಲ್ಲದ ಜನರಿಂದ ಹೆಚ್ಚು ರಿಯಾಯಿತಿಗಳನ್ನೂ ಸುಧಾರಣೆಗಳನ್ನೂ ಹೆಚ್ಚಿನ ಹಿಂಸಾಕೃತ್ಯಗಳಿಂದಲೇ ಕಸಿಯಬೇಕೆಂದು ಅವರು ನಂಬಿದರು. ಆದ್ದರಿಂದ ದಾದಾಭಾಯಿ ತನ್ನ ೮೫ನೆಯ ಜನ್ಮದಿನದ ಸಂದೇಶದಲ್ಲಿ ತಿರುಗಿ ಅಹಿಂಸೆಯ ಬುದ್ಧಿವಾದವನ್ನು ಹೇಳಿದನು.

> ಹಿಂಸಾಕೃತ್ಯಗಳಲ್ಲಿ ತೊಡಗುವವರು ಇಂಡಿಯಾ ದೇಶದ ಹಿತಕ್ಕೆ ಬಹು ದೊಡ್ಡ ಹಾನಿಯನ್ನು ಉಂಟುಮಾಡುತ್ತಾರೆ.

ಇಂಡಿಯಾ ದೇಶದ ರಾಜಕೀಯ ಸ್ಥಿತಿಯನ್ನು ಸ್ಥಳದಲ್ಲಿಯೆ ನಿಂತು ತಿಳಿಯಬೇಕೆಂಬ ಉದ್ದೇಶದಿಂದ ಈ ದೇಶಕ್ಕೆ 'ದಿ ಟೈಮ್ಸ್' ಪತ್ರಿಕೆಯ ವಿದೇಶೀ ಶಾಖೆಯ ಪ್ರತಿನಿಧಿಯಾದ ವ್ಯಾಲೆಂಟೈನ್ ಶಿರೋಲ್ ಎಂಬಾತನು ಬಂದನು. ಆತನೊಡನೆ ದಾದಾಭಾಯಿ ದೀರ್ಘವಾದ ಸಂದರ್ಶನವನ್ನು ನಡಸಿದನು. ಆತನಿಗೆ ದಾದಾಭಾಯಿ ತಾನು ಲಾರ್ಡ್ ಮಾರ್ಲೆ ಮತ್ತು ಲಾರ್ಡ್ ಮಿಂಟೊ ಇವರೊಡನೆ ನಡಸಿದ ಪತ್ರ ವ್ಯವಹಾರದ ನಕಲನ್ನೂ ಲಾರ್ಡ್ ಜಾರ್ಜ್ ಹ್ಯಾಮಿಲ್ಟನ್ನನಿಗೆ ಬರೆದ ಕಾಗದದ ಭಾಗದ ನಕಲನ್ನೂ ಕೊಟ್ಟನು.

ಐದನೆಯ ಜಾರ್ಜ್ ಪುನಃ ಇಂಡಿಯಾ ದೇಶಕ್ಕೆ ಭೇಟಿಕೊಡುವನೆಂಬ ಪ್ರಕಟನೆಯಿಂದ ರಾಜಕೀಯ ಘರ್ಷಣೆಗಳು ಶಾಂತಯುತವಾಗಿ ಪರಿ

ಹಾರಗೊಳ್ಳಬಹುದೆಂಬ ಆಸೆ ಹುಟ್ಟಿತು. ಇಲ್ಲಿ ಜನರು ನವಚೈತನ್ಯದಿಂದ ಕೂಡಿರುವುದನ್ನು ಆತನು ಕಂಡನು. ಪ್ರಪಂಚದ ಇತರ ಭಾಗಗಳಲ್ಲಿರುವ ತನ್ನ ಪ್ರಜೆಗಳಂತೆಯೇ ಭಾರತದ ಜನರ ಹಿತಾಸಕ್ತಿಗಳೂ ತನಗೆ ಪ್ರಿಯ ವಾದುವೆಂದು ನುಡಿದನು. ಆರು ವರ್ಷಗಳ ಕೆಳಗೆ, ಇಂಗ್ಲೆಂಡಿನಿಂದ ಸಹಾನುಭೂತಿಯ ಸಂದೇಶವೊಂದನ್ನು ಕಳಿಸಿದ ನು. ಈ ಬಾರಿ ಭವಿಷ್ಯತ್ತಿನ ವಿಚಾರದಲ್ಲಿ ಆಸೆಯ ನುಡಿಯನ್ನು ನುಡಿದನು. ೧೯೧೨ ರ ಸೆಪ್ಟೆಂಬರ್ ೨೬ ನೆಯ ತಾರೀಕಿನ ಸಾರ್ವಜನಿಕ ಪ್ರಕಟನೆಯಲ್ಲಿ ದಾದಾಭಾಯಿ ನಮೂದಿ ಸಿದ ಚಿರಸ್ಮರಣೀಯವಾದ ಆ ಭೇಟಿಗೆ ಸಂಬಂಧಪಟ್ಟ ವಿಷಯಗಳನ್ನೂ ರವಾನೆಗಳನ್ನೂ ಸಂಗತಿಗಳನ್ನೂ ಪರಿಶೀಲಿಸಿದರೆ, ಇಂಡಿಯಾ ದೇಶದ ಜನರ ಅಭಿವೃದ್ಧಿಯನ್ನು ಸಾಧಿಸಲು ಚೆನ್ನಾಗಿ ಆಲೋಚಿಸಿದ ಕಾರ್ಯರೀತಿಯೊಂದು ನಿರ್ಧರವಾಗಿದೆಯೆಂದು ಧ್ವನಿತವಾಗುತ್ತದೆ—ಎಂದು ತಿಳಿಯಪಡಿಸಿದನು. ಆದರೆ ಆ ಗುರಿಯನ್ನು ಮುಟ್ಟುವ ಗತಿಯನ್ನು ತ್ವರಿತಗೊಳಿಸುವುದು ಹೇಗೆ? ಇಂಡಿಯಾ ದೇಶದ ಜನರಿಗೆ ಶಾಂತಿಯನ್ನೂ ಉಚ್ಛ್ರಾಯವನ್ನೂ ಬಯ ಸುವ ಜಾರ್ಜ್ ಸಾರ್ವಭೌಮರ ಇಚ್ಛೆ ಇಂಡಿಯಾಕ್ಕೆ ಸ್ವಯಂ ರಾಜ್ಯಾ ಡಳಿತದ ಹಕ್ಕನ್ನು ಕೊಡುವುದರಿಂದ ಮಾತ್ರ ಸಫಲವಾಗಬಲ್ಲವೆಂದು ದಾದಾ ಭಾಯಿ ವಿಜ್ಞಾಪಿಸಿದನು.

ವಿಧಿ ಶಾಂತಿಯುತವಾದ ಮಾರ್ಗಕ್ಕೆ ವಿರೋಧವಾಗಿದ್ದಂತೆ ತೋರಿತು. ಉದಾರಿಯೂ ಮಹಾಶಯನೂ ಆದ ಲಾರ್ಡ್ ಹಾರ್ಡಿಂಜನ ಮತ್ತು ಆತನ ಪತ್ನಿಯ ಪ್ರಾಣಾಪಹಾರ ಪ್ರಯತ್ನ ಡೆಲ್ಲಿಯಲ್ಲಿ ನಡೆಯಿತೆಂದು ಕೇಳಿ ದಾದಾಭಾಯಿ ದಿಗಿಲುಪಟ್ಟನು. ಅವನ ಮನಸ್ಸು ನಿರುತ್ಸಾಹಗೊಂಡಿತು. ಆದರೆ ಅದೇ ವರುಷ, ಇಂಡಿಯಾದಲ್ಲಿನ ನೌಕರ ಶಾಖೆಯನ್ನು ಕುರಿತು ನಿಯೋಗ ಮಂಡಲಿ (Royal Commission) ಯೊಂದು ನೇಮಕ ವಾದದ್ದನ್ನು ತಿಳಿದು ಆಶಾಭರಿತನಾದನು. ಬಹು ಹಿಂದೆಯೇ ನಮ್ಮ ದೇಶಕ್ಕೆ ದೊರೆಯಬೇಕಾಗಿದ್ದ ನ್ಯಾಯವು ಮಂಡಲಿಯ ಕೆಲಸದಿಂದ ದೊರೆಯ ಲೆಂಬ ಆಶಯವನ್ನು ತನ್ನ ಜನ್ಮದಿನದಂದು ಹೊರಡಿಸಿದ ಸಾರ್ವಜನಿಕ ಪ್ರಕಟನೆಯಲ್ಲಿ ವ್ಯಕ್ತಪಡಿಸಿದನು.

ಈ ವೇಳೆಗೆ ವರ್ಸೋವಾ ಒಂದು ಯಾತ್ರಾಸ್ಥಳವಾಗಿತ್ತು. ದಾದಾ

ಭಾಯಿಯಲ್ಲಿ ಆದರ ವಿಶ್ವಾಸಗಳಿದ್ದ ಭಾರತೀಯರೂ ಇಂಗ್ಲಿಷರೂ ಮಾತ್ರ ವಲ್ಲದೆ ಇಂಡಿಯಾ ಸರಕಾರದ ಅತ್ಯುನ್ನತ ಅಧಿಕಾರಿಗಳೂ ಸಹ ಅಲ್ಲಿಗೆ ಬರು ತ್ತಿದ್ದರು. ಸರ್ ಜಾರ್ಜ್ ಕ್ಲಾರ್ಕ್‌ನ ತರುವಾಯ ಲಾರ್ಡ್ ವಿಲ್ಲಿಂಗ್ ಡನ್ನನೂ ವರ್ಸೋವಾಕ್ಕೆ ಭೇಟಿಕೊಟ್ಟು ದಾದಾಭಾಯಿಯನ್ನು ಗೌರವಿಸಿದನು. ಅಲ್ಲದೆ ಭಾರತ ಜನತೆಯ ಆಶೋತ್ತರಗಳನ್ನು ಕುರಿತ ಆವನ ವಿವರಣೆಯಿಂದ ಪ್ರಯೋಜನ ಹೊಂದಿದರು.

೧೯೧೩ ರ ಫೆಬ್ರುವರಿ ೨೧ ರಲ್ಲಿ ಲಾರ್ಡ್ ಕ್ರ್ಯೂ ಮತ್ತು ಲಾರ್ಡ್ ಹಾರ್ಡಿಂಜ್‌ರಿಗೆ ಒಂದು ಪತ್ರವನ್ನು ಬರದು, ಆಗ ವಿಚಾರಣೆಯನ್ನು ನಡಸು ತ್ತಿದ್ದ ಪಬ್ಲಿಕ್ ಸರ್ವಿಸಸ್ ಕಮಿಷನ್ನಿಗೆ ಸಾರ್ವಜನಿಕ ಉದ್ಯೋಗಗಳ ಆರ್ಥಿಕಾಂಶಗಳನ್ನೂ ಅವುಗಳ ಪರಿಣಾಮಗಳನ್ನೂ ಕುರಿತ ಸಮಾಚಾರವನ್ನು ಒದಗಿಸಬೇಕಾಗಿ ಕೇಳಿದನು. ಅದರಿಂದ ಇಂಡಿಯಾ ದೇಶದ ಜನರ ಪೋಷ ಣೆಗೆ ಉಪಯೋಗವಾಗುವ ಎಷ್ಟು ಹಣ ಯೂರೋಪಿಯನರ ಭಾಗಕ್ಕೆ ಹೋಗುತ್ತಿದೆ ಎಂಬುದನ್ನು ನಿರ್ಧರಿಸಲು ಅನುಕೂಲವಾಗುತ್ತದೆಯೆಂದು ಬರೆದನು.

೧೯೧೪ ರ ಮಹಾ ಯುದ್ಧ ಆರಂಭವಾದಾಗ ದಾದಾಭಾಯಿ ತನ್ನ ದೇಶ ಬಾಂಧವರನ್ನು ಕುರಿತು ಬ್ರಿಟಿಷರಿಗೆ ಸಹಾಯ ಮಾಡುವಂತೆ ಮನವಿ ಯನ್ನು ಹೊರಡಿಸಿದನು. ಇಂಡಿಯಾ ದೇಶದ ರಾಜರೂ ಜನರೂ ಸೈನ್ಯಕ್ಕೆ ಜನರನ್ನೂ ಯುದ್ಧ ನಿಧಿಗೆ ಹಣವನ್ನೂ ಒದಗಿಸಿ ಬ್ರಿಟಿಷ್ ಸಾಮ್ರಾಜ್ಯಕ್ಕೆ ವಿಪುಲವಾದ ಸಹಾಯವನ್ನು ಮಾಡಿದರು.

ದಾದಾಭಾಯಿಯ ಮುಂದಿನ ಜನ್ಮದಿನದ ವೇಳೆಯಲ್ಲಿ ಕೋಲಾಹಲ ಕರವಾದ ಸಂಗತಿಯೊಂದು ನಡೆಯಿತು. ಆಧ್ಯಾತ್ಮ ಕ್ಷೇತ್ರದಿಂದ ರಾಜ ಕೀಯ ಕ್ಷೇತ್ರಕ್ಕೆ ಚಲಿಸಿದ್ದ ಮಿಸೆಸ್ ಆನಿಬೆಸೆಂಟ್ ಇಂಡಿಯಾದಲ್ಲಿ ಹೋಂ ರೂಲ್ ಲೀಗನ್ನು ಸ್ಥಾಪಿಸಲು ಯತ್ನಿಸುತ್ತಿದ್ದಳು. ಇಂಡಿಯದ ನ್ಯಾಷನಲ್ ಕಾಂಗ್ರೆಸಿಗೂ, ಅದರ ಶಾಖೆಯಾದ ಇಂಗ್ಲೆಂಡಿನ ಬ್ರಿಟಿಷ್ ಕಮಿಟಿಗೂ, ಸಹಾಯಕವಾಗಿ ಲೀಗನ್ನು ಸ್ಥಾಪಿಸಲು ನಿರ್ಧರಿಸಿರುವುದಾಗಿ, ೧೯೧೫ ರ ಸೆಪ್ಟೆಂಬರಿನಲ್ಲಿ ಪ್ರಕಟಿಸಲಾಯಿತು. 'ಜನರಿಗೆ ಶಿಕ್ಷಣವೊದಗಿಸಿ ಕಾಂಗ್ರೆಸ್ಸಿನ ಸ್ವಾಡಳಿತದ ಕೇಳಿಕೆಯನ್ನು ಬಲಪಡಿಸುವುದು' ಲೀಗಿನ ಗುರಿಯೆಂದು ಹೇಳ

ಲಾಗಿತ್ತು. ಆ ಮೇಲೆ, ದಾದಾಭಾಯಿ ಅದರ ಅಧ್ಯಕ್ಷನಾಗಿರಲು ಒಪ್ಪಿರುವ ನೆಂಬ ಕೋಲಾಹಲಕರವಾದ ಸುದ್ದಿ ಆಮೇಲೆ ಹೊರಟಿತು.

ವರ್ಸ್ನೋವಾದಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ದಾದಾಭಾಯಿ ಒಂದು ನೈತಿಕ ಶಕ್ತಿಯಾಗಿದ್ದನು. ರಾಜಕೀಯದ ನಿತ್ಯದ ಗೊಂದಲಗಳಿಂದಲೂ ಪಕ್ಷಗಳ ಹೋರಾಟದಿಂದಲೂ ದೂರದಲ್ಲಿದ್ದು ಕೂಟಸ್ಥನಾಗಿದ್ದ ಅವನು ರಾಜಕೀಯದ ಕಾರ್ಯಕ್ಷೇತ್ರಕ್ಕೆ ಇಳಿಯುವನೆಂದು ಯಾರೂ ನಿರೀಕ್ಷಿಸಿರಲಿಲ್ಲ. ಆದ್ದರಿಂದ ಲೀಗಿನ ಅಧ್ಯಕ್ಷನಾಗಲು ಒಪ್ಪಿರುವನೆಂಬ ಪ್ರಕಟನೆಯನ್ನು ಕಂಡು ಅವನ ಸ್ನೇಹಿತರಿಗೆ ಆಶ್ಚರ್ಯವಾಯಿತು. ಕಾಂಗ್ರೆಸಿನ ಧ್ಯೇಯವನ್ನೇ ಗುರಿ ಯಾಗಿಟ್ಟು ಕೊಂಡು, ಅದೇ ಕಾರ್ಯದ ಸಾಧನೆಗಾಗಿ, ಮತ್ತೊಂದು ಸಂಸ್ಥೆ ಯನ್ನು ಸ್ಥಾಪಿಸುವುದು ಅತ್ಯಾಚಾರವೆಂದು ಅನೇಕ ಮಂದಿ ಕಾಂಗ್ರೆಸಿಗರು ಬಗೆದರು. ವಾಚಾ ದಾದಾಭಾಯಿಯನ್ನು ವಿಚಾರಿಸಿದನು. "ಹೋಂರೂ ಲ್‌ಲೀಗಿಗೆ ನೀನು ಅಧ್ಯಕ್ಷನಾಗಿರುವುದರ ಸಮಾಚಾರವೇನು? ಮಿಸೆಸ್ ಬೆಸಂಟ್ ಬಹುವಾಗಿ ಪ್ರಚಾರ ಮಾಡುತ್ತಿದ್ದಾಳಲ್ಲ. ಬೆಸಂಟಳ ಕಾರ್ಯರೀತಿ ಗಳನ್ನು ನಾವು ಒಪ್ಪುವುದಿಲ್ಲ. ಕಾಂಗ್ರೆಸ್ ಚಳವಳಿಗೆ ಬೆಂಬಲ ನೀಡಲು ಆಕೆ ತೀರ ತಡವಾಗಿ ಮುಂದೆ ಬಂದಿರುತ್ತಾಳೆ."

ಕಾಂಗ್ರೆಸ್ ಸಹೋದ್ಯೋಗಿಗಳು ಮಾತ್ರವಲ್ಲ, ಇಡೀ ಪ್ರಪಂಚವೇ ದಾದಾಭಾಯಿ ನಿಜವಾಗಿಯೂ ಅಧ್ಯಕ್ಷತನವನ್ನು ಒಪ್ಪಿಕೊಂಡಿದ್ದಾನೆಯೆ ಎಂಬುದನ್ನು ತಿಳಿಯಲು ತವಕಪಡುತ್ತಿತ್ತು. ಆದ್ದರಿಂದ ಸೆಪ್ಟೆಂಬರ್ ೨೮ರಲ್ಲಿ ಅವನು, ಕೆಲವು ಷರತ್ತುಗಳ ಮೇಲೆ ತಾನು ಅಧ್ಯಕ್ಷನಾಗಿರಲು ಒಪ್ಪಿರುವುದು ನಿಜವೆಂದು ಪ್ರಕಟಿಸಿದನು.

ಅದು ನಡೆದದ್ದು ಹೀಗೆ. ದಾದಾಭಾಯಿ, ಸುಬ್ರಹ್ಮಣ್ಯ ಅಯ್ಯರ್ ಮತ್ತು ವೆಡ್ಡರ್‌ಬರ್ನ್ ಮೂವರೂ ಲೀಗನ್ನು ಸೇರಬೇಕೆಂದು ಬೆಸೆಂಟಳ ಅಪೇಕ್ಷೆಯಾಗಿತ್ತು. ದಾದಾಭಾಯಿಯನ್ನು ಒಪ್ಪಿಸಲು ಆಕೆ ತನ್ನ ಪ್ರತಿ ನಿಧಿಯಾದ ಬಿ. ಪಿ. ವಾಡಿಯಾನೊಡನೆ ವರ್ಸ್ನೋವಾಕ್ಕೆ ಹೋದಳು. ಐರ್ಲೆಂಡಿಗೆ ಹೋಂರೂಲ್ ಕೊಡಬೇಕೆಂದು ಬಹುಕಾಲದಿಂದ ವಾದಿಸಿದ್ದ ನಮ್ಮ ನಾಯಕನು ಇಂಡಿಯಾದಲ್ಲೂ ಹೋಂರೂಲ್ ಲೀಗ್ ಸ್ಥಾಪನೆ ಯಾಗುವುದನ್ನು ಸ್ವಾಗತಿಸಿದನು. ಸರಿಯಾಗಿ ಯೋಚಿಸಿಯೇ ಅದರ

ಅಧ್ಯಕ್ಷನಾಗಲು ಒಪ್ಪಿದನು. ಆ ವಯಸ್ಸಿನಲ್ಲಿ ತನಗೆ ಚಟುವಟಿಕೆಯಾಗಿ ಕೆಲಸಮಾಡಲು ಸಾಧ್ಯವಿಲ್ಲವಾದ್ದರಿಂದ ಯಾವ ತರಹದ ಕೆಲಸವನ್ನಾಗಲಿ, ಭಾಷಣವನ್ನಾಗಲಿ, ಬರಹವನ್ನಾಗಲಿ, ತನ್ನಿಂದ ನಿರೀಕ್ಷಿಸಕೂಡದೆಂದು ಷರತ್ತು ಮಾಡಿದನು. ಅಲ್ಲದೆ ಲೀಗನ್ನು ಕಾಂಗ್ರೆಸ್ಸಿಗೆ ವಿರೋಧವಾಗಿ ಹೂಡಕೂಡದೆಂದು ಬೆಸೆಂಟಳಿಗೆ ತಿಳಿಸಿದನು. ಅದಕ್ಕೆ ಆಕೆ ಒಪ್ಪಿದಳು.

ಅಧ್ಯಕ್ಷನಾಗಲು ಒಪ್ಪಿದುದರಿಂದ ಕಾಂಗ್ರೆಸ್ಸಿಗೆ ವಿರೋಧವಾಗಿ ಕೆಲಸ ಮಾಡುವವರಿಗೆ ಬೆಂಬಲ ಕೊಟ್ಟಂತಾಗುವುದೆಂದು ವಾಚಾ ಆಕ್ಷೇಪಣೆ ಮಾಡಿದನು. ಅನೇಕ ವೇಳೆ ಮೋಸಕ್ಕೆ ಒಳಗಾಗಿದ್ದರೂ, ವೃಥಾ ಸಂಶಯಕ್ಕೆ ಎಡೆಗೊಡಬಾರದೆಂಬುದು ದಾದಾಭಾಯಿಯ ನೀತಿಯಾಗಿತ್ತು.

ಕಾಂಗ್ರೆಸ್ಸಿನ ವಿಶ್ವಾಸವನ್ನು ಪಡೆದು ಲೀಗನ್ನು ಆರಂಭಿಸಬೇಕೆಂಬುದು ಬೆಸಂಟಳ ಇಚ್ಛೆಯಾಗಿತ್ತು. ಆದರೆ ಸಂಸ್ಥೆಯನ್ನು ನಿಧಾನವಾಗಿ ನಡಸಿ ಕೊಂಡು ಹೋಗಲು ನಿರ್ಧರಿಸಿದಳು. ಈ ವಿಳಂಬದಿಂದ ದಾದಾಭಾಯಿ ವಿಷಮಪರಿಸ್ಥಿತಿಯಿಂದ ಪಾರಾದನು. ೧೯೧೬ರಲ್ಲಿ ಲೀಗು ವಿಧಿವತ್ತಾಗಿ ಸ್ಥಾಪನೆಯಾಗುವ ವೇಳೆಗೆ ದಾದಾಭಾಯಿಯ ದಿನ ಮುಗಿದುಹೋಗಿತ್ತು.

## ೩೬. ಕೊನೆ

೧೯೧೬ನೆಯ ಇಸವಿ ದಾದಾಭಾಯಿಯ ಜೀವನದಲ್ಲಿ ಅತ್ಯಂತ ಶಾಂತಿಮಯವಾದ ವರುಷವಾದರೂ ಅಪೂರ್ವವಾದ ಒಂದು ಸಂಗತಿಗಾಗಿ ಸ್ಮರಣೀಯವಾಗಿದೆ. ಬೊಂಬಾಯಿ ವಿಶ್ವವಿದ್ಯಾನಿಲಯದವರು ದಾದಾಭಾಯಿ ಮತ್ತು ಫಿರೋಜ್ ಷಾ ಮೆಹತಾ ಇವರುಗಳಿಗೆ ಡಾಕ್ಟರ್ ಆಫ್ ಲಾಸ್ (ಸಕಲ ಶಾಸ್ತ್ರ ಕೋವಿದ) ಎಂಬ ಗೌರವ ಪ್ರಶಸ್ತಿಯನ್ನು ದಯಪಾಲಿಸಬೇಕೆಂದು ನಿರ್ಧರಿಸಿದರು. ಆ ಕೆಲಸ ಇದಕ್ಕೆ ಮೊದಲೇ ಆಗಬೇಕಾಗಿತ್ತು. ಕಾಲದ ದೃಷ್ಟಿಯಿಂದ ದಾದಾಭಾಯಿ ವಿಶ್ವವಿದ್ಯಾನಿಲಯಗಳು ಹುಟ್ಟುವುದಕ್ಕೂ ಮುಂಚಿನವನು. ಅದರ ಅವನೂ ಅವುಗಳ ಆವಿರ್ಭಾವಕ್ಕೆ ಕಾರಣವಾದ ಪುನರುಜ್ಜೀವನದ ಫಲವೇ. ಅಲ್ಲದೆ ಅವನು ಮೊದಲಿಂದಲೂ ಆ ನೂತನ ಬೌದ್ಧಿಕ ಜೀವನದಲ್ಲಿ ಭಾಗವಹಿಸಿದ್ದನು. ಅವನ ಜೀವನ ಆ

ಮಹಾಪುನರಭ್ಯುತ್ಥಾನದ ಚರಿತ್ರೆಯ ಸಾರಸಂಗ್ರಹವಾಗಿದೆ. ಎಂದು ವಿದ್ವಾಂಸನೂ ವಿಶ್ವವಿದ್ಯಾನಿಲಯದ ಉಪಕುಲಪತಿಯೂ ಆದ ರೆವರೆಂಡ್ ಡಾ|| ಡಿ. ಮ್ಯಾಕ್‌ಕಿಚನ್ ಹೇಳಿದನು. ವಿಶ್ವವಿದ್ಯಾನಿಲಯದ ಪ್ರಶಾಂತವಾದ ಪಾಂಡಿತ್ಯಯುತವಾದ ವಾತಾವರಣದಲ್ಲಿ ಭಾವೋದ್ರೇಕ ಸ್ವಭಾವದ ರಾಜಕೀಯ ವಿಚಾರಕ್ಕೆ ಪ್ರವೇಶವಿಲ್ಲ. ಆದರೂ ದಾದಾಭಾಯಿಯ ರಾಜಕೀಯ ಜೀವನವನ್ನು ಕುರಿತು ಪ್ರಸ್ತಾವಿಸದಿರುವುದು ಅನಿವಾರ್ಯವಾಯಿತು.

ಇಂಡಿಯಾ ಸರಕಾರದ ಸಮಸ್ಯೆಗಳಲ್ಲಿ ಬಹುವಾಗಿ ಆಸಕ್ತಿ ವಹಿಸಿದ ಆತನ ಜೀವನಯಾತ್ರೆಯನ್ನು ಕುರಿತು ಇಷ್ಟು ಮಾತ್ರ ಹೇಳಲು ಅನುಮತಿ ಬೇಡುತ್ತೇನೆ. (ಎಂದು ಉಪಕುಲಪತಿ ನುಡಿದನು). ಆತನ ಜೀವನದ ಪ್ರತ್ಯಂಶದಲ್ಲೂ ಸ್ಫುಟವಾಗಿ ಕಾಣಬರುತ್ತಿದ್ದ ವೈಯಕ್ತಿಕವಾದ, ಮತ್ತು ಉದಾತ್ತವಾದ ಗುಣ ಶೀಲಗಳೇ ಆ ಯಾತ್ರೆಯ ಘನತೆ ಗೆಲವುಗಳಿಗೆ ಬಹುಮಟ್ಟಿಗೆ ಕಾರಣ. ಆತನ ಸ್ಪಷ್ಟವಾದ ಪ್ರಾಮಾಣಿಕತೆಯನ್ನೂ, ಸರಳೋದ್ದೇಶಗಳನ್ನೂ, ತನ್ನ ದೇಶಬಾಂಧವರ ಅವಶ್ಯಕತೆಗಳನ್ನೂ ಉತ್ಕಾಂಕ್ಷೆಗಳನ್ನೂ ಬ್ರಿಟಿಷರಿಗೆ ವಿವರಿಸುವುದರಲ್ಲಿ ನಿರತನಾಗಿರುವ ಆತನ ನಿಃಸ್ವಾರ್ಥಯುತವಾದ ದೇಶಾಭಿಮಾನವನ್ನೂ ಗ್ರಹಿಸಲು, ನಾನಾ ಬಗೆಯ ರಾಜಕೀಯ ಅಭಿಪ್ರಾಯ ಭೇದಗಳನ್ನು ಹೊಂದಿದ ಜನರಿಗೂ ಹೆಚ್ಚು ಕಾಲ ಬೇಕಾಗಲಿಲ್ಲ. ಬ್ರಿಟಿಷ್ ರಾಜಕೀಯ ಜೀವನದಲ್ಲಿ ಶೀಲಕ್ಕೆ ಪ್ರಮುಖವಾದ ಸ್ಥಾನವಿದೆ. ಈ ವಿಶ್ವವಿದ್ಯಾನಿಲಯದಲ್ಲಿರುವ ನಮಗೆ ರಾಜಕೀಯದೊಡನೆ ಸಂಬಂಧವಿಲ್ಲ; ಆದರೆ ಶೀಲದ ವಿಚಾರದಲ್ಲಿ ನಮಗೆ ಬಹುವಾದ ಆಸಕ್ತಿಯಿದೆ. ಆದ್ದರಿಂದ ಈ ದಿವಸ ನಾವು ದಾದಾಭಾಯಿಗೆ ನಮ್ಮ ಗೌರವದ ಕಾಣಿಕೆಯನ್ನು ಸಲ್ಲಿಸುತ್ತೇವೆ. ಎಡರುಗಳನ್ನೂ ಆಶಾಭಂಗಗಳನ್ನೂ ಲೆಕ್ಕಿಸದೆ, ತನ್ನ ದೃಢವಾದ ನಂಬಿಕೆಗಳನ್ನು ಕಾಪಾಡಿಕೊಳ್ಳುವುದರಲ್ಲಿ ತೋರಿದ ನಿರಂತರವಾದ ಶ್ರದ್ಧೆಗಾಗಿಯೂ, ನಾನಾ ಹೋರಾಟಗಳಿಗೆ ಸ್ಫೂರ್ತಿಯಿತ್ತ ಆತನ ನಿಃಸ್ವಾರ್ಥವಾದ ದೇಶಪ್ರೇಮಕ್ಕಾಗಿಯೂ ಜನರ ಪ್ರೀತಿಗಾಗಿಯೂ ನಾವಿಂದು ಆತನನ್ನು ಸನ್ಮಾನಿಸುತ್ತಿದೇವೆ.

ದಾದಾಭಾಯಿಯ ಸ್ವಯಂರಾಜ್ಯಾಡಳಿತದ ಕನಸು ನಿಜವಾಗುವ ದಿನ ಸಮೀಪಿಸುತ್ತಿತ್ತು. ವೈಸರಾಯ್ ಮತ್ತು ಸೆಕ್ರೆಟರಿ ಆಫ್ ಸ್ಟೇಟ್ ಇವರ ನಡುವೆ ಸಮಾಲೋಚನೆ ನಡೆಯುತ್ತಿತ್ತು. ಇಂಡಿಯಾದಲ್ಲೂ ಇಂಗ್ಲೆಂಡಿನಲ್ಲೂ ಕಾಂಗ್ರೆಸ್ ಕೆಲಸಗಾರರೂ ಮತ್ತು ಅವರ ಬ್ರಿಟಿಷ್ ಮಿತ್ರರೂ ಭಾರತದ ಉದಯೋನ್ಮುಖರಾದ ಜನರ ಉತ್ಕಾಂಕ್ಷೆಗಳನ್ನು

ಪೂರೈಸುವಂಥ ರಾಜ್ಯವ್ಯವಸ್ಥೆಯ ಸುಧಾರಣೆಗೆ ಸಲಹೆಗಳನ್ನು ತಯಾರಿಸುವುದರಲ್ಲಿ ತೊಡಗಿದ್ದರು. ಸ್ವಯಂ ರಾಜ್ಯಾಡಳಿತದ ಆವಶ್ಯಕವಾದ ಒಂದು ತತ್ತ್ವವನ್ನು ಲಾರ್ಡ್ ಹಾರ್ಡಿಂಜ್ ಆಗಲೆ ಸೂಚಿಸಿದ್ದನು. ಅದೇನೆಂದರೆ, ಮೊದಲು ಪ್ರಾಂತೀಯ ಸ್ವಯಮಾಡಳಿತದ ವ್ಯವಸ್ಥೆ, ಅನಂತರ ಅಧಿಕಾರಿಗಳಿಂದ ಪ್ರಜಾಪ್ರತಿನಿಧಿಗಳಿಗೆ ಕ್ರಮಶಃ ಅಧಿಕಾರದ ವರ್ಗಾವಣೆ. ಪ್ರಮುಖವಾದ ಈ ವಿಷಯದಲ್ಲಿ ಭಾರತೀಯರ ಒಕ್ಕೊರಲಿನ ಕೇಳಿಕೆಗಳಿಗೆ ಬ್ರಿಟಿಷ್ ಜನರೂ ಪಾರ್ಲಿಮೆಂಟೂ ಕಿವಿಗೊಡಬಹುದೆಂಬ ನಂಬಿಕೆಯಿತ್ತು.

ಇಂಡಿಯವನ್ನು ಸ್ವಯಂ ರಾಜ್ಯಾಡಳಿತದ ಮಾರ್ಗದಲ್ಲಿ ಇರಿಸುವ ಸುಧಾರಣೆಗಳ ಪ್ರತಿಷ್ಠಾಪನೆಯನ್ನು ತನ್ನ ಜೀವಿತಕಾಲದಲ್ಲಿ ನೋಡಬೇಕೆಂಬ ಆಸೆಯಿತ್ತು ದಾದಾಭಾಯಿಗೆ. ೧೯೧೭ನೆಯ ಆಗಸ್ಟ್ ೨೦ರ ಪ್ರಕಟನೆ ಹೊರಬೀಳುವುದಕ್ಕೆ ಎರಡು ತಿಂಗಳ ಮುಂಚೆ, ಇದ್ದಕಿದ್ದಂತೆ, ಆತನು ಅನಾರೋಗ್ಯಕ್ಕೆ ಎಡೆಯಾದನು. ಆ ಪ್ರಕಟನೆಯಲ್ಲಿ, ಇಂಡಿಯಾದಲ್ಲಿ ಜವಾಬ್ದಾರಿ ಸರಕಾರ ಪದ್ಧತಿಯನ್ನು ಪ್ರಗತಿಪರನಾಗಿ ಸಾಧಿಸುವ ದೃಷ್ಟಿಯಿಂದ, ಸ್ವಯಮಾಡಳಿತ ಸಂಸ್ಥೆಗಳನ್ನು ಕ್ರಮಶಃ ಬೆಳಸುವುದಕ್ಕಾಗಿ, ಆಡಳಿತದ ಪ್ರತಿ ಶಾಖೆಯಲ್ಲೂ ಭಾರತೀಯರನ್ನು ಹೆಚ್ಚು ಹೆಚ್ಚಾಗಿ ಸೇರಿಸಿಕೊಳ್ಳುವ ಭರವಸೆಯನ್ನು ನೀಡಲಾಗಿತ್ತು. ಎಂದರೆ ದಾದಾಭಾಯಿಯ ಕೇಳಿಕೆಗಳಿಗೆಲ್ಲ ಅದರಲ್ಲಿ ಬಹುಮಟ್ಟಿಗೆ ಪರಿಹಾರ ದೊರೆತಿತ್ತೆಂದು ಹೇಳಬಹುದು.

ದಾದಾಭಾಯಿ ಸರ್ವಸಾಮಾನ್ಯವಾದ ನಿಶ್ಶಕ್ತಿಗೆ ಒಳಗಾಗಿದ್ದರೂ ಆತನ ಸ್ಥಿತಿ ಚಿಂತಾಜನಕವಾಗಿತ್ತು. ವರ್ಸೋವಾದ ಮನೆಯಿಂದ ಆತನನ್ನು ಬೊಂಬಾಯಿಯ ಕಂಬಲಾ ಗುಡ್ಡದ ಪಾಲಿಟಾನ ಬಂಗಲೆಗೆ ಸಾಗಿಸಿದರು. ಅಲ್ಲಿ, ಜೂನ್ ೩೦ರಲ್ಲಿ, ಅಂದಿನ ಭಾರತೀಯ ಶ್ರೇಷ್ಠರಲ್ಲಿ ಶ್ರೇಷ್ಠನಾದ ದಾದಾಭಾಯಿಯು ಶಾಂತಚಿತ್ತನಾಗಿ ಕಾಲವನ್ನೈದಿದನು. ಆ ಸಮಯದಲ್ಲಿ, ಕಾಶ್ಮೀರದಲ್ಲಿದ್ದ ಆತನ ಇಬ್ಬರು ಹೆಣ್ಣುಮಕ್ಕಳನ್ನುಳಿದು, ಕುಟುಂಬದ ಇತರ ಜನರೆಲ್ಲ ಸಮೀಪದಲ್ಲಿದ್ದರು.

ಪಾರಸೀ ಮತ ಧರ್ಮದ ವಿಧಿಗಳಿಗನುಸಾರವಾಗಿ ಕಳೇಬರವನ್ನು ಶ್ಮಶಾನದಲ್ಲಿ ಇರಿಸಿದ ಮೇಲೆ, ಸರ್. ನಾರಾಯಣ ಚಂದಾವರ್ಕರ್ ಗೌರವದ

ಕಾಣಿಕೆಯನ್ನು ಅರ್ಪಿಸಿದನು—

ಆತನ ಬದುಕನ್ನೂ ನಡತೆಯನ್ನೂ ನೋಡಿದರೆ, ಆತನು ತನ್ನ ಜೀವನ ಯಾತ್ರೆಯಲ್ಲಿ, ತಾನು ಎಸಗಿದ ಎಲ್ಲ ಕಾರ್ಯಗಳಲ್ಲಿ, ಅನುಭವಿಸಿದ ಎಲ್ಲ ಕಷ್ಟಗಳಲ್ಲಿ, ಬೋಧಿಸಿದ ಎಲ್ಲ ವಿಷಯಗಳಲ್ಲಿ, ಸರೋಷ್ಟ್ರ ಪ್ರವಾದಿಯ ಧರ್ಮದ ರೂಪವೇ ಆಗಿದ್ದನೆಂದು ನಾನು ನ್ಯಾಯವಾಗಿಯೂ ಸತ್ಯವಾಗಿಯೂ ಹೇಳಬಹುದಲ್ಲವೇ ? ಯಾಕೆಂದರೆ ಎಲ್ಲರಿಗಿಂತ ಹೆಚ್ಚಾಗಿ ಈತನು ನಿರ್ಮಲ ಚಿತ್ತನು, ನಿರ್ಮಲೋಕ್ತಿಯಿಂದ ಕೂಡಿದವನು, ಮತ್ತು ಪರಿಶುದ್ಧ ಕಾರ್ಯತತ್ಪರನು ... ೯೩ ವರುಷಗಳ ಕೆಳಗೆ, ಭಾರತ ದೇಶದ ಮೇಲೆ ಉದಯಿಸಿದ ರವಿಯು ಈಗ ಅಸ್ತನಾಗಿದ್ದಾನೆ, ಆದರೆ ಅಸ್ತನಾದವನು ಪುನಃ, ಪುನರುಜ್ಜೀವಿತ ಭಾರತದ ರೂಪದಲ್ಲಿ ಉದಯಿಸುವನೆಂದು ಹೇಳುತ್ತೇನೆ.

ಪ್ರಪಂಚದ ನಾಲ್ಕು ದಿಕ್ಕುಗಳಿಂದಲೂ ಗೌರವದ ಮಾತುಗಳು ಕೇಳಿಬಂದವು, ಅನೇಕ ಸಾರ್ವಜನಿಕ ಸಭೆಗಳು ನಡೆದವು, ಅನೇಕ ಸ್ಮಾರಕಗಳು ಏರ್ಪಟ್ಟವು, ಈಗಲೂ ಏರ್ಪಡುತ್ತಿವೆ. ಆದರೆ ಆತನು ಬಿಟ್ಟುಹೋದ ಪುನರುಜ್ಜೀವಿತ ಭಾರತಕ್ಕಿಂತಲೂ ದೊಡ್ಡದಾದ ಸ್ಮಾರಕ ಯಾವುದಿದ್ದೀತು?

---